

# ತೊಂಬತ್ತರಲ್ಲೂ ಯುವಸ್ಫೂರ್ತಿಯ ರಘೂತ್ತಮ ಪುಟ್ಟಿ

ಕಲಾವಿದ ರಘೂತ್ತಮ ಪುಟ್ಟಿ ಹುಟ್ಟಿದ್ದು ೧೯೧೪ರಲ್ಲಿ. ಊರು ತುಮಕೂರು ಜಿಲ್ಲೆಯ ನಾಗನಹಳ್ಳಿ. ಮಂದಾರ ಹೂವನ್ನು ಡ್ರಾಯಿಂಗ್ ಪರೀಕ್ಷೆಯಲ್ಲಿ ರಚಿಸಿದ್ದನ್ನು ಕಂಡ ಗುರು ಶ್ರೀ ಗಾಣೇಕರ್ ಬೆನ್ನು ತಟ್ಟಿ ಒಳ್ಳೆಯ ಕಲಾವಿದನಾಗುವೆ, ಎಂದು ಬೆಂಬಲಿಸಿದರು. ಹದಿನೇಳನೆಯ ವಯಸ್ಸಿಗೆ ಮೆಟ್ರಿಕ್ ವಿದ್ಯಾಭ್ಯಾಸವನ್ನು ಕೈಬಿಟ್ಟರು. ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಕಲಾಶಾಲೆಯಲ್ಲಿ ಮುಂದಿನ ವ್ಯಾಸಂಗಕ್ಕಾಗಿ ಸೇರಿದರು. ಆರ್ಥಿಕ ಮುಗ್ಗಟ್ಟಿನಿಂದಾಗಿ ಒಂದೂವರೆ ತಿಂಗಳು ಮಾತ್ರ ವಿದ್ಯಾರ್ಥಿಯಾಗಿದ್ದರು. ಕಲಾ ಉಪನ್ಯಾಸಕರಾದ ಶ್ರೀ ವೈ. ಸುಬ್ರಹ್ಮಣ್ಯರಾಜು ಅವರಿಂದ ಅಮೂಲ್ಯ ಮಾರ್ಗದರ್ಶನ ಪಡೆದರು. ವಿದ್ಯಾ ಇಲಾಖೆಯಲ್ಲಿ ೩೦ ವರ್ಷ ಸೇವೆ ಸಲ್ಲಿಸಿ ೧೯೬೯ರಲ್ಲಿ ನಿವೃತ್ತರಾದರು. ಸುಬ್ರಹ್ಮಣ್ಯರಾಜು ಅವರ ಮುಂದಾಳತ್ವದಲ್ಲಿ ಒಂದು ವಾರ ಏಕವ್ಯಕ್ತಿ ಪ್ರದರ್ಶನ ಮೈಸೂರಿನಲ್ಲಿ ನಡೆಯಿತು. ಅಲ್ಲದೆ ಖ್ಯಾತ ರಷ್ಯನ್ ಕಲಾವಿದ ನಾಲಾಬಂದಿಯನ್ ಇವರ ಹಂಪೆಯ ಕೃಷ್ಣದೇವಾಲಯವನ್ನು ಕಂಡು ಮೆಚ್ಚಿದ. ನಂತರ ವೆಂಕಟಪ್ಪ ಕಲಾ ಗ್ಯಾಲರಿಯು ಸೇರಿದಂತೆ ೩೩ ಏಕವ್ಯಕ್ತಿ ಪ್ರದರ್ಶನಗಳನ್ನು ಮಾಡಿದ್ದಾರೆ. ಅವರದೇ ಆದ ವಿಶಿಷ್ಟ ಶೈಲಿಯ ರಚನೆ ಗಮನಾರ್ಹ. ಗುಜರಾತಿನ ನರ್ಮದಾ ನದಿ ದಂಡೆಯಲ್ಲಿ ಕುಳಿತು ರಚಿಸಿದ ೨೫ ವರ್ಣ ಚಿತ್ರಗಳು ಹಾಗೂ ೧೯೭೮ರಿಂದ ೧೯೮೮ರವರೆಗೆ ಸೂಪಾ, ಗಣೇಶ ಗುಡಿ, ಅಂಬಿಕಾನಗರ, ಹೊರನಾಡು, ಕಳಸ, ಕೊಟ್ಟಿಗೆಹಾರ, ಚಿಕ್ಕಮಗಳೂರು ಮತ್ತಿತರ ಹೊಯ್ಸಳ ದೇವಾಲಯಗಳ ರಚನೆ ಚಿರಸ್ಮರಣೀಯ.

ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನವರು ಇವರಿಗೆ ಚಿತ್ರಕಲಾ ವಿಭೂಷಣ ಪ್ರಶಸ್ತಿಯನ್ನಿತ್ತು ಸನ್ಮಾನಿಸಿದ್ದಾರೆ. ೨೦೦೧ರಲ್ಲಿ ಪುಟ್ಟಿ ಅವರು ಲಲಿತಕಲಾ ಅಕಾಡೆಮಿ ಪ್ರಶಸ್ತಿ ಪುರಸ್ಕೃತರೂ ಕೂಡ.

■ ಪಿ. ಎಮ್. ರಾಜನ್



ಪುಟ್ಟಿಯವರ ಇತ್ತೀಚಿನ ಕೃತಿ ಎಂ. ಕೆ. ಇಂದಿರಾ (ಭಾವಚಿತ್ರ)



ಪಶ್ಚಿಮವಾಹಿನಿಯ ಸ್ನಾನ ಘಟ್ಟ (೧೯೮೦, ತೈಲವರ್ಣ)



ಬಿಳಿಗಿರಿಯ ಪ್ರಶಾಂತ ಕೊಳ (ತೈಲವರ್ಣ)



ಹಾರ್ನಹಳ್ಳಿಯ ಹೊಯ್ಸಳ ದೇವಾಲಯ (೧೯೭೮, ಜಲವರ್ಣ)



ಹಾಳು ಹಂಪಿಯ ಕಲ್ಲಿನ ತೇರು (೧೯೭೫, ಜಲವರ್ಣ)

# ಹೊಸತು

## ಒಳಗೇನಿದೆ.....




ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಸ್ಯಾಮ್, ರಾಮಚಂದ್ರ ಕೊಪ್ಪಲು, ರವಿಕುಮಾರ್ ಅಜ್ಜೇಪುರ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಮುಖಚಿತ್ರ : ವಿ. ಜಿ. ಅಂಧಾನಿ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಒ**ಂದು ವರ್ಷದ ಹಿಂದೆ ಇರಾಕನ್ನು ಕಂಡವರು ಭಾವಿಸಲು ಸಾಧ್ಯವಿರದಿದ್ದ ರೀತಿಯಲ್ಲಿ ಆ ದೇಶದ ವಿದ್ಯಮಾನಗಳು ವಿಕಾಸವಾಗುತ್ತಿವೆ. ಅಪ್ಪಟ ಸುಳ್ಳುಗಳನ್ನು ಹೇಳಿ ಇರಾಕನ್ನು ಲೂಟಿ ಮಾಡಲು ಧಾವಿಸಿಬಂದ ಅಮೆರಿಕಾ ಮತ್ತು ಬ್ರಿಟನ್ ಸ್ವಲ್ಪ ಒದೆತ ತಿನ್ನುತ್ತಿರುವುದು ಸಮಾಧಾನ ತರುವ ಸಂಗತಿ. ವಾಜಪೇಯಿ-ಮುಷರ್ರಫ್ ಸಹ ಭಯೋತ್ಪಾದನೆಯ ವಿರುದ್ಧ ತಾವು ಸತತವಾಗಿ ಹೋರಾಡುವವರೆಂದು ಆಗಾಗ ಹೇಳುತ್ತಿರುತ್ತಾರೆ. ಇರಾಕಿನ ನಾಗರಿಕರ ಮೇಲೆ ನಡೆಯುತ್ತಿರುವ ಹಲ್ಲೆಯನ್ನು ಅವರು ಖಂಡಿಸುವುದಿಲ್ಲ. ಪ್ಯಾಲಿಸ್ಟೈನ್‌ನೊಳಕ್ಕೆ ನುಗ್ಗಿ ನಾಯಕರನ್ನು ಹತ್ಯೆಗೈದಾಗಲೂ ಇಸ್ರೇಲಿನ ವಿರುದ್ಧ ಅವರು ಒಂದು ಮಾತನ್ನೂ ಹೇಳಲಾಗದಷ್ಟು ಪರಾವಲಂಬಿಗಳಾಗಿದ್ದಾರೆ. ಹಾಗೆ ನೋಡಿದರೆ ಭಯೋತ್ಪಾದನೆಯನ್ನು ಕುರಿತ ಸಮಗ್ರ ವ್ಯಾಖ್ಯಾನಕ್ಕೆ ಇರಾಕ್ ಮತ್ತು ಪ್ಯಾಲಿಸ್ಟೈನ್ ನಿರ್ಣಾಯಕವಾದ ಸಾಮಗ್ರಿಯನ್ನೊದಗಿಸುತ್ತಿವೆ. ವಿಶ್ವಸಂಸ್ಥೆಯ ಸೋಲು ಭಯೋತ್ಪಾದನೆಗೆ ಮೂಲಕಾರಣ; ಆ ಸಂಸ್ಥೆಯ ಮಹಾ ಕಾರ್ಯದರ್ಶಿಯ ಮೌನವು ಭಯೋತ್ಪಾದಕತೆಗೆ ಹಿನ್ನೆಲೆ ರಚಿಸಿ ಕೊಡುತ್ತಿದೆ. ಬಾಯಿ ಮಾತಿನಲ್ಲಿ ಭಯೋತ್ಪಾದಕತೆಯು ಹೇಯ, ಅಮಾನವೀಯ, ಪಾತಕ, ಎಂದೆಲ್ಲಾ ಹೇಳಿ ಬಿಡುವುದು ಸುಲಭ. ಆದರೆ ಜನರನ್ನು ಆ ದಿಕ್ಕಿಗೆ ತಳ್ಳುವ ಸನ್ನಿವೇಶವನ್ನು ಪರಿಹರಿಸದೆ, ಸುಮ್ಮನೆ ಉದಾತ್ತವೆಂದು ತೋರುವ ಮಾತುಗಳನ್ನಾಡುವುದು ಮೌಲ್ಯಯುತವೆನಿಸುವುದಿಲ್ಲ. ಅಮೆರಿಕಾದ ಯಾವನೋ ಸೈನಿಕನು ಕೊಲ್ಲಲ್ಪಟ್ಟರೆ ಮಾಧ್ಯಮಗಳಲ್ಲಿ ಅದು ವರದಿಯಾಗುವ ವಿಧಾನವೇ ಹೇಸಿಗೆಯನ್ನುಂಟುಮಾಡುತ್ತದೆ. ''ಭಯೋತ್ಪಾದಕ ಶತ್ರು ಹೀಗೆ ಅಮೆರಿಕಾದ ಸೈನಿಕನನ್ನು ಕೊಂದಿದ್ದಾನೆ'' ಎಂಬ ಮಾಧ್ಯಮಗಳ ಅದ್ಭುತ ನುಡಿಯು ನಮ್ಮನ್ನು ವಿವೇಚನಾರಹಿತರನ್ನಾಗಿ ಮಾಡಬಾರದು. ಇರಾಕಿನ ಪ್ರಜೆ ತನ್ನ ದೇಶದಲ್ಲಿ ಶತ್ರುವಾಗಿ ಬಿಂಬಿಸಲ್ಪಡುತ್ತಾನೆಂಬುದು ಅತ್ಯಂತ ವಿಚಿತ್ರವಾದ ಪ್ರಸಂಗ. ಅಮೆರಿಕಾದ ಸೈನಿಕ ಇರಾಕಿನ ನಿಜವಾದ ಶತ್ರು. ಭಾರತದ ಮಾಧ್ಯಮಗಳು ಕೂಡ ಬುಷ್ - ಬ್ಲೇರ್ ಮಾಧ್ಯಮಗಳಂತೆ ಒದರುವುದು ಅಸಹ್ಯಕರವಾಗಿದೆ.

ಏಪ್ರಿಲ್ ಒಂದರ ಒಂದು ಘಟನೆಯನ್ನು ನೋಡಿ : ಇರಾಕಿನ ಫಲ್ಲುಜಾ ಬಳಿ ಐವರು ಅಮೆರಿಕಾ ಸೈನಿಕರನ್ನು ಕೊಂದ ಇರಾಕಿ ಹೋರಾಟಗಾರರು ತಮ್ಮೆಲ್ಲ ಅದಮ್ಯ ಕೋಪವನ್ನು ವಿಕಟವಾಗಿ ತೋರುವ ರೀತಿಯಲ್ಲಿ ಪ್ರದರ್ಶಿಸಿದರು. ದಿನನಿತ್ಯ ಕೊಲ್ಲಲ್ಪಡುವ ತಮ್ಮ ದೇಶದ ಸಾಮಾನ್ಯ ಜನರಿಗೆ ರಕ್ಷಣೆ ನೀಡಲು ಅಸಮರ್ಥರಾಗಿರುವ ಈ ಹೋರಾಟಗಾರರ ಮನಸ್ಸಿನ ಆಳಕ್ಕೆ ನಾವು ಹೋಗಲು ಸಾಧ್ಯವಿಲ್ಲದಿರುವುದು ಪಾಶ್ಚಿಮಾತ್ಯರ ಮಾಧ್ಯಮಗಳ ದುಷ್ಪ್ರಭಾವದಿಂದ. ಈ ಹೋರಾಟಗಾರರ ಕಹಿ ಅನುಭವ ಅವರನ್ನು ಎಂತಹ ಸೇಡಿನ ಅಂಚಿಗೆ ನೂಕಿತೆಂದರೆ ಅವರು ಸತ್ತ ಅಮೆರಿಕಾದ ಸೈನಿಕರ ದೇಹಗಳನ್ನು ಒಂದು ಟ್ರಕ್ಕಿಗೆ ಕಟ್ಟಿ ಎಳೆದಾಡಿದರು, ಮೃತದೇಹಗಳನ್ನು ಕೊಚ್ಚಿ ಹೋಳು ಹೋಳು ಮಾಡಿದರು ಮತ್ತು ಆಮೇಲೆ ಸುಟ್ಟುಹಾಕಿದರು. ಸಾಮಾನ್ಯವಾಗಿ ಇದು ಮನೋವೈಕಲ್ಯದ ಸೂಚನೆ. ಆದರೆ ಇಲ್ಲಿ ಅದು ಅಸಹಾಯಕತೆಗೆ ತುತ್ತಾದವನ ರೋಷದ ಪರಿಣಾಮ. ಆದ್ದರಿಂದಲೇ ಅಮೆರಿಕಾದ ಪಾಳೆಯವನ್ನು ''ಮಿತ್ರಪಕ್ಷಗಳು'' ಎನ್ನುವುದು, ಅಮೆರಿಕಾ ಸೈನ್ಯದ ಕಾರ್ಯಾಚರಣೆಯನ್ನು ''ಶತ್ರುಗಳ ಮೇಲೆ ಧಾಳಿ'' ಎಂದು ಕರೆಯುವುದು ಒಂದು ದೌರ್ಜನ್ಯ. ತಮ್ಮ ದೇಶವು ಅಮೆರಿಕಾದ ಕಾಲಿನಡಿ ನಲುಗುತ್ತಿರುವಾಗ ಇರಾಕಿನ ಜನ ಹೇಗೆ ಹೋರಾಟ ನಡೆಸಬೇಕೆಂಬುದನ್ನು ಇರಾಕಿನ ಜನ ಮಾತ್ರವೇ ತೀರ್ಮಾನಿಸಲು ಶಕ್ಯ. ಅಮೆರಿಕಾ ಪಡೆಗಳು ಇಡೀ ಇರಾಕನ್ನು ಒತ್ತೆಯಾಳನ್ನಾಗಿ ಮಾಡಿಕೊಂಡರೆ ಮಾಧ್ಯಮಗಳು ಉಸಿರೆತ್ತುವುದಿಲ್ಲ. ಆದರೆ ಒಂದಷ್ಟು ಅಮೆರಿಕಾದವರನ್ನೋ ಅವರ ಭಂಟರನ್ನೋ ಇರಾಕಿನ ಹೋರಾಟಗಾರರು ಒತ್ತೆಯಾಳುಗಳನ್ನಾಗಿ ಮಾಡಿಕೊಂಡರೆ ''ಮಾನವೀಯ ಹಕ್ಕು''ಗಳ ಬಗ್ಗೆ ಕೂಗೇಳುತ್ತದೆ. ಪುರಂದರದಾಸರ ಮಾತಿನಲ್ಲಿ ಹೇಳುವುದಾದರೆ ''ನಗೆಯು ಬರುತಿದೆ, ಎನಗೆ ನಗೆಯು ಬರುತಿದೆ''. ಅಮೆರಿಕಾದಂತಹ ಸಶಕ್ತ ರಾಷ್ಟ್ರವನ್ನು ಮಣಿಸಲು ಇರಾಕಿನ ಜನಕ್ಕೆ ಆಯುಧಗಳೂ ಇಲ್ಲ, ತರಬೇತಿಯೂ ಇಲ್ಲ. ಆದ್ದರಿಂದ ಅವರು ಈಗಿನಂತೆ ಪುಡಿಗಾಸಿನ ಹೊಡೆತಗಳನ್ನಷ್ಟೇ ನೀಡಬಲ್ಲರು.

ಈ ಹಿನ್ನೆಲೆಯಲ್ಲಿ ಇರಾಕಿನ ಜನರನ್ನು ಸಂಪ್ರೀತಗೊಳಿಸಲು ಅಮೆರಿಕಾ ಮತ್ತು ಬ್ರಿಟನ್ ಹರಸಾಹಸ ಮಾಡುತ್ತಿವೆ. ಕರಪತ್ರಗಳು, ಪೋಲಿ ಚಿತ್ರಗಳು ಮುಂತಾದುವು ಅವರ ಯಾವತ್ತಿನ ಆಯುಧಗಳು. ಬಿ.ಬಿ.ಸಿ.ಯೆಂಬ ಬ್ರಿಟಿಷ್ ಬೊಗಳೆ ಕಾರ್ಪೊರೇಷನ್ ಇತ್ತೀಚೆಗೆ ಒಂದು ವರದಿ ಬಿತ್ತರಿಸಿತು. ಅದು ಇರಾಕಿನ ಸಂಸ್ಕೃತಿಯ ಪುನರುಜ್ಜೀವನಕ್ಕೆ

(೮ನೇ ಪುಟಕ್ಕೆ)

ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೫ ಸಂಚಿಕೆ - ೧೦ ಮೇ ೨೦೦೪

**ಪ್ರಧಾನ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ ಮಂಡಲಿ**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

**ವ್ಯವಸ್ಥಾಪಕರು**

ಎಸ್. ಸುರೇಂದ್ರ
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

## ಈ ವರ್ಷದ ಮೇ ದಿನ

**ಸಂಪಾದಕೀಯ**

ಅಂತರರಾಷ್ಟ್ರೀಯ ಕಾರ್ಮಿಕ ದಿನ ಮತ್ತೆ ಬಂದಿದೆ. ಪ್ರಪಂಚದಾದ್ಯಂತ ಕಾರ್ಮಿಕ ವರ್ಗ ತನ್ನ ಅಸ್ತಿತ್ವವನ್ನು ನೆನಪಿಸಿಕೊಳ್ಳುವ ದಿನ. ಸಮಾಜದ ಆಗು-ಹೋಗುಗಳ ಬಗ್ಗೆ ತನ್ನ ಸಿಟ್ಟು-ಆತಂಕಗಳನ್ನು ಕೆಲವೆಡೆ ಕಾರ್ಮಿಕ ವರ್ಗ ವ್ಯಕ್ತಪಡಿಸಿದರೆ ಇನ್ನು ಕೆಲವೆಡೆ ಯಾವ ಸಿಟ್ಟು - ಆತಂಕಗಳಿಲ್ಲದೆ ನಿರ್ಲಿಪ್ತವಾಗಿ, ತಟಸ್ಥವಾಗಿ ತನ್ನತನವನ್ನೇ ಮರೆತು ಶೋಷಿತ ಸಮಾಜದಲ್ಲಿ ಮೂಕ ಪ್ರೇಕ್ಷಕನಾಗಿ ನಿಂತುಬಿಡುತ್ತೆ. ಇವರಿಗೆ ಮೇ ದಿನದ ಚರಿತ್ರೆ ಇನ್ನೊಂದು ರೀತಿಯ ಹರಿಕಥೆಯಾಗಿಬಿಡುತ್ತೆ. ಮೇ ದಿನದ ತ್ಯಾಗ-ಬಲಿದಾನಗಳ ಚರಿತ್ರೆ ಇವರ ಕಿವಿಯನ್ನಪ್ಪಳಿಸಿದರೂ, ಹೃದಯ ಮುಟ್ಟುವುದಿಲ್ಲ. ದುಡಿಯುವ ವರ್ಗದ ಜನರಲ್ಲಿ ಹೊಸ ಆಸೆ, ಹೊಸ ನೋಟ, ಹೊಸ ಹಾದಿ, ಹೊಸ ನಿಲುವು, ಹೊಸ ಛಲವು ಚಿಗುರುವುದೇ ಇಲ್ಲ. ಆದರೆ ಮೇ ದಿನ ಪ್ರತಿವರ್ಷವೂ ಅನಿವಾರ್ಯವಾಗಿ ಬರುತ್ತೆ. ಅಲ್ಲಲ್ಲಿ ಛಿದ್ರ-ಛಿದ್ರ ಮೇ ದಿನದ ಪೂಜೆಯ ನೋಡಿ ಮತ್ತೆ ಕತ್ತಲಲ್ಲಿ ಕರಗಿಹೋಗುತ್ತೆ. ''ಅಷ್ಟೊಂದು ಮಿಂಚು ಮಿಂಚಿದ್ದಕ್ಕೆ ಒಲೆಯ ತರಗೆಲೆ ಕೂಡ ಹತ್ತಲಿಲ್ಲ'' ಎಂಬ ಗೋಪಾಲಕೃಷ್ಣ ಅಡಿಗರ ಕವಿತೆಯ ಸಾಲು ಜ್ಞಾಪಕಕ್ಕೆ ಬರುತ್ತೆ.

ದುಡಿಯುವ ವರ್ಗ ಸಮ-ಸಮಾಜದ ಸೃಷ್ಟಿಯ ಹರಿಕಾರನೆಂದು ಕಾರ್ಲ್ ಮಾರ್ಕ್ಸ್ ತನ್ನ ಬರವಣಿಗೆಗಳಲ್ಲಿ ಬಣ್ಣಿಸಿರುವುದನ್ನು ನಾವು ಓದಿದ್ದೇವೆ. ಹಲವಾರು ತತ್ವಜ್ಞಾನಿಗಳು ಜಗತ್ತನ್ನು ವಿಶ್ಲೇಷಿಸಿದ್ದಾರೆ - ಆದರೆ ಈ ಜಗತ್ತನ್ನು ಬದಲಾಯಿಸುವುದು ನಮ್ಮ ಕರ್ತವ್ಯವೆಂದು ಅವರು ಹೇಳಿದ್ದನ್ನು ಓದಿದ್ದೇವೆ. ಅವರ ಸಿದ್ಧಾಂತ ಕಾರ್ಮಿಕರಿಗೆ ತಮ್ಮ ವರ್ಗದ ಪ್ರಜ್ಞೆಯನ್ನು ಮೂಡಿಸಿ, ಅವರ ಚಾರಿತ್ರಿಕ ಕರ್ತವ್ಯದ ಚಾಲನಶಕ್ತಿಯಾಗಿ ಪರಿಣಮಿಸಿದ್ದು ನಂತರದ ಅನೇಕ ಮಹತ್ತರ ಸಾಮಾಜಿಕ ಚಳುವಳಿಗಳಿಂದ ನಿರೂಪಿತವಾಗಿದೆ. ಪ್ಯಾರಿಸ್‌ನ ಕಾರ್ಮಿಕ ವರ್ಗ ೧೮೭೧ರಲ್ಲಿ ನಡೆಸಿದ ಕ್ರಾಂತಿ, ೧೯೧೭ರಲ್ಲಿ ರಷ್ಯದ ಕಾರ್ಮಿಕ ವರ್ಗ ತಂದ ಕ್ರಾಂತಿ, ಎರಡನೇ ಮಹಾಯುದ್ಧದ ಹಿನ್ನೆಲೆಯಲ್ಲೇ ಪೂರ್ವ ಯುರೋಪ್ ರಾಷ್ಟ್ರಗಳಲ್ಲಿ ನಡೆದ ಕ್ರಾಂತಿ, ಚೀನಾ, ಕ್ಯೂಬಾ, ವಿಯೆತ್ನಾಂ, ಕೊರಿಯಾ ಇತ್ಯಾದಿ ರಾಷ್ಟ್ರಗಳಲ್ಲಿ ನಡೆದ ಕ್ರಾಂತಿ ದುಡಿಯುವ ವರ್ಗದ ಶಕ್ತಿಯನ್ನು, ಸಮಾಜವಾದಿ ವ್ಯವಸ್ಥೆಯ ಸಾಧ್ಯತೆಯನ್ನು ಜಗತ್ತಿಗೆ ಪರಿಚಯಿಸಿದಂತಹ ಘಟನೆಗಳು , ಬಂಡವಾಳಶಾಹಿ ಸುಲಿಗೆಯ ವಿರುದ್ಧದ ಆಕ್ರೋಶದ ಅಭಿವ್ಯಕ್ತಿಗಳು.

ಬಂಡವಾಳಶಾಹಿ ವ್ಯವಸ್ಥೆಯ ಶೋಷಣೆಯ ಪ್ರಮಾಣ ಹೆಚ್ಚಿದಂತೆಲ್ಲ ದುಡಿಯುವ ವರ್ಗದ ಪ್ರತಿಭಟನೆ - ಬಂಡಾಯ ಕೂಡ ತೀವ್ರವಾಗಬೇಕಾದ್ದು ಅನಿವಾರ್ಯ. ಶೋಷಣೆಯ ಪ್ರಮಾಣ ದಿನೇ - ದಿನೇ ಹೆಚ್ಚುತ್ತಿದ್ದರೂ, ಅದರ ವಿರುದ್ಧ ಆ ಪ್ರಮಾಣದ ಪ್ರತಿಭಟನೆ ದುಡಿಯುವ ವರ್ಗದಿಂದ ಮೂಡಿಬರುತ್ತಿಲ್ಲವೆಂಬುದು ಅನೇಕರಲ್ಲಿ ಕಳವಳ, ನಿರಾಸೆ ಮತ್ತು ಆತಂಕ ತಂದಿದೆ. ಭಾರತದ ಪರಿಸ್ಥಿತಿಯನ್ನೇ ನೋಡಿದಲ್ಲಿ ಅದು ಅತ್ಯಂತ ಗಂಭೀರ ಹಂತವನ್ನೇ ತಲುಪಿದೆ. ರಷ್ಯ ಮತ್ತು ಪೂರ್ವ ಯೂರೋಪ್ ರಾಷ್ಟ್ರಗಳಲ್ಲಿ ಸಮಾಜವಾದಿ ವ್ಯವಸ್ಥೆಯ ಕುಸಿತ ಅಮೆರಿಕನ್ ಸಾಮ್ರಾಜ್ಯಶಾಹಿಯ ರಾಕ್ಷಸ ನರ್ತನಕ್ಕೆ ದಾರಿ ಮಾಡಿಕೊಟ್ಟು ಕಾರ್ಮಿಕ ವರ್ಗದ ಮೇಲೆ ಬೃಹತ್ ಪರಿಣಾಮ ಬೀರಿದ್ದನ್ನು ಅಲ್ಲಗಳೆಯಲಾಗುವುದಿಲ್ಲ. ಅದರ ಹಿನ್ನೆಲೆಯಲ್ಲೇ ಆವರಿಸಿದ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಪ್ರಕ್ರಿಯೆಗಳು ದುಡಿಯುವ ವರ್ಗಕ್ಕೆ ಹೊಸ ಸಮಸ್ಯೆಗಳನ್ನು ಸೃಷ್ಟಿಸಿವೆ.

ಜಾಗತೀಕರಣ ಮತ್ತು ಉದಾರೀಕರಣದ ಆರ್ಥಿಕ ನೀತಿಗಳಿಗೆ ಪೂರಕವಾದ ಮುಕ್ತ ಮಾರುಕಟ್ಟೆಯ ಸೃಷ್ಟಿ, ಅದರೊಂದಿಗೆ ಹುಟ್ಟುವ ಪೈಪೋಟಿ, ಇವೆರಡಕ್ಕೂ ಪೂರಕವಾಗಿ ಅಗಾಧ ಪ್ರಮಾಣದ ಉತ್ಪಾದನೆಗಾಗಿ ಹೊಸ ತಂತ್ರಜ್ಞಾನದ ಅಳವಡಿಕೆಯಿಂದಾಗಿ ಹೊಸ ಉದ್ಯೋಗಗಳು ಸೃಷ್ಟಿಯಾಗುವುದಿರಲಿ, ಈಗಿರುವ ಉದ್ಯೋಗಗಳೇ ನಾಶವಾಗುತ್ತಿವೆ. ೧೯೯೮-೨೦೦೦ದ ಅವಧಿಯಲ್ಲಿ ಏಳು ಲಕ್ಷ ಕಾರ್ಖಾನೆ ಕಾರ್ಮಿಕರು ಕೆಲಸವನ್ನು ಕಳೆದುಕೊಂಡಿದ್ದಾರೆ. ಇದಲ್ಲದೆ ಬ್ಯಾಂಕ್ ಇತ್ಯಾದಿ ಕ್ಷೇತ್ರಗಳಲ್ಲಿ ಹಲವಾರು ಲಕ್ಷ ಕಾರ್ಮಿಕರು ಕೆಲಸ ಕಳೆದುಕೊಂಡಿದ್ದಾರೆ. ಉದ್ಯೋಗವಿಲ್ಲದೆ ಜನತೆ ಕಂಗಾಲಾಗಿದೆ. ಒಂದು ವರದಿಯ ಪ್ರಕಾರ ಭಾರತದಲ್ಲಿ ಸುಮಾರು ೨೪ ಕೋಟಿ ಜನರು ಹಸಿವಿನಿಂದ ನರಳುತ್ತಿದ್ದಾರೆ. ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗದ ವರದಿಯ ಪ್ರಕಾರ ಮುಂದಿನ ದಶಕದಲ್ಲಿ ಐದುಕೋಟಿ ಕಾರ್ಮಿಕರು ನಿರುದ್ಯೋಗಿಗಳಾಗುತ್ತಾರೆ. ಈಗಾಗಲೇ ೪.೦೭ ಕೋಟಿ ಜನರು ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ತಮ್ಮ ಹೆಸರುಗಳನ್ನು ನೋಂದಾಯಿಸಿ, ಕೆಲಸಕ್ಕಾಗಿ ತುದಿಗಾಲ ಮೇಲೆ ನಿಂತಿದ್ದಾರೆ.

ಈ ಎಲ್ಲ ಬೆಳವಣಿಗೆಗಳಿಂದಾಗಿ ಕಾರ್ಮಿಕ ಸಂಘಟನೆಗಳು ಸಹಸ್ರಾರು ಸದಸ್ಯರನ್ನು ಕಳೆದುಕೊಂಡಿವೆ. ಹೊಸ ಸದಸ್ಯರು ಬರದಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಇದರ ಜೊತೆಗೆ ಈಗಿರುವ ಕಾರ್ಮಿಕ ಕಾನೂನುಗಳು ಬದಲಾಗಬೇಕೆಂದು ಸ್ವದೇಶಿ-ವಿದೇಶಿ ಮಾಲಿಕರು ಒಕ್ಕೊರಲಿನಿಂದ ಕೂಗುತ್ತಿದ್ದಾರೆ. ಕಾರ್ಖಾನೆಗಳನ್ನು ಮುಚ್ಚುವ, ಕೆಲಸಗಾರರನ್ನು ತಮಗಿಷ್ಟ ಬಂದಾಗ ತೆಗೆದುಹಾಕುವ, ಕೆಲಸವನ್ನು ಸ್ಥಗಿತಗೊಳಿಸುವ ಅನಿರ್ಬಂಧಿತ ಹಕ್ಕು ಬೇಕೆಂದು ಸರಕಾರಗಳ ಮೇಲೆ ಒತ್ತಡ ತಂದಿದ್ದಾರೆ. ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗ ಮಾಲಿಕರಿಗೆ ಬೇಕಾದ ರೀತಿಯಲ್ಲೇ ತನ್ನ ಶಿಫಾರಸ್ಸುಗಳನ್ನು ನೀಡಿದೆ, ಕೇಂದ್ರ ಸರಕಾರದ ಮುಂದೆ ಜಾರಿಗಾಗಿ ಕಾದು ಕುಳಿತಿದೆ. ಮುಷ್ಕರದ ಹಕ್ಕು ಕೂಡ ಹಾನಿಗೊಳಗಾಗಿದೆ. ಸರ್ವೋಚ್ಚ ನ್ಯಾಯಾಲಯ ಈಗಾಗಲೇ ರಾಜ್ಯ ಮತ್ತು ಕೇಂದ್ರ ಸರಕಾರೀ ನೌಕರರಿಗೆ ಮುಷ್ಕರದ ಹಕ್ಕಿಲ್ಲ ಎಂದು ತೀರ್ಪಿತ್ತಿದೆ.

ಅಸಂಘಟಿತ ವಲಯದಲ್ಲಿನ ಕಾರ್ಮಿಕರ ಪರಿಸ್ಥಿತಿಯಂತೂ ಶೋಚನೀಯ. ದುಡಿಯುವ ವರ್ಗದ ಸುಮಾರು ೯೩% ಜನ ಈ ಕ್ಷೇತ್ರದಲ್ಲಿದ್ದಾರೆ. ಅವರಿಗೆ ಯಾವ ಕಾನೂನುಗಳೂ ತಲುಪುತ್ತಿಲ್ಲ. ಕನಿಷ್ಠ ಕೂಲಿ ದೊರೆಯುತ್ತಿಲ್ಲ. ಮಹಿಳೆಯರು ಕೂಡ ರಾತ್ರಿ ಪಾಳಿಯಲ್ಲಿ ಕೆಲಸ ಮಾಡಬೇಕಾದ ಪರಿಸ್ಥಿತಿಯೊದಗಿದೆ. ಕಾರ್ಮಿಕರು ೧೨-೧೪ಗಂಟೆಗಳು ಕೆಲಸ ಮಾಡಬೇಕಾದ ಸಂದರ್ಭ ಮತ್ತೆ ಬಂದಿದೆ. ಕೆಲಸದ ಭದ್ರತೆ ಹೋಗಿದೆ. ಕಾನೂನುಗಳು ಬದಲಾಗುತ್ತಿವೆ. ಇಂತಹ ಭಯಾನಕ ಪರಿಸ್ಥಿತಿಯಲ್ಲೂ ಭಾರತೀಯ ಜನತಾ ಪಕ್ಷ ಭಾರತ ಪ್ರಕಾಶಿಸುತ್ತಿದೆ ಎಂದು ಪ್ರಚಾರ ಮಾಡುತ್ತಿದೆ. ಕೋಮು ದ್ವೇಷವನ್ನು ಹರಡಿ ಕಾರ್ಮಿಕ ವರ್ಗದ ಐಕ್ಯತೆಯನ್ನು ಮುರಿಯುತ್ತಿದ್ದಾರೆ ಈ ಪಕ್ಷದ ನೇತಾರರು.

ತಮ್ಮ ಹಕ್ಕುಗಳಿಗಾಗಿ ಅನೇಕ ಅವಿಸ್ಮರಣೀಯ ಹೋರಾಟಗಳನ್ನು ಮಾಡಿದ ಕಾರ್ಮಿಕ ವರ್ಗ ಈಗ ಅನೇಕ ಹಕ್ಕುಗಳನ್ನು ಕಳೆದುಕೊಳ್ಳುತ್ತಿರುವುದು ಕಳವಳಪಡುವ ವಿಷಯ. ಮುಂದಿನ ಕೆಲವು ವರ್ಷಗಳಂತೂ ಕಾರ್ಮಿಕ ವರ್ಗಕ್ಕೆ ಅತ್ಯಂತ ನಿರ್ಣಾಯಕವಾದವೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆದ್ದರಿಂದ ಕಾರ್ಮಿಕರು ಮತ್ತು ಕಾರ್ಮಿಕ ಸಂಘಟನೆಗಳು ಎಚ್ಚರಗೊಂಡು ತಮ್ಮ ಹೋರಾಟಗಳನ್ನು ತೀವ್ರಗೊಳಿಸಿ, ಸಮಸ್ಯೆಗಳತ್ತ ಗಮನಹರಿಸಿದಲ್ಲಿ ಈ ವರ್ಷದ ಮೇ ದಿನ ಹೆಚ್ಚು ಅರ್ಥಪೂರ್ಣವಾದೀತು.

# ಚುನಾವಣೆ ಬಂದಿತು, ಹೋಯಿತು, ಆದರೆ...

**ನ**ಮ್ಮ ದೇಶದಲ್ಲಿ ಕೆಲವರು ಅಧಿಕಾರದಲ್ಲಿರಲೆಂದೇ ಹುಟ್ಟಿಬಂದಿದ್ದಾರೆ ಎಂಬಂತೆ ಮಾತನಾಡುವುದುಂಟು. ಬಂಗಾರಪ್ಪ, ಪಾಪ, ಐದೇ ವರ್ಷ ಅಧಿಕಾರದಲ್ಲಿದ್ದದ್ದು; ಆದ್ದರಿಂದ ಮಂಗನಾಟದಲ್ಲಿ ತೊಡಗಿ ಭಾಜಪಕ್ಕೆ ಹೋದರು. ಐದು ವರ್ಷದಲ್ಲಿ ಇಷ್ಟೇ ಲಪಟಾಯಿಸಿದ್ದೇನೆನ್ನುವ ಕೊರಗು ಆತನಿಗೆ! ಆದ್ದರಿಂದ ದೆಹಲಿಯಲ್ಲಿ ಇನ್ನೊಂದು 'ಚಾನ್ಸ್' ಬೇಕು. ಕುಮಾರ ಬಂಗಾರಪ್ಪ ಅಪ್ಪನ ತದ್ರೂಪ. ಅಪ್ಪ ಒಮ್ಮೆ ಮಂಗನಂತೆ ನೆಗೆದರೆ ಮಗ ಎರಡು ಬಾರಿ ನೆಗೆಯುತ್ತಾನೆ. ಚಿಕ್ಕಮಗಳೂರಿನ 'ಮಹಾರಾಣಿ' ತಾರಾದೇವಿಯದೂ ಅದೇ ಕತೆ. ನಾಗಮ್ಮ ಕೇಶವಮೂರ್ತಿ ಎಂಬಾಕೆಗೆ ವಯಸ್ಸೆಷ್ಟೋ ತಿಳಿಯದು. ಬೌದ್ಧಿಕ ವಯಸ್ಸು ಮಾತ್ರ ಸ್ಥಿರವಾಗಿದೆ. ಆದರೆ ಆಕೆಗೆ ಅಧಿಕಾರದ ಗುಂಗು ಹತ್ತಿ ಮಂಗಾಟ ನಡೆಸಿದ್ದಾರೆ. ಉತ್ತರ ಭಾರತದಲ್ಲಿ ಮಾತ್ರವೇ ರಾಜಕೀಯ ಸ್ವತ್ತು ಕೆಲವು ಕುಟುಂಬಗಳದ್ದೆಂಬ ಪ್ರತೀತಿ ಇತ್ತು. ಜಸವಂತ ಸಿಂಗ್, ಶೀಲಾ ದೀಕ್ಷಿತ್, ಸೋನಿಯಾ ಗಾಂಧಿ, ಅರ್ಜುನ್ ಸಿಂಗ್, ಗ್ವಾಲಿಯರ್ ಸಿಂಧ್ಯಾ ಮನೆತನ, ಚರಣಸಿಂಗ್ ಸಂತಾನ, ವಾಜಪೇಯಿ ಸೋದರಿಕೆ, ಕರುಣಾಕರನ್ ಸಂತತಿ, ಎನ್. ಟಿ. ರಾಮರಾವ್ ನೆಂಟಸ್ತಿಕೆ, ಠಾಕ್ರೆ ಜಬರ್ದಸ್ತು, ಕರುಣಾನಿಧಿ ಶಾಗಿರ್ದು, ಹೀಗೆ ಎಲ್ಲ ರಾಜಕೀಯ ಸ್ಥಿತಿವಂತರೂ ತಮ್ಮ ಹೊಲಸು ಆಸ್ತಿಯನ್ನು ಮುಂದಿನ ಪೀಳಿಗೆಗೆ ವರ್ಗಾಯಿಸುವ ಸಂದರ್ಭವುಂಟಾಗಿ ಈಗ ಅದು ಸಾರ್ವತ್ರಿಕ ಪಿಡುಗಾಗಿದೆ. ಇವರೆಲ್ಲಾ ಪ್ರಜಾಪ್ರಭುತ್ವ ಎತ್ತಿ ಹಿಡಿಯುತ್ತಾರೆಂದು ನಿರೀಕ್ಷಿಸಿದರೆ ನಾವು ಮೂರ್ಖರಾಗುತ್ತೇವೆ, ಅಷ್ಟೆ. ನಮ್ಮದು ಕೋಟ್ಯಾಧಿಪತಿಗಳ ಆಡಳಿತ. ನಮ್ಮ ರಾಜ್ಯದ ಒಡೆಯರ್, ದೇಶಪಾಂಡೆ, ಕೃಷ್ಣಪ್ಪ, ಶಂಕರ್‌ಗಳನ್ನು ಮೀರಿಸುವ ಮಾಯಾವಿಗಳು ಬೇರೆ ರಾಜ್ಯಗಳಲ್ಲಿದ್ದಾರೆ. ಅಷ್ಟು ಸಂಪತ್ತು ಅವರಲ್ಲಿ ಶೇಖರಣೆಯಾದದ್ದು ಹೇಗೆ ಮತ್ತು ಅದರ ಎಷ್ಟು ಭಾಗ ಈಚಿನ ವರ್ಷಗಳಲ್ಲಿ ಸಂಗ್ರಹವಾಯಿತು ? ಬಂಗಾರಪ್ಪನಂತಹವರಿಗೆ ಅಧಿಕಾರ ಏಕೆ ಬೇಕೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ವಾಜಪೇಯಿ ಮತ್ತು ಅವರ ವಂದಿಮಾಗಧರು ಕೈಗೆತ್ತಿಕೊಂಡ ವಿಷಯಗಳನ್ನು ನೋಡಿದರೆ ನಮ್ಮ ರಾಜಕೀಯವನ್ನು ಎಷ್ಟು ಹಗುರಾಗಿಸಿದ್ದಾರೆಂಬುದು ತಿಳಿಯುತ್ತದೆ. ಒಬ್ಬ ಹೇಳಿದ, ಸೋನಿಯಾ ಗಾಂಧಿ ತಂದೆ ಇಟಲಿಯಲ್ಲಿ ಫ್ಯಾಸಿಸ್ಟ್ ಆಗಿದ್ದ, ಆದ್ದರಿಂದ ಆಕೆ ಅಪಾಯಕಾರಿ, ಎಂದು. ಅದ್ಭುತ ತರ್ಕ! ನಮ್ಮ ದೇಶದ ತರ್ಕಶಾಸ್ತ್ರ ಪರಂಪರೆಗೆ ಇದಕ್ಕಿಂತಲೂ ಹೀನಾಯವಾದ ಸ್ಥಿತಿ ಅಸಾಧ್ಯ. ಇವರೇ ಫ್ಯಾಸಿಸ್ಟರು; ಹಾಗಿರುವಾಗ ಆಕೆಯ ಅಪ್ಪನತ್ತ ಬೊಟ್ಟು ಮಾಡುವುದು ಯಾವ ಕುತಂತ್ರ ? ವಾಜಪೇಯಿ ಹೇಳಿದರು : ಸೋನಿಯಾಳ ವಿದೇಶಿ ಮೂಲದ ಬಗ್ಗೆ ಚರ್ಚೆ ಆಗಬೇಕು, ಎಂದು. ಆರು ವರ್ಷದಿಂದ ಅದನ್ನು ಬಿಟ್ಟು ಇವರು ಮಾಡಿದ್ದಾದರೂ ಏನು ? ಜಾರ್ಜ್ ಫರ್ನಾಂಡೀಸ್ ಎಂಬ ಧೂರ್ತ ಸಹ ಇದನ್ನೇ ಬಡಬಡಿಸಿದ್ದು. ಭಾಜಪ ತನ್ನ ಚುನಾವಣೆ ಘೋಷಣಾ ಪತ್ರದಲ್ಲಿ ಬರೆದದ್ದೆಲ್ಲಾ ''ರಾಷ್ಟ್ರೀಯ ಪ್ರಜಾಪ್ರಭುತ್ವವಾದಿ ಐಕ್ಯರಂಗ''ಕ್ಕೆ ಮಾನ್ಯವೆಂದು ಯಾರನ್ನೂ ಕೇಳದೆಯೇ ಹೇಳಿದ ಧೀರ ಈತ. ಆ ಎನ್‌ಡಿಎ ಎಂಬುದಕ್ಕೇನಾದರೂ ಘನತೆ ಮತ್ತು ಸ್ವಕೀಯತೆ ಎಂದಾದರೂ ಇತ್ತೇ ? ''ಮಿತ್ರಪಕ್ಷ''ಗಳಿಗೆ ಮಣ್ಣು ತಿನ್ನಿಸಲು ಜಾರ್ಜ್ ಇರುವಾಗ ಅದ್ವಾನಿಗೇನು ಕೆಲಸ, ವೆಂಕಯ್ಯ ಏಕೆ ಬೇಕು ? ಕಳೆದ ಹತ್ತು ವರ್ಷಗಳ ರಾಜಕೀಯದಲ್ಲಿ ಜಾರ್ಜ್‌ನಂತಹ ಕ್ಷುದ್ರ ವ್ಯಕ್ತಿ ಇನ್ನೊಬ್ಬನಿಲ್ಲವೆಂಬ ಹೆಗ್ಗಳಿಕೆ ಫರ್ನಾಂಡೀಸ್‌ದು. ದೇಶದ ಕಾರ್ಖಾನೆಗಳನ್ನು ಮುಚ್ಚಿದ್ದು, ಬೇಕಾಬಿಟ್ಟಿ ಮಾರಿದ್ದು, ಯಾವುದೂ ಚರ್ಚೆಗೆ ಬೇಡ ಈ ಮಹಾನ್ ಕಾರ್ಮಿಕ ನಾಯಕನಿಗೆ. ಅರುಣ ಶೌರಿಯ ಉದಾರ ದಾನಗಳಿಗೆ ಈತ ಪುರೋಹಿತ ! ಭಾರತದ ರಾಷ್ಟ್ರೀಯ ರಾಜಕೀಯದಲ್ಲಿ ಶನಿಸಂತಾನ ಹೊಸದಲ್ಲ, ಆದರೆ ಅದರ ಆಧುನಿಕ ವಾರಸುದಾರ ಜಾರ್ಜ್ ಫರ್ನಾಂಡೀಸ್. ದೇವೇಗೌಡ, ಮಾಯಾವತಿ, ಮುಲಾಯಂ ಸಿಂಗ್ ಮುಂತಾದವರಿಗೆ ದೇಶದ ಯಾವ ನೀತಿಗಳೂ ಪ್ರಸ್ತುತವಲ್ಲ. ಆರ್ಥಿಕ, ಶೈಕ್ಷಣಿಕ, ಆರೋಗ್ಯ, ಕೃಷಿ, ವಿದೇಶಾಂಗ, ಹೀಗೆ ಯಾವ ಕ್ಷೇತ್ರದಲ್ಲಿ ಎಷ್ಟು ಕೆಡಕಿನ ನೀತಿಯನ್ನು ವಾಜಪೇಯಿ ಸರ್ಕಾರ ಅನುಸರಿಸಿದರೂ ಇವರಿಗೆಲ್ಲಾ ಅದು ತೀರಾ ಗೌಣ. ಸ್ವಪ್ರತಿಷ್ಠೆಯೇ ಅವರ ಪರಮ ಮೌಲ್ಯ. ಆದ್ದರಿಂದ ಚುನಾವಣೆಯಲ್ಲಿ ಮೈತ್ರಿಕೂಟ ಸೇರದೆಯೇ ವಾಜಪೇಯಿಗೆ ಅಪಾರ ಬೆಂಬಲ ನೀಡಿದ ಪಕ್ಷಗಳಲ್ಲಿ ಇವರವು ಪ್ರಮುಖವಾದುವು. ಭಾಜಪಕ್ಕೆ ಬೆಂಬಲ ನೀಡುವುದಿಲ್ಲವೆಂದಿರುವ ಮುಲಾಯಂ ಪಕ್ಷದ ಹೆಜ್ಜೆಗಳನ್ನು ಕುತೂಹಲದಿಂದ ನಿರೀಕ್ಷಿಸಬೇಕಾಗಿದೆ. ಚುನಾವಣೆಯ ನಂತರದ ವಲಸೆಗಳೂ ಸಾಕಷ್ಟು ಸ್ವಾರಸ್ಯಕರವಾಗಿರುತ್ತವೆಂದು ತೋರುತ್ತದೆ.

ಬಹುಮುಖ್ಯವಾಗಿ ತಿಳಿಯಬೇಕಾದ ವಿಷಯವೆಂದರೆ ವಾಜಪೇಯಿ - ಅದ್ವಾನಿ ನಾಟಕ. ಅದರಿಂದ ಇಡೀ ದೇಶ ದಾರಿತಪ್ಪಿದೆ. ಒಬ್ಬ ಸೌಮ್ಯ, ಇನ್ನೊಬ್ಬ ಉಗ್ರ, ಎಂಬ ಪ್ರತೀತಿಯನ್ನು ಜಾಣತನದಿಂದ ಹಬ್ಬಿಸಲಾಯಿತು. ಕೊಳಕು ಮಾಧ್ಯಮಗಳು ಅದನ್ನೇ ದೊಡ್ಡದು ಮಾಡಿ ತಮ್ಮ ಮೇಧಾವಿತನ ಮೆರೆದವು. ನಿಜವಾಗಿಯೂ ಅವರಿಬ್ಬರೂ ಒಂದೇ. ಒಬ್ಬ ಡಾ॥ ಜೆಕಿಲ್, ಇನ್ನೊಬ್ಬ ಮಿಸ್ಟರ್ ಹೈಡ್. ಉಗ್ರತ್ವದ ಆಪಾದನೆ ಮಾಡಿದರೆ ಭಾಜಪವು 'ಸೌಮ್ಯ ಮೂರ್ತಿ' ವಾಜಪೇಯಿಯನ್ನು ತೋರಿಸುತ್ತದೆ. ಸೌಮ್ಯತ್ವದ ಕಾಲ ಇದಲ್ಲವೆಂದು ಠಾಕ್ರೆ, ತೋಗಡಿಯಾ, ಸುದರ್ಶನ್ ರೇಗಿದರೆ ಆಗ ಭಾಜಪವು 'ಉಗ್ರಮೂರ್ತಿ' ಅದ್ವಾನಿಯನ್ನು ಮುಂದುಮಾಡುತ್ತದೆ. ಮೇಲಿನ ನಾಯಕರು ಮುಸಲ್ಮಾನರನ್ನು ಪಕ್ಷದೊಳಕ್ಕೆ ಸ್ವಾಗತಿಸುತ್ತಾ ತಮ್ಮ ಉದಾರತ್ವ ಪ್ರದರ್ಶಿಸಿ ಕೋಟೆ ಕಟ್ಟುತ್ತಾರೆ. ಕೆಳಹಂತದ ಅನುಯಾಯಿಗಳು ಯಥಾಪ್ರಕಾರ ದ್ವೇಷದ ಕಿಡಿಗಳನ್ನು

(೯ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಮಾಲೋಚಕ ಮಂಡಲಿ

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಬಿ. ಜಿ. ಗುಜ್ಜಾರಪ್ಪ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಬಸವರಾಜ ಕಲ್ಗುಡಿ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ
ಹಾಲಾಡಿ ಮಾರುತಿರಾವ್

ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೪೨೪೩೦೨

### ಮಾರ್ಚ್ ಸಂಚಿಕೆ

ಶ್ರೀ ಪಿ. ಎಂ. ಎನ್. ಮೂರ್ತಿಯವರು ತಮ್ಮ 'ದಲಿತರ ಬಗ್ಗೆ ಒಂದು ಮೀಮಾಂಸೆ' ಯಲ್ಲಿ ದಲಿತ ಚಳುವಳಿಯ ಬಗ್ಗೆ ಕೆಲವು ಪ್ರಶ್ನಾರ್ಹ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ.

ದಲಿತರ ಹಿತಾಸಕ್ತಿಗಳ ವಿಷಯದಲ್ಲಿ ದಲಿತರೇ ಹೇಗೆ ವರ್ತಿಸುತ್ತಾರೆ ಎಂಬುದನ್ನು ವಿವರಿಸಲು ಅವರು ಕೆಲವು ವ್ಯಕ್ತಿಗಳ ಉದಾಹರಣೆಯನ್ನು ನೀಡಿದ್ದಾರೆ. ಆದರೆ ಕೇವಲ ಕೆಲವರ ಸ್ವಾರ್ಥವನ್ನು ದೃಷ್ಟಿಯಲ್ಲಿಟ್ಟುಕೊಂಡು ದಲಿತ ಚಳುವಳಿಯನ್ನೇ ಅಳೆಯುವ ಪ್ರಯತ್ನ ಸಾಧುವಲ್ಲ. ಹಾಗೆ ನೋಡಿದರೆ ಎಡಪಕ್ಷಗಳ ಕಾರ್ಮಿಕ ಸಂಘಟನೆಗಳೂ ಸಹ ಕಾರ್ಮಿಕರ ಆರ್ಥಿಕ ಹಕ್ಕೊತ್ತಾಯಗಳ ಕಡೆ ಮಾತ್ರ ಗಮನಹರಿಸಿದವೇ ವಿನಾ ಅವರಲ್ಲಿ ಸಮಾಜವಾದಿ ಸಂಸ್ಕೃತಿಯನ್ನು ಬೆಳೆಸಲು ಯಾವ ಪ್ರಯತ್ನವನ್ನೂ ಮಾಡಿಲ್ಲವೆಂಬ ವಿಮರ್ಶೆ ಇದೆ. ಈ ಕಾರಣಕ್ಕಾಗಿ, ಒಟ್ಟಾರೆ ಎಡಪಂಥೀಯ ಸಿದ್ಧಾಂತ ಹಾಗೂ ಚಳುವಳಿಯನ್ನೇ ಸಂದೇಹಿಸುವುದು ಸರಿಯೇನು ?

ದಲಿತರನ್ನು ಬಿಜೆಪಿ ನಿಕೃಷ್ಟವಾಗಿ ನಡೆಸಿಕೊಂಡಿತೆನ್ನುವುದರ ಬಗ್ಗೆ ಹೆಚ್ಚಿಗೆ ಹೇಳಬೇಕಾಗಿಯೇ ಇಲ್ಲ. ಸಂಘಪರಿವಾರದ ಲಕ್ಷಣವೇ ಅದು. ಆದರೆ ದಲಿತರು ಎಡಪಕ್ಷಗಳಿಂದ ದೂರಸರಿಯುವ ಸನ್ನಿವೇಶ ಉಂಟಾದದ್ದೇಕೆ ಎಂಬುದನ್ನು ಎಡಪಕ್ಷಗಳು ಹಾಗೂ ಅವುಗಳ ಕಾರ್ಮಿಕ ಸಂಘಟನೆಗಳು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾಗಿದೆ.

ಬೆಂಗಳೂರು — *ನಗರಗೆರೆ ರಮೇಶ್*

ನಾನು ೩೫ ವರ್ಷ ಕಾಲ ದಕ್ಷಿಣ ಕನ್ನಡ ಜಿಲ್ಲೆಯ ಮುನಿಸಿಪಲ್ ಕೆಲಸಗಾರರ ಸಂಘದ ಅಧ್ಯಕ್ಷನಾಗಿದ್ದೆ. ಆದುದರಿಂದ ಅವರ ಸ್ಥಿತಿಗಳನ್ನು ನಾನು ಚೆನ್ನಾಗಿ ಬಲ್ಲೆ.

(ಅ) ಗಾಂಧೀಜಿಯವರು ಹರಿಜನರ ಮಧ್ಯದಲ್ಲೇ ವಾಸಿಸಿ ಅವರ ಕಷ್ಟಸಂಕಷ್ಟಗಳನ್ನು ಅರಿತುಕೊಂಡಿದ್ದರು. ಡಾ|| ಅಂಬೇಡ್ಕರ್‌ರವರು ಅವರ ಮಧ್ಯ ವಾಸಿಸಿದ್ದು ನಾನು ಈವರೆಗೆ ತಿಳಿದಿಲ್ಲ.

(ಆ) ವರ್ಗ ಹೋರಾಟವೆಂದರೆ ಬರೇ ಮಾರಕಾಸ್ತ್ರಗಳನ್ನು ಹಿಡಿದು ನಡೆಸುವ ಹೋರಾಟವಲ್ಲ, ಸಮಾಜವಾದದ ಕುರಿತು ಜನರಲ್ಲಿ ಜಾಗೃತಿ ಮೂಡಿಸಲು ಧರಣ ಮುಂತಾದ ಅನೇಕ ರೀತಿಯ ಹೋರಾಟಗಳು ಮೊದಲಿಗೆ ಅವಶ್ಯ. ಇತ್ತೀಚೆಗೆ ಅಖಿಲಭಾರತ ನೆಲೆಯಲ್ಲಿ ಒಂದು ದಿವಸದ ಮುಷ್ಕರ ನಡೆದಿತ್ತು. ಸಮಾಜವಾದದ ಸಮಾಜದ ಸ್ವಪ್ನನೆ ಒಂದು ದಿವಸದಲ್ಲಿ ಆಗುವ ಕೆಲಸವಲ್ಲ. ಇದಕ್ಕೆ ನಿರಂತರ ಹೋರಾಟಗಳು ಅಗತ್ಯ.

(ಇ) ಜಾತೀಯ ನೆಲೆಯಲ್ಲಿ ಕಾರ್ಮಿಕ ಸಂಘಟನೆಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ. ಅವರ ಈ ಪ್ರಕ್ರಿಯೆಗಳನ್ನು ಎಡಪಕ್ಷಗಳಿಗೆ ತಡೆಯಲು ಸಾಧ್ಯವಿಲ್ಲ. ಕಾರಣ ಸಂವಿಧಾನದಲ್ಲಿ ಈ ಹಕ್ಕನ್ನು ಎಲ್ಲರಿಗೂ ನೀಡಲಾಗಿದ್ದು ನವಮಂಗಳೂರು ಬಂದರಿನಲ್ಲಿ ಜಾತಿಯ ನೆಲೆಯಲ್ಲೇ ದಲಿತರು ಕಾರ್ಮಿಕ ಸಂಘವನ್ನು ಕಟ್ಟಿಕೊಂಡಿದ್ದಾರೆ.

(ಈ) ಕೋಮುವಾದದ ಮಿಶ್ರಣದ ಫ್ಯಾಸಿಸ್ಟ್ ಪಕ್ಷವು ನಮ್ಮ ರಾಷ್ಟ್ರವನ್ನು ಇಂದು ಆವರಿಸಲು ಹೊರಟಿದೆ. ಇದರಿಂದ ರಾಷ್ಟ್ರವನ್ನು ರಕ್ಷಿಸಲು ಎಲ್ಲಾ ಜಾತ್ಯತೀತ ಪಕ್ಷಗಳ ಹೊಂದಾಣಿಕೆಗಳು ಇಂದು ಅನಿವಾರ್ಯವಾಗಿದೆ.

(ಉ) ಇದೇ ಸಮಯದಲ್ಲಿ ದಲಿತರ ಮುಖಂಡತ್ವದಲ್ಲಿ ಅತ್ಯುನ್ನತ ಸ್ಥಾನಕ್ಕೆ ಏರಿರುವ ಶ್ರೀಮತಿ ಮಾಯಾವತಿ, ಹಾಗೆಯೇ ಶ್ರೀ ರಾಮ ವಿಲಾಸ ಪಾಸ್ವಾನರು ಈ ಫ್ಯಾಸಿಸ್ಟ್ ಪಕ್ಷದೊಂದಿಗೆ ಕೈಗೂಡಿಸಿದರಲ್ಲಾ? ಇಂತಹ ಕೃತ್ಯಗಳನ್ನು ಅಳೆಯದಿರಲು ಸಾಧ್ಯವೇ ? ಈ ಕುರಿತು ಶ್ರೀ ರಮೇಶರು ಕೊಂಚ ಆಲೋಚಿಸುವುದು ಈಗಂತು ಸಕಾಲಿಕವಾಗಿದೆ.

ಮಂಗಳೂರು — *ಪಿ. ಎಂ. ಎನ್. ಮೂರ್ತಿ*




ರಾಹುಲ ಬೆಳಗಲಿಯವರ ''ಭಗತ್ ಸಿಂಗ್ ನೆನೆಯುತ್ತ...'' ಲೇಖನ ಬಹಳ ಸಂದರ್ಭೋಚಿತವಾದದು. ಪ್ರಸ್ತುತ ದಿನಗಳಲ್ಲಿ ಸ್ವಾತಂತ್ರ್ಯ ಹೋರಾಟದ ಪರಿಚಯವನ್ನು ಸರ್ಕಾರದ ಮಾಧ್ಯಮಗಳು ತಿರುಚಿ ಪ್ರಚಾರ ಮಾಡುತ್ತಿರುವ ದಿನಗಳಲ್ಲಿ ಭಗತ್ ಸಿಂಗ್, ರಾಜಗುರು, ಸುಖದೇವ್ ಮುಂತಾದ ಕೆಚ್ಚೆದೆಯ ಕಲಿಗಳ ಹೋರಾಟದ ಸಾಗರದ ಪ್ರಚಂಡ ಅಲೆಗಳನ್ನು ನಮ್ಮ ಯುವ ಪೀಳಿಗೆಗೆ ಪರಿಚಯ ಮಾಡಿದ್ದು ಸ್ವಾಗತಾರ್ಹವಾಗಿದೆ.

ಬೆಂಗಳೂರು — *ವೀರೇಶ್ ಬಳ್ಳಾರಿ*

ಕ್ರಾಂತಿವೀರ ಭಗತ್ ಸಿಂಗ್ ಬಗ್ಗೆ ಲೇಖನ ತುಂಬಾ ಚೆನ್ನಾಗಿತ್ತು. ಈ ಪತ್ರಿಕೆ ಮೂಢನಂಬಿಕೆಯಲ್ಲಿ ತೊಳಲಾಡುತ್ತಿರುವವರಿಗೆ ಒಂದು ಮಾರ್ಗದರ್ಶಿ. ವೈಚಾರಿಕತೆಯನ್ನು ಹೊಂದಿದ ಈ ಪತ್ರಿಕೆ ಹೆಚ್ಚು ಹೆಚ್ಚು ಜನರಿಗೆ ಸಿಗಲಿ ಎಂದು ಹಾರೈಸುವೆ.

ಹುಣಶ್ಯಾಳ — *ಸಂತೋಷ ಮ. ತೋಟದ*

ಈ ತಿಂಗಳು, ಪ್ರಜಾಪ್ರಭುತ್ವದ ಮೋರೆ ಇದೇಯೇನು ? ಬರಗೂರು ರಾಮಚಂದ್ರಪ್ಪನವರ ಜಾತ್ಯಾತೀತತೆ ಒಂದು ನೋಟ, ಡಾ|| ಕಾ. ವೆಂ. ಶ್ರೀನಿವಾಸಮೂರ್ತಿಯವರ ಕನಸಿನ ಕರ್ನಾಟಕ – ಇಂತಹ ಲೇಖನಗಳು ಹೊಸತಿನ ಮೂಲಕ, ಕೆಲವೇ ಜನರಿಗೆ ತಲುಪುವ ವ್ಯವಸ್ಥೆ ಮಾಡಿದರೆ ಸಾಲದು. ಹೆಚ್ಚು ಜನಕ್ಕೆ ಮುಟ್ಟಿದರೆ ಈಗಿನ ವಾತಾವರಣದಲ್ಲಿ ಸಣ್ಣದಾದ ಆಶಾಕಿರಣ ಮೂಡಬಹುದೆಂಬ ಆಸೆ ನನ್ನದು. ಸಂಪಾದಕೀಯದಲ್ಲಂತೂ, ಪ್ರತಿ ತಿಂಗಳ ಪತ್ರಿಕೆಯಲ್ಲೂ, ಹೊಸರೀತಿಯ ಭಾವನೆಗಳನ್ನು ಕೆರಳಿಸುವ ಅಭಿಪ್ರಾಯಗಳು ಮೂಡಿಬರುತ್ತವೆ. ಈಗ ಚುನಾವಣೆಯ ತಿಂಗಳು ಪ್ರಾರಂಭವಾಗಿದೆ. ಇಂತಹ ಲೇಖನಗಳು ಜನಸಾಮಾನ್ಯರಿಗೆ ತಲುಪಲಾರವು. ಅದಕ್ಕಾಗಿ ವಿಷಾದವಾಗುತ್ತದೆ.

ತೀರ್ಥಹಳ್ಳಿ — *ಎನ್. ಕಿಟ್ಟಪ್ಪಗೌಡ*

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ ಇವರ ಲೇಖನ ''ನನ್ನ ಕನಸಿನ ಕರ್ನಾಟಕ''ಕ್ಕೆ ಸಂಬಂಧಿಸಿದಂತೆ ಒಂದು ಮಾತು. ಪರದೇಶದ ಒಟ್ಟು ಸಾಲದ ಭಾರವನ್ನು ದೇಶದ ೧೦೦ ಕೋಟಿಗೂ ಮಿಕ್ಕಿರುವ ಜನರಿಗೆ ಸರಿಸಮಾನವಾಗಿ ಹಂಚಿದರೆ ಪ್ರತಿಯೊಬ್ಬನ ಪಾಲು ನೂರು ರುಪಾಯಿಯೋ · ಸಾವಿರವೋ ಆದೀತು ಎಂಬ ಲೆಕ್ಕಾಚಾರವನ್ನು ಹಾಕಿದವರು ಸಮಾಜಶಾಸ್ತ್ರಜ್ಞ ಸ್ವಾಮಿ ಅಗ್ನಿವೇಶರು. ಇನ್ನೂ ಬೆಳೆಯುತ್ತಿರುವ ಸಾಲವನ್ನು ಸಂಪೂರ್ಣವಾಗಿ ಮರು ಪಾವತಿ ಮಾಡಲು ಒಂದು ಮಾರ್ಗ ಇದೆ ಎಂದು ಅವರೇ ಸೂಚಿಸಿರುವರು. ನಮ್ಮ ದೇಶದ ಬಂಡವಾಳಗಾರರು ಸ್ವಿಸ್ ಬೇಂಕಿನಲ್ಲಿ ಅಡಗಿಸಿಟ್ಟಿರುವ ಹಣವನ್ನು ರಾಷ್ಟ್ರೀಕರಣ ಮಾಡುವುದು ಮತ್ತು ಇದಕ್ಕೆ ನಮ್ಮ ಸಂವಿಧಾನದಲ್ಲಿ ಸೂಕ್ತವಾದ ವಿಧೇಯಕವನ್ನು ಅಂಗೀಕಾರ ಮಾಡುವುದು. ಇದರಿಂದ ನಾವು ಋಣಮುಕ್ತರಾಗಲು ಸಾಧ್ಯ ಎಂದಿದ್ದಾರೆ. ಎಷ್ಟಾದರೂ ಅದು ಹಣವಲ್ಲವೇ ?

ಸುರತ್ಕಲ್ — *ಟಿ. ಸಿ. ಶ್ರೀಯಾನ್*

### ಏಪ್ರಿಲ್ ಸಂಚಿಕೆ

ಕೆ. ಎಸ್. ರವಿಕುಮಾರ್‌ರವರ ''ಸುತ್ತಿಗೆಯ ಶ್ರಮ...'' ದೆಹಲಿಯ ಮತ್ತೊಂದು ಕಬ್ಬಿಣದ ಕಂಬದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡಿತು. ದೆಹಲಿಯ ಆಕರ್ಷಕ ಪ್ರೇಕ್ಷಣೀಯ ಸ್ಥಳವೆಂದರೆ 'ಕುತುಬ್ ಮಿನಾರ್' ಎಂದೇ ಹೆಸರಾಗಿರುವಾಗ ಲೋಹಶಾಸ್ತ್ರದ ಒಳಹೊರಗನ್ನು ಕೌತುಕದಿಂದ ನೋಡುವಂತೆ ಮಾಡುವ ಮೆಹರೌಲಿಯ ಕಬ್ಬಿಣದ ಕಂಬ ನಿಜಕ್ಕೂ ಅಚ್ಚರಿ ಮೂಡಿಸುತ್ತದೆ.

ಮೈಸೂರು — *ಕೊ. ಸು. ನರಸಿಂಹಮೂರ್ತಿ*

'ಗೂಡಿನಿಂದ ಬಯಲಿಗೆ' ಕವನ ಮನದಾಳದ ನೋವಿನ ಪ್ರತಿಬಿಂಬ. 'ಬೇರು' ಕಥೆ ಓದುತ್ತಾ ಹಿಂದಿನ ನೆನಪಾಯಿತು. ಸರಳ ನೇರನುಡಿಯ ಪಾಪು ತುಂಬಾ ಹಿಡಿಸಿತು. ಸುಮಾರು ೨೦ ವರ್ಷದ ಹಿಂದೆ ''ಪ್ರಪಂಚ'' ಪತ್ರಿಕೆ ಓದಿದ್ದೆ. ಈಗ ಅವರ ವ್ಯಕ್ತಿತ್ವ ತಿಳಿಯಿತು. ಅಪರೂಪದ ಗೌರಮ್ಮನವರ ವಿಚಾರ ತಿಳಿದು ಸಂತಸವಾಯಿತು. ಎಲ್ಲಾ ಕಡೆಯೂ ಸಹ ಇಂತಹ ಗೌರಮ್ಮನವರು ಹೆಚ್ಚಾದರೆ ಸಮಾಜ ಉದ್ಧಾರವಾಗುತ್ತದೆ.

ಹಚ್ಚೇವು ಕನ್ನಡದ ದೀಪ ಕನ್ನಡದ ನೆಲದಲ್ಲಿ ಜನಿಸಿ ಚೆನ್ನೈನಲ್ಲಿ ನಮ್ಮ ಕನ್ನಡದ ಹೆಸರನ್ನು ಉಳಿಸಿದ ಶೋಭಾಗೆ ಅಭಿನಂದನೆಗಳು.

ಪಾಂಡವಪುರ **ಆ. ಮೃತ್ಯುಂಜಯ**

ಮುಖಪುಟ ಶ್ರೀ ಕೆ. ಪಿ. ಸ್ವಾಮಿಯವರ ವರ್ಣಪಾರದರ್ಶಿಕೆ ಮುಸ್ಸಂಜೆಯ ಸೊಬಗಿನಲ್ಲಿ ಚೈತ್ರ ಚೇತನದ ಸವಿ ನೆನಪಿನ ಸಂಭ್ರಮ ಕಾಣುವಂತೆ ಮಾಡಿದೆ.

ಡಾ|| ಜಿ. ರಾಮಕೃಷ್ಣರವರು ಸಂಪಾದಕೀಯ ಲೇಖನದಲ್ಲಿ ''ನಾಗರಿಕತೆಯನ್ನು ಉಳಿಸಿಕೊಳ್ಳಲು ನಾವು ಬಂಡವಾಳಶಾಹಿಗಳನ್ನು ಹೊರದೂಡಲೇ ಬೇಕಾಗುತ್ತದೆ'' ಎಂದಿದ್ದಾರೆ. ಬಹುಕೋಟಿ ಭಾರತೀಯರು ಈ ಅಂಶವನ್ನು ಗಮನಿಸಬೇಕಾದುದು. ಬಹಳ ವೈಚಾರಿಕ ಸಲಹೆ ಕೊಟ್ಟಿದ್ದಾರೆ.

ಡಾ|| ಸಿದ್ದನಗೌಡ ಪಾಟೀಲರು ''ಈಗಿನ ಚುನಾವಣೆಯಲ್ಲಿ ಜನತೆಯ ನಿರೀಕ್ಷೆಗಳು'' ಲೇಖನದಲ್ಲಿ ನಮ್ಮ ರಾಜ್ಯದ - ದೇಶದ ಎಲ್ಲಾ ಪಕ್ಷಗಳಲ್ಲಿಯ ನ್ಯೂನತೆಗಳನ್ನು ಎಳೆ ಎಳೆಯಾಗಿ ಉದಾಹರಣೆ ಸಹಿತ ತಿಳಿಸಿದ್ದಾರೆ. ಅತಿ ಭ್ರಷ್ಟರೇ ತುಂಬಿರುವ ಪ್ರಜಾಪ್ರಭುತ್ವದಲ್ಲಿ ಕಡಿಮೆ ಭ್ರಷ್ಟರನ್ನು ಅವರಲ್ಲೇ ಆಯ್ಕೆ ಮಾಡಿಕೊಳ್ಳುವ ಅನಿವಾರ್ಯತೆ ಈಗಿನ ಪ್ರಬುದ್ಧ ಮತದಾರನ ದೌರ್ಭಾಗ್ಯವೇ ಸರಿ !

ಭಾನಾಪುರ **ಶಂಕರ ಕೆ. ಪತ್ತಾರ**

### ಬಾಲವಿಜ್ಞಾನ ಮತ್ತು ಬೆಳ್ಳಿಹಬ್ಬ

ಕರಾವಿಪ ಮತ್ತು 'ಬಾಲವಿಜ್ಞಾನ' ಕುರಿತ ಹಲವು ವಿಷಯಗಳನ್ನು ತಿಳಿಸಿಕೊಟ್ಟ ಲೇಖನ. ಆದರೆ, ಪ್ರಾರಂಭದಿಂದಲೂ ಅವುಗಳ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದ ಪ್ರೊ|| ಎಂ. ಎ. ಸೇತುರಾವ್ ಅದರಲ್ಲಿ ಕಾಣಿಸುತ್ತಿಲ್ಲ! ಕಣ್ತಪ್ಪಿತೆ ? ಅಥವಾ ವ್ಯಕ್ತಿ ರಂಗದ ಮೇಲಿರದ ಕಾರಣ ಆತನ ಸೇವೆಯೂ ಗೌಣವಾಯಿತೆನ್ನೋಣವೆ ?

ಬೆಂಗಳೂರು **ಪಿ. ಎಸ್. ರಾಜೇಶ್**

'ಬಾಲವಿಜ್ಞಾನ' ಮಾಸಪತ್ರಿಕೆ ಜನ್ಮ ತಳೆದ ಬಗ್ಗೆ ಪ್ರೊ|| ಎಂ. ಆರ್. ನಾಗರಾಜ್ ಬರೆದಿದ್ದಾರೆ. ಆ ಬಗ್ಗೆ ಕೆಲವು ವಾಸ್ತವ ವಿವರಗಳನ್ನು ನೀಡಬಯಸುತ್ತೇನೆ. ಕೇರಳ ಶಾಸ್ತ್ರ ಸಾಹಿತ್ಯ ಪರಿಷತ್ತಿನ ಮುಂದಾಳುಗಳಲ್ಲಿ ಒಬ್ಬರಾದ ಎಂ. ಪಿ. ಪರಮೇಶ್ವರನ್ ಅವರನ್ನು ಬರಮಾಡಿಕೊಂಡು ಅವರೊಂದಿಗೆ ವಿಚಾರ ವಿನಿಮಯ ಮಾಡಿಕೊಂಡದ್ದು ೧೯೭೭ರ ಸೆಪ್ಟೆಂಬರ್‌ನಲ್ಲಿ. ಆಗ ಕೈಗೊಂಡ ನಿರ್ಣಯವನ್ನು ಕಾರ್ಯಗತಗೊಳಿಸುವುದು ಒಂದು ಸಮಸ್ಯೆಯಾಯಿತು. ಪತ್ರಿಕೆ ಹೊರಡಿಸಲು ಒಂದು ವ್ಯವಸ್ಥೆ ಮತ್ತು ಅಗತ್ಯವಾಗುವಷ್ಟು ಹಣ ಬೇಕಷ್ಟೆ. ಸಂಸ್ಥೆ ಅಸ್ತಿತ್ವಕ್ಕೆ ಬಂದರೆ ಅದರ ವತಿಯಿಂದ ಪತ್ರಿಕೆಯನ್ನು ಹೊರತರ ಬಹುದು. ಆದರೆ, ಅಂಥ ಸಂಸ್ಥೆಯನ್ನು ಸ್ಥಾಪಿಸುವುದಕ್ಕಾಗಿಯೆ ಪತ್ರಿಕೆ ಅಗತ್ಯ ಎಂಬ ತೀರ್ಮಾನಕ್ಕೆ ಬರಲಾಗಿತ್ತು. ಈ ಸಮಸ್ಯೆಗೆ ಪರಿಹಾರ ಒದಗಿದುದು ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಲಿಯಿಂದ.

ಆ ಸಂಸ್ಥೆಯ ಧ್ಯೇಯೋದ್ದೇಶಗಳಲ್ಲಿ ''ವಿಜ್ಞಾನವನ್ನು ಜನಪ್ರಿಯಗೊಳಿಸುವುದು'' ಸಹ ಒಂದು ವಿಷಯ ಎಂಬುದನ್ನು ಗಮನಿಸಿದ ಎಂ. ಎ. ಸೇತುರಾಯರು ಆಗ ಆ ಸಂಸ್ಥೆಯ ಕಾರ್ಯ ನಿರ್ವಾಹಕ ಕಾರ್ಯದರ್ಶಿ ಯಾಗಿದ್ದರು. ಅವರು ಈ ಅಂಶವನ್ನು ಸಂಸ್ಥೆಯ ಕಾರ್ಯದರ್ಶಿ ಪ್ರೊ|| ಎ. ಕೆ. ಎನ್. ರೆಡ್ಡಿಯವರ ಗಮನಕ್ಕೂ ಕಾರ್ಯಕಾರೀ ಸಮಿತಿಯ ಅಧ್ಯಕ್ಷ ಪ್ರೊ|| ಸತೀಶ್ ಧಾವನ್ ಅವರ ಗಮನಕ್ಕೂ ತಂದು, ಆ ಸಂಸ್ಥೆಯು ಪತ್ರಿಕೆಯ ಪ್ರಕಟಣೆಗೆ ಪ್ರಾರಂಭಿಕ ನೆರವು ನೀಡುವುದು ಯುಕ್ತ ಎಂಬುದನ್ನು ಅವರಿಗೆ ಮನವರಿಕೆ ಮಾಡಿಕೊಟ್ಟರು. ನಂತರ ಶ್ರೀ ಸೇತುರಾಯರ ಸಂಚಾಲಕತ್ವದಲ್ಲಿ ಹತ್ತು ಜನರ ಕಾರ್ಯನಿರ್ವಾಹಕ ತಂಡವನ್ನು ರಚಿಸಿ, ಪತ್ರಿಕೆಯ ಪ್ರಕಟಣೆಗೆ ಸುಮಾರು ೯೦ ಸಾವಿರ ರೂಪಾಯಿಗಳ ವಾರ್ಷಿಕ ಬಜೆಟ್ ತಯಾರಿಸಿ ಎಲ್ಲದಕ್ಕೂ ಕಾರ್ಯಕಾರೀ ಸಮಿತಿಯ ಅನುಮೋದನೆಯನ್ನು ದೊರಕಿಸಿಕೊಂಡರು.

ಕಾರ್ಯನಿರ್ವಾಹಕ ತಂಡವು ೧೯೭೭ರ ನವಂಬರ್‌ನಲ್ಲಿ ನಡೆಸಿದ ಮೊದಲ ಸಭೆಯಲ್ಲಿ ಪತ್ರಿಕೆಯ ಆಕಾರ, ಗಾತ್ರ ಮತ್ತಿತರ ವಿವರಗಳ ಬಗ್ಗೆ ಯುಕ್ತ ತೀರ್ಮಾನಗಳನ್ನು ಕೈಗೊಂಡು ಜೆ. ಆರ್. ಲಕ್ಷ್ಮಣರಾವ್, ಎಂ. ಎ. ಸೇತುರಾವ್, ಶ್ರೀಮತಿ ಹರಿಪ್ರಸಾದ್ ಮತ್ತು ಡಿ. ಆರ್. ಬಳೂರಗಿ ಅವರನ್ನೊಳಗೊಂಡ ಒಂದು ಸಂಪಾದಕ ಮಂಡಳಿಯನ್ನು ರಚಿಸಿ ಒಂದು ಸಾವಿರ ಪ್ರತಿಗಳ ಒಂದು ಪ್ರಾಯೋಗಿಕ ಸಂಚಿಕೆಯನ್ನು ಆದಷ್ಟು ಬೇಗ ಹೊರತರುವ ಜವಾಬ್ದಾರಿಯನ್ನು ಸಂಪಾದಕ ಮಂಡಳಿಗೆ ವಹಿಸಿತು.

ಪ್ರಾಯೋಗಿಕ ಸಂಚಿಕೆ ೧೯೭೮ರ ಜೂನ್ ತಿಂಗಳಲ್ಲಿ ಸಿದ್ಧವಾಯಿತು. ಅದರ ಪ್ರತಿಗಳನ್ನು ಆಸಕ್ತ ವ್ಯಕ್ತಿಗಳಿಗೂ ಆಯ್ದ ಕೆಲವು ಶಾಲೆಗಳಿಗೂ ಸಂಘಸಂಸ್ಥೆಗಳಿಗೂ ಕಳುಹಿಸಿಕೊಟ್ಟು ಅವರ ಅಭಿಪ್ರಾಯಗಳನ್ನೂ ಸಲಹೆಗಳನ್ನೂ ಸಂಗ್ರಹಿಸಲಾಯಿತು. ಅವುಗಳ ಬೆಳಕಿನಲ್ಲಿ ಸಾಧ್ಯವಿದ್ದ ಮಾರ್ಪಾಟುಗಳನ್ನು ಮಾಡಿ, ಮಾಸಿಕದ ಮೊದಲ ಸಂಚಿಕೆಯನ್ನು ಆ ವರ್ಷದ ರಾಜ್ಯೋತ್ಸವದ ದಿನ (ನವೆಂಬರ್ ೧, ೧೯೭೮) ಹೊರತರಲಾಯಿತು.

ಮೈಸೂರು **ಜೆ. ಆರ್. ಲಕ್ಷ್ಮಣರಾವ್**

### 'ಫೀಲ್ ಗುಡ್' ಯಾರಿಗೆ ?

ಭಾಜಪ ನೇತೃತ್ವದಲ್ಲಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ವಾಜಪೇಯಿ ಸರ್ಕಾರ ವರ್ಷಕ್ಕೆ ಒಂದು ಕೋಟಿ ಉದ್ಯೋಗದ ಭರವಸೆ ನೀಡುತ್ತಾ ಬಂದ ಸರ್ಕಾರ. ಈಗ ಮತ್ತೆ ಚುನಾವಣೆಯಲ್ಲಿ ಸ್ಪರ್ಧಿಸುತ್ತಿದೆ. ಸುಳ್ಳು ಭರವಸೆ ಗಳಿಂದಾಗಿ ಈಗಾಗಲೇ ಇರುವ ಉದ್ಯೋಗಗಳನ್ನು ಕಸಿದುಕೊಳ್ಳುತ್ತಿದೆ. ೧೯೯೯ರ ಚುನಾವಣ ಪ್ರಣಾಳಿಕೆ ಯಲ್ಲಿ ವರ್ಷಕ್ಕೆ ಒಂದು ಕೋಟಿ ಉದ್ಯೋಗದ ಭರವಸೆ ನೀಡಲಾಗಿತ್ತು. ಉದಾರೀಕರಣದ ನೀತಿಗಳಿಂದಾಗಿ ಅತೃಪ್ತಿಗೊಂಡ ಜನರನ್ನು ಓಲೈಸಿ ಚುನಾವಣೆಯಲ್ಲಿ ಗೆಲ್ಲಲು ಈ ಭರವಸೆಯನ್ನು ನೀಡಲಾಗಿತ್ತು. ಹಿಂದೆ ಪಿ. ವಿ. ನರಸಿಂಹರಾಯರ ಕಾಂಗ್ರೆಸ್ ಸರ್ಕಾರ ಹಾಗೂ ಇಂದಿನ ವಾಜಪೇಯಿಯವರ ಬಿ.ಜೆ.ಪಿ. ಸರ್ಕಾರದಿಂದ ಯುವ ಜನತೆಗೆ ಈ ಭರವಸೆಗಳನ್ನು ನೀಡ ಲಾಗುತ್ತಿದೆ.

ದೇಶದಲ್ಲಿ ೯೩೯ ಉದ್ಯೋಗ ವಿನಿಮಯ ಕಛೇರಿಗಳಲ್ಲಿ ಉದ್ಯೋಗ ಕ್ಕಾಗಿ ನೋಂದಾಯಿಸಿಕೊಂಡಿರುವ ವಿದ್ಯಾವಂತ ನಿರುದ್ಯೋಗಿಗಳ ಸಂಖ್ಯೆ ೪.೧೬ ಕೋಟಿಯಾಗಿದೆ. ೧೯೯೩-೯೪ರಲ್ಲಿ ಶೇ. ೫.೯೯ರಷ್ಟಿದ್ದ ನಿರುದ್ಯೋಗದ ಪ್ರಮಾಣವು ೧೯೯೯-೨೦೦೦ದಲ್ಲಿ ಶೇ. ೭.೩೨ ರಷ್ಟಾಗಿದೆ. ೧೯೮೭-೯೪ರ ನಡುವೆ ವರ್ಷಕ್ಕೆ ಶೇ. ೨.೩೭ರಷ್ಟು ಉದ್ಯೋಗಗಳು ಸೃಷ್ಟಿಯಾಗುತ್ತಿದ್ದ ಪ್ರಮಾಣವು ೧೯೯೪-೨೦೦೦ರ ನಡುವೆ ಶೇ. ೧.೦೫ಕ್ಕೆ ಇಳಿದಿದೆ. ೧೯೯೧-೨೦೦೦ರ ನಡುವಿನಲ್ಲಿ ಕೇಂದ್ರದ ಸಾರ್ವಜನಿಕ ಉದ್ದಿಮೆಗಳೊಂದರಲ್ಲೆ ೩,೨೫,೦೦೦ ಉದ್ಯೋಗಗಳು ಕಡಿಮೆಯಾಗಿವೆ.

ಜಾಗತೀಕರಣ, ಖಾಸಗೀಕರಣ, ಉದಾರೀಕರಣ ನೀತಿಗಳಿಂದಾಗಿ ಬೃಹತ್ ಕೈಗಾರಿಕೆಗಳು ಹಾಗೂ ಸಾವಿರಾರು ಸಣ್ಣ ಕೈಗಾರಿಕೆಗಳ ಮುಚ್ಚುವಿಕೆಯಿಂದಾಗಿ ಲಕ್ಷಾಂತರ ಉದ್ಯೋಗಸ್ಥರು ಉದ್ಯೋಗ ಕಳೆದು ಕೊಂಡಿದ್ದಾರೆ. ಇದು ಅಲ್ಲದೆ, ಖಾಯಂ ಉದ್ಯೋಗ ಗಳನ್ನು ಗುತ್ತಿಗೆ ಉದ್ಯೋಗಗಳನ್ನಾಗಿ ಮಾರ್ಪಡಿಸುವ, ಅರೇ ಉದ್ಯೋಗಿಗಳನ್ನಾಗಿಸುವ ಪ್ರಕ್ರಿಯೆ ಜರಗುತ್ತಿದೆ.

ನಿರುದ್ಯೋಗದ ಹೆಚ್ಚಳಕ್ಕೆ ಕಾರಣವಾದ ಆಳುವ ವರ್ಗವೇ ಒಂದು ರಾಜ್ಯದ ಜನರನ್ನು ಇನ್ನೊಂದು ರಾಜ್ಯದ ಜನರ ಮೇಲೆ ಎತ್ತಿಕಟ್ಟಿ ತಮಾಷೆ ನೋಡುತ್ತಿರುವುದು ವಿಪರ್ಯಾಸ. ಇವೇ ಶಕ್ತಿಗಳು ಕೋಮುವಾದವನ್ನು ಹರಿಯಬಿಟ್ಟು ಜನರ ಐಕ್ಯತೆಯನ್ನು ಮುರಿಯುತ್ತಿವೆ. ಇಂತಹ ಸಂದಿಗ್ಧತೆಯಲ್ಲಿ ಐಕ್ಯ ಭಾರತವನ್ನು ಉಳಿಸಿ ಬೆಳೆಸುವುದು ಹೇಗೆ ? ಎಂಬುದನ್ನು ಎಲ್ಲಾ ಪ್ರಗತಿಪರ ಚಿಂತಕರು ಗಹನವಾಗಿ ಆಲೋಚಿಸಿ, ಕಾರ್ಯರೂಪಕ್ಕೆ ಇಳಿಸಬೇಕಾಗಿದೆ.

ಹೂವಿನ ಹಡಗಲಿ **ಕರಿಬಸಪ್ಪ ಪರಶೆಟ್ಟಿ**

### ಚುನಾವಣೆ

ನಮ್ಮಲ್ಲಿ ಕೇವಲ ಅಧಿಕಾರ ಇದ್ದವರು ಸಂಪೂರ್ಣ ರೀತಿಯಲ್ಲಿ ಸ್ವಾತಂತ್ರ್ಯವನ್ನು ತಮ್ಮ ಹಿತ ಹಾಗೂ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವುದರಲ್ಲಿ ಯಶಸ್ವಿಯಾದರೂ, ಪ್ರಗತಿಯೆನ್ನುವುದು ಇತರರು ಬೆಳೆದಾಗ ತಮ್ಮ ಪ್ರಗತಿ ಸಾಧ್ಯ ಎನ್ನುವುದನ್ನು ಮರೆತಿದ್ದಾರೆ.

ದೇಶವು ಪ್ರಗತಿಯ ಮಾರ್ಗದಲ್ಲಿ ನಡೆಯಬೇಕಾದರೆ ಅಲ್ಪಸಂಖ್ಯಾತರು, ಹಿಂದುಳಿದ ಜನಜಾತಿಯವರು ಮತ್ತು ಇತರರಲ್ಲಿ ಸಾಮರಸ್ಯ ಉಂಟುಮಾಡಬೇಕು. ಮತ್ತು ದೇಶದ ಸಂಪನ್ಮೂಲವು ದೇಶದಲ್ಲಿಯೇ ಹೆಚ್ಚಿನ ರೀತಿ ಯಲ್ಲಿ ಬೆಳೆದಾಗ ಅಸಮಾನತೆ ದೂರ ಮಾಡಲು ಸಾಧ್ಯ.

ಕೊಪ್ಪಳ **- ಎ. ವಿ. ನರಗುಂದ**

## ದೌರ್ಜನ್ಯಗಳ ಬಲೆಯಲ್ಲಿ ಮಹಿಳೆಯರು

ಅನೇಕ ಶತಮಾನಗಳಿಂದಲೂ ಮಹಿಳೆ ಶೋಷಣೆಗೆ ಒಳಪಡುತ್ತಿದ್ದಾಳೆ. ಹಿಂದಿನ ಕಾಲದಲ್ಲಿ ಒಂದು ರೀತಿಯ ಶೋಷಣೆಯಾದರೆ ಈಗಿನ ಕಾಲದ ಶೋಷಣೆಯ ರೀತಿಯೇ ಒಂದು ಸಲ ವಿಚಿತ್ರವೆನಿಸುತ್ತದೆ, ಅಲ್ಲವೇ ?

ಕರ್ನಾಟಕ ರಾಜ್ಯದಲ್ಲೇ ಮುಂದುವರೆದ ನಗರವಾದ ಬೆಂಗಳೂರಿನಲ್ಲೇ ಅಲ್ಲದೆ ಪ್ರಪಂಚದ ಅನೇಕ ಭಾಗಗಳಲ್ಲಿ ದಿನಕ್ಕೆ ನೂರಾರು ಹೆಣ್ಣಿನ ಹತ್ಯೆ ಮತ್ತು ಶೋಷಣೆಗೆ ಸಿಕ್ಕಿ ಬೀಳುವಂತಹ ವಿಷಯಗಳು ಅಶ್ಚರ್ಯವೇನಲ್ಲ? ಈ ಪಿತೃಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರು ಇಂದಿಗೂ ಎರಡನೆ ದರ್ಜೆಯ ಪ್ರಜೆಗಳಾಗಿಯೇ ಬದುಕುತ್ತಿರುವುದು ನಗ್ನಸತ್ಯ. ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಮತ್ತು ಲೈಂಗಿಕವಾಗಿ ಅಂದಿನಿಂದ ಇಂದಿಗೂ ಎಲ್ಲಾ ತರಹದ ಶೋಷಣೆಗೆ ಅವರು ಬಲಿಪಶುಗಳಾಗುತ್ತಿದ್ದಾರೆ.

ವರದಕ್ಷಿಣೆ ಪಿಡುಗು ಇಂದಿನ ಸನ್ನಿವೇಶದಲ್ಲಿ ಸಾರಾಯಿ ಅಮಲಿನಂತೆ ಅವತರಿಸಿದೆ. ಅದರಲ್ಲೂ ಶಿಕ್ಷಿತ ಸಮುದಾಯದ ಯುವತಿಯರು ಹಾಗೂ ದೊಡ್ಡ ಉದ್ಯೋಗದಲ್ಲಿರುವ ಯುವತಿ ವಿವಾಹವಾಗಬೇಕಾದರೆ ಲಕ್ಷ-ಲಕ್ಷ ವರದಕ್ಷಿಣೆ, ಬೆಳ್ಳಿ, ಬಂಗಾರ ಹಾಗೂ ಎಲೆಕ್ಟ್ರಾನ್ ವಸ್ತುಗಳೊಂದಿಗೆ ರೆಡಿಯಾಗಿರಬೇಕು. ಹಸುವಿನ ಕೊರಳಿಗೆ ಹಗ್ಗ ಕಟ್ಟುವಂತೆ ''ತಾಳಿ'' ಎಂಬ ಹಗ್ಗದೊಂದಿಗೆ ಯುವತಿಯ ಕೊರಳು ಅಲಂಕಾರಗೊಂಡಿರಬೇಕು. ಉದ್ಯೋಗದಲ್ಲಿರುವ ಈ ಸ್ತ್ರೀಯರ ಸಮಸ್ಯೆಯೇ ಹೀಗಾದರೆ ಇನ್ನು ಕಡು ಬಡತನದಲ್ಲಿರುವ ಹಾಗೂ ಮಧ್ಯಮ ವರ್ಗದ ಮಹಿಳೆಯರ ಭವಿಷ್ಯವೇನು ?

ಸಿನಿಮಾಗಳಲ್ಲಿ ಇಂದು ''ಸ್ತ್ರೀ''ಯರನ್ನು ಅನುಭೋಗ ವಸ್ತುಗಳಂತೆ ಪ್ರದರ್ಶಿಸುತ್ತಿರುವುದು ಆತಂಕಕಾರಿ ಬೆಳವಣಿಗೆಯಾಗಿದೆ.

ಒಬ್ಬ ಬಡಸ್ತ್ರೀ ಬಿಸಿಲಿನಲ್ಲಿ ಪುರುಷನಷ್ಟೇ ಸಮಾನವಾಗಿ ದುಡಿದರೂ ಪುರುಷನಿಗೆ ಕೊಡುವ ಕೂಲಿಯಲ್ಲಿ ಅದರ ಅರ್ಧದಷ್ಟು ಕೂಲಿಯನ್ನು ನೀಡಿ ವಂಚನೆ ಮಾಡುತ್ತಿರುವುದು ಸರಿಯೇ ?...

ಅದರಲ್ಲೂ ಹೆಣ್ಣು ಭ್ರೂಣ ಹತ್ಯೆ, ಹೆಣ್ಣಿನ ಅತ್ಯಾಚಾರದ ಪ್ರಕರಣಗಳು ದಿನೇ ದಿನೇ ಹೆಚ್ಚುತ್ತಲೇ ಇವೆ.

ಅತ್ಯಾಚಾರ ಮಾನಭಂಗಗಳಂತಹ ವಿಷಯಗಳಲ್ಲಿ ನಮ್ಮ ರಾಜಕಾರಣಿಗಳನ್ನು ಹಾಗೂ ಪೊಲೀಸ್‌ರನ್ನು ನಂಬಿಕೊಂಡರೆ, ಮಹಿಳೆಯರ ಸಮಸ್ಯೆಗಳಿಗೆ ಪರಿಹಾರ ಹುಡುಕ ಹೊರಟರೆ ಅದು ಮೂರ್ಖತನದ ಪರಮಾವಧಿಯಾಗುತ್ತದೆ.

ಇನ್ನು ಗಂಡನನ್ನು ಬಿಟ್ಟು ಬಂದಂತಹ ಹೆಣ್ಣಿಗೆ ಯಾರು ದಿಕ್ಕು ? ಇತ್ತಕಡೆ ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎಂಬಂತೆ ಯಾವುದೋ ಒಂದು ನೆಪ ಹೇಳಿ ಕಳುಹಿಸಿಬಿಡುತ್ತಾರೆ. ಇಂತಹ ಒಂದು ಸನ್ನಿವೇಶದಿಂದ ಗಂಡನ ಮನೆಯಲ್ಲಿ ಹೆಣ್ಣಿನ ಸಾವು ದುರಂತಗಳು ಸಂಭವಿಸಿರುವುದು ಹಲವಾರು. ಇಲ್ಲವೆ ಮನೆಯಲ್ಲಿಯೇ ಹೈಕೋರ್ಟ್ ಪೀಠ ಸ್ಥಾಪನೆ ಮಾಡಿ ನ್ಯಾಯ, ಪಂಚಾಯಿತಿಗಳನ್ನು ಮಾಡಿ, ಅನಿಷ್ಟಕ್ಕೆಲ್ಲ ಶನೇಶ್ವರನೇ ಮೂಲ ಎಂಬಂತೆ, ಗಂಡನದ್ದೇ ತಪ್ಪಿದ್ದು ಆ ತಪ್ಪನ್ನು ಮುಚ್ಚಿ ಹೆಣ್ಣಲ್ಲೇ ತಪ್ಪು ಇರುವುದೆಂದು ಭಾವಿಸಿ ಹೋಗಲಿ ಬಿಡು ಎಂದು ಸಮಾಧಾನ ಮಾಡಿ ಆಕೆಯನ್ನು ಗಂಡನ ಮನೆ ಎಂಬ ನರಕ ಕೂಪಕ್ಕೆ ಕಳುಹಿಸಿಬಿಡುತ್ತಾರೆ.

ಎಷ್ಟೋ ಜನ ಸಮಾಜ ಸುಧಾರಕರು, ಮುಖ್ಯ ಮಂತ್ರಿಗಳು, ಪ್ರಧಾನ ಮಂತ್ರಿಗಳು ಬಂದುಹೋಗಿದ್ದಾರೆ. ಇವರೆಲ್ಲ ಹೆಣ್ಣಿನ ಸಮಸ್ಯೆಗಳನ್ನು, ಆಕೆಗೆ ನಡೆಯುವ ಅವಮಾನ, ಅತ್ಯಾಚಾರಗಳು, ಅನ್ಯಾಯಗಳನ್ನು ಎಷ್ಟು ಮಾತ್ರ ನಿವಾರಣೆ ಮಾಡಿದ್ದಾರೆ ? ಅಹಂಕಾರಕ್ಕೆ ಉದಾಸೀನವೇ ಮದ್ದು, ಎಂಬಂತೆ ಅವರ ಇಚ್ಛೆಗೆ ಬಿಟ್ಟಿದೆ.

ಈ ಪ್ರಪಂಚದಲ್ಲಿ ಇನ್ನು ಎಷ್ಟೆಲ್ಲಾ ಬದಲಾವಣೆಗಳಾದರೂ ಹೆಣ್ಣಿನ ಗೋಳು, ಕಷ್ಟ ಆಕೆಗೆ ಅನುಭವಿಸುವುದು ತಪ್ಪಿವೆಯೇ ?

ದೊಡ್ಡಬಳ್ಳಾಪುರ **ಡಿ. ಎಸ್. ಸುವರ್ಣ**

---

*(೩ನೇ ಪುಟದಿಂದ.... ಈ ತಿಂಗಳು)*

ಶ್ಲಾಘನೀಯ ಪ್ರಯತ್ನವೆಂದು ಹೇಳಲಾಯಿತು. ಸಾವಿರಾರು ವರ್ಷಗಳ ಹಿಂದಿನ ಸಾಂಸ್ಕೃತಿಕ ದಾಖಲೆಗಳನ್ನು ಹಾಳುಮಾಡಿದ್ದು ತಾವೇ ಎಂದು ಬಿಬಿಸಿ ಹೇಳಲಿಲ್ಲ. ಸದ್ದಾಂ ಕಾಲದಲ್ಲಿ ರಂಗಮಂದಿರವೇ ಇರಲಿಲ್ಲವಂತೆ; ಎಲ್ಲೋ ಒಂದೊಂದು ಇರುತ್ತಿದ್ದ ರಂಗಮಂದಿರಗಳಲ್ಲಿ ನಗೆನಾಟಕ ಮಾತ್ರ ಪ್ರದರ್ಶಿಸಲಾಗುತ್ತಿತ್ತು. ಈಗ ಬ್ರಿಟನ್ ಮತ್ತು ಅಮೆರಿಕಾ ಒಂದು ಸುಸಜ್ಜಿತ ರಂಗಮಂದಿರ ಕಟ್ಟಿಕೊಟ್ಟಿದ್ದಾರೆ. ಯುದ್ಧದ ಭೀಕರತೆಯನ್ನು ಪ್ರತಿಬಿಂಬಿಸುವ ನಾಟಕಗಳು ನಡೆಯುತ್ತವೆ. ತನ್ನ ಮಗನನ್ನು ಯುದ್ಧದಲ್ಲಿ ಕಳೆದುಕೊಂಡ ತಾಯಿಯ ಆಕ್ರಂದನ ಈಗ ರಂಗಮಂದಿರದಲ್ಲಿ ನೋಡಬಹುದು. ಎಂಥ ಮಹತ್ತರ ಕೊಡುಗೆ ! ಆದರೆ ಕೃತ್ರಿಮತೆ ಇರುವುದು ಇದರಲ್ಲೇ : ತಾಯಿಯ ಆಕ್ರಂದನವು ಇಂದಿನ ತಾಯಿಯದಲ್ಲ; ಇರಾನ್ ಮೇಲೆ ಸದ್ದಾಂ ನಡೆಸಿದ ಯುದ್ಧದ ಕಾಲದ ತಾಯಿಯದು !! ಅಂದು ಅವನಿಗೆ ಬೆಂಬಲ ನೀಡಿದ್ದವರು ಅಮೆರಿಕಾ ಮತ್ತು ಬ್ರಿಟನ್ ಎಂಬುದನ್ನು ಮಾತ್ರ ಹೇಳುವುದಿಲ್ಲ.

* * *

ಭಾರತೀಯ ಜನತಾ ಪಕ್ಷ ಸುಸಂಸ್ಕೃತರ ಪಕ್ಷವೆಂಬ ಪ್ರತೀತಿಯನ್ನು ವ್ಯಾಪಕವಾಗಿ ಹಬ್ಬಿಸಲಾಗಿದೆ. ಅಂತಹ ಪಕ್ಷದ ಒಬ್ಬ ಸಭ್ಯ ಸಚಿವ ಗುಜರಾತಿನಲ್ಲಿದ್ದಾನೆ. ಆತನ ಮಗ ಗೋಧ್ರಾದಲ್ಲಿದ್ದಾನೆ. ಏಪ್ರಿಲ್ ೫ರಂದು ಅವನ ಮನೆಯಲ್ಲಿ ೧೪ ಲಕ್ಷ ರೂಪಾಯಿ ಮೌಲ್ಯದ, ವಿದೇಶಕ್ಕೆ ರಫ್ತಾಗುವಂತಹ, ಮದ್ಯವನ್ನು ಪತ್ತೆ ಹಚ್ಚಿದಾಗ ಆ ಸುಸಂಸ್ಕೃತ ಪುತ್ರ ಕದ್ದೋಡಿದ. ಅವನ ಪತ್ನಿಯನ್ನು ಪೊಲೀಸರು ಬಂಧಿಸಿದರು. ಆಕೆಯನ್ನೇಕೆ ಬಂಧಿಸಬೇಕಾಗಿತ್ತು ? ಏಕೆಂದರೆ, ಗಂಡನ ಶೀಲವನ್ನು ಕಾಪಾಡಲು ಈ ಸಾಧ್ವೀಮಣಿ ಪೊಲೀಸರಿಗೆ ಕಲ್ಲುಗಳಿಂದ ಹೊಡೆಯುವ ವೀರವನಿತೆಯಾದಳು ! ಆತನ ಹೆಸರು ಪ್ರವೀಣ್‌ಸಿಂಹ ಚೌಹಾನ್. ಅವರಪ್ಪ ಗೋಸಂರಕ್ಷಣೆ ಮತ್ತು ಯಾತ್ರೆಯ ವಿಭಾಗದ ಸಚಿವ. ಗೋಸಂರಕ್ಷಕ ಸಾಧುಗಳು ಹೆಂಡದ ದೊರೆಯನ್ನು ರಕ್ಷಿಸಹೊರಟಾಗ ಪೊಲೀಸರು ಗಾಳಿಯಲ್ಲಿ ಗುಂಡು ಹಾರಿಸಬೇಕಾಯಿತು. ತನ್ನ ಮಗನಿಗೂ ತನಗೂ ಸಂಬಂಧವಿಲ್ಲವೆಂದು ಸಚಿವರು ಹೇಳಿದ್ದಾರಂತೆ. ಇದನ್ನೇ ಬೇರೆ ರೀತಿಯಲ್ಲಿ ಲಾಲ್‌ಜಿ ಟಂಡನ್ ಸಂದರ್ಭದಲ್ಲಿ ಭಾಜಪ ಮಾಡಿದ್ದು. ಸೀರೆಗಳಿಗೂ ತನಗೂ ಸಂಬಂಧವಿಲ್ಲವೆಂದು ಪಕ್ಷ ಹೇಳಿದ್ದು ಸ್ಮರಣಾರ್ಹ. ''ಸಂಸ್ಕೃತಿ'' ಎಷ್ಟು ನೀಚಮಟ್ಟ ಮುಟ್ಟಬಹುದೆಂಬುದಕ್ಕೆ ಎಷ್ಟು ನಿದರ್ಶನಗಳು ಬೇಕು ?

ಚುನಾವಣಾ ಪ್ರಚಾರ ಮುಗಿಯುವ ದಿನ (ಏಪ್ರಿಲ್ ೧೮) ವಾಜಪೇಯಿ ನಾಗಪುರದಲ್ಲಿ ಹೇಳಿದರು : ''ಈ ಸಮ್ಮಿಶ್ರ ಸರ್ಕಾರಗಳು ತಲೆನೋವು ತಂದಿವೆ. ಆ ಹೊರೆಯಿಂದ ಮತದಾರರು ಭಾಜಪವನ್ನು ಮುಕ್ತಗೊಳಿಸಬೇಕು; ಆ ಪಕ್ಷಕ್ಕೆ ಸ್ವತಂತ್ರ ಬಹುಮತ ನೀಡುವ ಮೂಲಕ.'' ಎಂಥಾ ಕೆಳಮಟ್ಟದ ರಾಜಕೀಯ ಮೌಲ್ಯ ಇದು ! ಹಾಗಿದ್ದರೆ ಮಿತ್ರಕೂಟ ಮಾಡಿಕೊಳ್ಳಬೇಕಿತ್ತೇಕೆ ? ಸ್ವತಂತ್ರವಾಗಿ ಚುನಾವಣೆ ಎದುರಿಸ ಬಹುದಿತ್ತಲ್ಲವೆ ? ''ಮಿತ್ರಪಕ್ಷಗಳಿಗೆ'' ತಮ್ಮ ಮೂರ್ಖತನದ ಅರಿವಾದದ್ದು ಕಡೆಯ ದಿನವಾದ್ದರಿಂದ ಅವರು ಮತದಾರರ ಬಳಿ ಹೋಗಿ ತಾವು ಭಾಜಪದ ಜೊತೆಯವರಲ್ಲ, ಭಾಜಪಕ್ಕೆ ಮತ ನೀಡಬೇಡಿರೆಂದು ಹೇಳುವಂತೆಯೂ ಇಲ್ಲ. ಭಾಜಪದ ನೇತಾರ ವಾಜಪೇಯಿ ಬಹಳ ಕೌಶಲ್ಯವಿರುವ ಬುದ್ಧಿವಂತರು, ಆದರೆ ಆ ಬುದ್ಧಿವಂತಿಕೆ ಬೆನ್ನಿಗೆ ಚೂರಿ ಹಾಕುವಂತಹದ್ದು. ಎನ್. ಡಿ. ಎ. ಸಂಚಾಲಕ ಜಾರ್ಜ್ ಫರ್ನಾಂಡೀಸ್ ಈಗೇನು ಮಾಡಬೇಕು ? ''ಮಿತ್ರಪಕ್ಷಗಳ'' ನಾಯಕಮಣಿಗಳ ಜೊತೆ ಅಯೋಧ್ಯೆಗೆ ಹೋಗಿ ಒಂದಷ್ಟು ಮಣ್ಣು ಮುಕ್ಕಬಹುದು. ಆದರೆ ಇಷ್ಟು ದಿನಗಳ ಪಾಪಕಾರ್ಯದ ಭಾರ ಕಳೆದು ಕೊಳ್ಳಲಾಗುವುದಿಲ್ಲ; ದೇಶದ ತಲೆಯ ಮೇಲೆ ಚಪ್ಪಡಿ ಎಳೆದವರಿಗೆ ಏನು ಶಿಕ್ಷೆಯೆಂಬುದನ್ನು ನಾಡಿನ ಪ್ರಜೆಗಳು ತೀರ್ಮಾನಿಸುತ್ತಾರೆ. ಅಥವಾ ಅದ್ವಾನಿಯವರಿಗೆ ಪ್ರಧಾನಿಯ ಪಟ್ಟ ದಕ್ಕದಿರುವಂತೆ ಮಾಡಲು ವಾಜಪೇಯಿಯವರ ಕಡೆಯ ಪಟ್ಟೂ ಇದಾಗಿರಬಹುದಲ್ಲವೆ ?

ನಾಗಪುರದಲ್ಲಿ ಹೇಳಿದ್ದು ಬಿಸಿ ತುಪ್ಪವಾದಾಗ ಯಥಾಪ್ರಕಾರ ತಾವು ಹಾಗೆ ಹೇಳಿದ್ದಲ್ಲವೆಂದು ವಾಜಪೇಯಿ ಜಾರಿಕೊಳ್ಳಲು ಯತ್ನಿಸಿದ್ದಾರೆ. ಇನ್ನೂ ಚುನಾವಣೆ ಪೂರ್ತಿಯಾಗಿಲ್ಲದಿರುವುದರಿಂದ ಈ ಸೋಗು ಬೇಕು. ಆದರೆ ಅವರ ಹಾಗೂ ಅವರ ಪಕ್ಷದ ಆಶಯ ಸ್ಪಷ್ಟವಾಗಿದೆ.

ಎಂತಹ ಮೂಢರು ನಮ್ಮನ್ನಾಳಲು ಬಯಸುತ್ತಾರೆ, ನೋಡಿ. ಕನಕಪುರ ಲೋಕಸಭಾ ಕ್ಷೇತ್ರದ ಭಾಜಪ ಅಭ್ಯರ್ಥಿ ಉಮೇದುವಾರಿಕೆ ಸಲ್ಲಿಸಲು ಹೋದಾಗ ದಿಕ್ಸೂಚಿ ತೆಗೆದುಕೊಂಡು ಹೋಗಿದ್ದರು. ಕನಕಪುರದಲ್ಲೇ ದಿಕ್ಕು ಕಾಣದ ಇವರು ದೆಹಲಿಗೆ ಹೋದರೆ ಏನು ಗತಿ ! ಗ್ರಹಗತಿಯ ಪ್ರಕಾರ ಈ ಮಹಾನುಭಾವರು ಗೆಲ್ಲಲೇಬೇಕು. ಆದರೆ ಅವರ ದಿಕ್ಸೂಚಿ ವಿಶಿಷ್ಟವಾದ್ದಿರಬೇಕು. ಅದನ್ನು ಬಳಸಿ ಬೇರೆಯವರೂ ಗ್ರಹಗತಿ ತಿಳಿದುಕೊಂಡರೆ ಶನಿಮಹಾರಾಜನಿಗೆ ಫಜೀತಿ. ಅವನು ಯಾರನ್ನು ಗೆಲ್ಲಿಸಬೇಕೆಂಬ ಸಂದಿಗ್ಧತೆ ಅವನನ್ನು ಕಾಡುತ್ತದೆ. ಇಂತಹವರು ದೇಶದ ನೀತಿ ನಿರೂಪಣೆ ಮಾಡುವಂತಾದರೆ ದೇಶಕ್ಕೆ ಶನಿಕಾಟ ತಪ್ಪಿದ್ದಲ್ಲ.

*(೫ನೇ ಪುಟದಿಂದ.... ಸಂಪಾದಕೀಯ)*

ಮನೆಮನೆಗೂ ಹಂಚುತ್ತಾರೆ. ಅವರ ನಾಯಕ ನರಮೇಧೇಂದ್ರ ಮೋದಿ. ಅವರ ಸೈದ್ಧಾಂತಿಕ ದಿಗ್ದಂತಿ ಸುದರ್ಶನ್. ಶ್ರೀರಾಮಚಂದ್ರನ ಸ್ಮರಣೆ ಇವರಿಗೆ ಯಾವ ಮೌಲ್ಯದ ಪುನರುತ್ಥಾನಕ್ಕೂ ಅಲ್ಲ, ದೇಶವನ್ನು ಬರ್ಬರತೆಯತ್ತ ಕೊಂಡೊಯ್ಯುವುದಕ್ಕೆ ಅವನ ದುರ್ಬಳಕೆ ಅಷ್ಟೆ

ನಮ್ಮ ದೇಶವನ್ನು ೨೦೧೫ರ ವೇಳೆಗೆ 'ಸೂಪರ್‌ಪವರ್' ಮಾಡುವುದಾಗಿ ವಾಜಪೇಯಿ -ಅದ್ವಾನಿ ಹೇಳಿ ಹುಚ್ಚೆಬ್ಬಿಸಿದ್ದಾರೆ. ದೇಶದ ಜನರಿಗೆ 'ಪವರ್' ದೊರೆಯುವುದು ಮುಖ್ಯವೋ, ದೇಶ 'ಸೂಪರ್‌ಪವರ್' ಆಗುವುದು ಮುಖ್ಯವೋ ? ಸದ್ಯದಲ್ಲಿ ಒಂದು ಸೂಪರ್‌ಪವರ್ ಇದೆ. ಅದು ಅಮೆರಿಕಾ. ಈಗಾಗಲೇ ನಮ್ಮ ದೇಶವನ್ನು ವಾಜಪೇಯಿ ಸರ್ಕಾರ ಅದರ ಬಾಲಂಗೋಚಿ ಮಾಡಿಟ್ಟಿದೆ. ಈಗ ನಾಯಿ ಬಾಲ ಅಲ್ಲಾಡಿಸುತ್ತಿದೆ ; ನಾಳೆ ಬಾಲವು ನಾಯಿಯನ್ನು ಅಲ್ಲಾಡಿಸುವಂತೆ ಮಾಡಲಾಗುತ್ತದೆಂದು ವಾಜಪೇಯಿ ಸಂದೇಶ ! ನಾವು ಸ್ವತಂತ್ರ, ಸ್ವಾಭಿಮಾನಿ, ಸಾರ್ವಭೌಮ, ಸ್ವಾವಲಂಬಿ ದೇಶವಾಗಿ ಬೆಳೆದರೆ ಸಾಕು ; ಸೂಪರ್‌ಪವರ್ ಆಗಿ ಯಾರನ್ನೂ ದೈತ್ಯಶಕ್ತಿಯಿಂದ ಬಗ್ಗುಬಡಿಯಬೇಕಾಗಿಲ್ಲ. ಈಚಿನ ಘಟನೆಗಳಲ್ಲಿ ಒಂದು ಇದು : ಮೇಘಾಲಯದ ಅತಿಮುಖ್ಯ ಗುಪ್ತ ಸೈನಿಕ ಕೋಟೆಗಳಲ್ಲಿ ಭಾರತ-ಅಮೆರಿಕಾ ಜಂಟೀ ಕವಾಯತು ನಡೆಯಿತು. ಅಂದರೆ, ಅಮೆರಿಕಾಕ್ಕೆ ಮೂಗು ತೂರಿಸಲು ಅಷ್ಟು ಅವಕಾಶ ಕೊಟ್ಟಿದ್ದೇವೆ. ಕಾಶ್ಮೀರದಲ್ಲಿ ಅಮೆರಿಕಾದ ಮಧ್ಯಪ್ರವೇಶವಾಗಿದೆ. ಪಾಕಿಸ್ತಾನದೊಡನೆ ನಮ್ಮ ಸಂಬಂಧಗಳನ್ನು ಅಮೆರಿಕಾ ನಿರ್ದೇಶಿಸುತ್ತಿದೆ. ವಾಜಪೇಯಿ - ಅದ್ವಾನಿ - ಜಾರ್ಜ್ - ಯಶವಂತ್ ಸಿಹ್ನಾ ಬಣಕ್ಕೆ ಇದು ಖಂಡನೀಯವೆನಿಸಿಲ್ಲ. ಚುನಾವಣೆ ಸಂದರ್ಭದಲ್ಲಿ ಇದನ್ನು ಚರ್ಚಿಸದೆ ವಾಜಪೇಯಿ ವಿದೇಶದಲ್ಲಿ ಹುಟ್ಟಿದವಳ ಬಗೆಗೇ ಚುಚ್ಚು ಮಾತಾಡುತ್ತಾ ಓಡಾಡಿದರು. ದೇಶದ ಪೆಟ್ರೋಲಿಯಂ ಕಂಪೆನಿಗಳನ್ನು ವಿದೇಶಗಳಿಗೆ ಪರಭಾರೆ ಮಾಡುತ್ತಿರುವ ವಾಜಪೇಯಿ ಸರ್ಕಾರ ವಿದೇಶಿ ಸಂಜಾತರ ಬಗ್ಗೆ ಅನುಮಾನ, ತವಕ, ಮೂದಲಿಕೆ ಪ್ರಕಟಿಸಿದ್ದು ಒಂದು ದೊಡ್ಡ ವಿಪರ್ಯಾಸ. ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಎಳ್ಳಷ್ಟೂ ಭಾಗವಹಿಸದೆ ಬೊಜ್ಜು ಬೆಳೆಸಿದ ಮಹಾವೀರರು ಈಗ ವಿದೇಶದಲ್ಲಿ ಹುಟ್ಟಿದವರ ಬಗ್ಗೆ ಪುಂಖಾನುಪುಂಖವಾಗಿ ಮಾತನಾಡುತ್ತಿದ್ದಾರೆ. ಯಾವ ಸಮೀಕರಣವನ್ನೂ ಸೂಚಿಸದೆ ಒಂದು ಮಾತನ್ನು ಹೇಳಬಹುದು : ಮೊಹಮ್ಮದಾಲಿ ಜಿನ್ನಾ ಭಾರತ ಸಂಜಾತ ; ವೆರಿಯರ್ ಎಲ್ವಿನ್ ವಿದೇಶ ಸಂಜಾತ. ಸ್ವದೇಶಿ - ವಿದೇಶಿ ಸೂತ್ರ ಅಷ್ಟು ಗಹನವಾದದ್ದು. ನಮ್ಮ ಸಂವಿಧಾನವನ್ನು ಬದಲಾಯಿಸಲು ಇಷ್ಟು ಕಾಲ ವಾಜಪೇಯಿ ಏಕೆ ಕಾಯಬೇಕಾಗಿತ್ತು? ಕೆಲವು ಸಂಪದ್ಭರಿತ ರಾಷ್ಟ್ರಗಳಲ್ಲಿ ನೆಲೆ ಮಾಡಿಕೊಂಡಿರುವ ಭಾರತ ಸಂಜಾತರಿಗೆ ಅಥವಾ ಎಂದೋ ಭಾರತದವರಾಗಿದ್ದವರ ಮರಿಮಕ್ಕಳಿಗೆ ದ್ವಿರಾಷ್ಟ್ರ ಪೌರತ್ವದ ಸೌಲಭ್ಯ ನೀಡಿದ ವಾಜಪೇಯಿ ಸರ್ಕಾರ ಈಗ ಒಬ್ಬ ವ್ಯಕ್ತಿಯ ವಿದೇಶಿ ಹುಟ್ಟಿನ ಬಗ್ಗೆ ಕೋಲಾಹಲವೆಬ್ಬಿಸಿರುವುದು ನಾಚಿಕೆ ತರಿಸುವ ಪ್ರಸಂಗ.

ಆದರೆ ವಾಜಪೇಯಿ ಹರಡಿರುವ ಮಿಥ್ಯಾ ಪ್ರಕಾಶಕ್ಕೆ ಮಾರುಹೋಗಿ ಅನೇಕ ಸಿನಿಮಾ ''ತಾರ-ತಾರೆಯರು'' ಪತಂಗಗಳಂತೆ ಭಾಜಪದೊಳಕ್ಕೆ ನುಗ್ಗಿದ್ದಾರೆ. ಅವರೆಲ್ಲಾ ರಾಜಕೀಯ ಪ್ರಜ್ಞೆಯನ್ನು ವಿಶೇಷವಾಗಿ ಬೆಳೆಸಿಕೊಂಡಿದ್ದಾರೆಂದೇನೂ ಇಲ್ಲ. ಸಾಮಾನ್ಯವಾಗಿ ಪ್ರಕಟವಾಗುವುದು ಅವರ ಬಾಲಿಶತ್ವ. ಅವರು ತಾವಾಗಿಯೇ ಬಂದರೆ ? ಬಂದದ್ದೇಕೆ ? ಬಂದವರಲ್ಲಿ ಆದಾಯ ತೆರಿಗೆಯನ್ನು ಸರಿಯಾಗಿ ಪಾವತಿ ಮಾಡದವರೂ ಸೇರಿದ್ದಾರೆಯೇ ? ಎಷ್ಟೆಷ್ಟು ? ನಮ್ಮ ಜೊತೆ ಬಂದು ಕೂಗದಿದ್ದರೆ ದಾವಾ ಹಾಕಲಾಗುತ್ತದೆಂಬ ಎಚ್ಚರವನ್ನೇನಾದರೂ ನೀಡಲಾಯಿತೆ ? ನೀಡಿದ್ದು ಯಾರು ? ಚುನಾವಣೆ ಮುಗಿದಿದೆ. ಈಗ ಎಲ್ಲ ರೀತಿಯ ಸಂಶೋಧನೆ ಮತ್ತು ಆತ್ಮಶೋಧನೆಗೆ ಪಕ್ವವಾದ ಕಾಲ. ಯಾರೋ ಒಂದಷ್ಟು ಹಣ ಕೊಟ್ಟರೆಂದು ಚುನಾವಣಾ ಸಮೀಕ್ಷೆಯನ್ನು ನಡೆಸಿದ ಮಾಧ್ಯಮಗಳಂತೆ ವರ್ತಿಸದೆ ವಸ್ತುನಿಷ್ಠವಾಗಿ ನಮ್ಮ ಮತ್ತು ನಮ್ಮ ದೇಶದ ವರ್ತಮಾನ - ಭವಿಷ್ಯಗಳನ್ನು ಅವಲೋಕಿಸೋಣ, ಕಾರ್ಯತತ್ಪರರಾಗೋಣ, ಸಕ್ರಿಯವಾಗಿ ಮಧ್ಯಪ್ರವೇಶ ಮಾಡೋಣ, ಯಾವುದೇ ಪಿಡುಗೂ ನಮ್ಮ ದೇಶವನ್ನು ಆಕ್ರಮಿಸದಂತೆ ಸ್ಥೈರ್ಯದಿಂದ ಮುಂದಿನ ಹಾದಿ ಕ್ರಮಿಸೋಣ.

## ಯಹೂದಿ ಗೆಳೆಯನಿಗೆ

ಅಸಾಧ್ಯ ಕೆಲಸಗಳನ್ನು
ನನ್ನಿಂದ ನಿರೀಕ್ಷಿಸಬೇಡ.
ನಕ್ಷತ್ರಗಳನ್ನು ಬೇಟೆ
-ಯಾಡಲು ಹೇಳಬೇಡ.
ಸಾಗರವನ್ನು ಖಾಲಿ ಮಾಡೆಂದು
ನನ್ನ ಕೇಳಬೇಡ.
ಹಗಲು - ಬೆಳಕನ್ನು
ಕತ್ತರಿಸಿ ಹಾಕೆಂದು ಹೇಳಬೇಡ
ಯಾಕೆಂದರೆ ನಾನೊಬ್ಬ ಮನುಷ್ಯ.

ನನ್ನ ಕಂಗಳನ್ನು, ಪ್ರೀತಿಯನ್ನು,
ಬಾಲ್ಯದ ನೆನಪುಗಳನ್ನು
ತೊರೆಯಲು ದಯವಿಟ್ಟು ಕೇಳಬೇಡ.

ಈ ಆಲಿವ್ ಮರದ ನೆರಳಲ್ಲಿ
ನಾನು ಬೆಳೆದಿದ್ದೇನೆ.
ನನ್ನದೇ ತೋಟದ ಅಂಜೂರ
ತಿಂದು ದೊಡ್ಡವನಾಗಿದ್ದೇನೆ.
ಕಣಿವೆಗಳ ಗುಂಟ ಬೆಳೆದ
ನನ್ನದೇ ದ್ರಾಕ್ಷಿ ತೋಟಗಳ
ಹಣ್ಣುಗಳಿಂದ ತಯಾರಿಸಿದ
ದ್ರಾಕ್ಷಾರಸದ ರುಚಿ ಸವಿದಿದ್ದೇನೆ,
ಮತ್ತೆ, ಮತ್ತೆ.

ಕೋಗಿಲೆ ನನ್ನ ಕಿವಿಗಳಲ್ಲಿ
ಮಧುರ ಸ್ವರ ಉಲಿದಿದೆ.
ನನ್ನ ತೋಟದ, ನನ್ನ ಊರಿನ
ಸ್ವತಂತ್ರ ಗಾಳಿ ಸದಾ ನನಗೆ
ಕಚಗುಳಿ ಇಟ್ಟಿದೆ.
ಇಂಥ ನನ್ನ ತಾಯ್ನೆಲವನ್ನೇ
ತ್ಯಜಿಸೆಂದು ಹೇಳುವ ಹಕ್ಕು
ನಿನಗಿಲ್ಲ ನನ್ನ ಗೆಳೆಯಾ.

(Poems from an Israeli Prison ಸಂಕಲನದಿಂದ.)
ಮೂಲ – **ಫೌಜಿಯಲ್ ಅಸ್ಮರ್**
ಅನುವಾದ – **ವಿಭಾ**



# ವೈಜ್ಞಾನಿಕ ನೆಲೆಗಳ ಮೇಲೆ ಮೌಢ್ಯದ ದಾಳಿ

**ಪ್ರೊ|| ಜೆ. ಆರ್. ಲಕ್ಷ್ಮಣರಾವ್**

**ಮೂ**ಢನಂಬಿಕೆಯನ್ನು ಕುರುಡು ನಂಬಿಕೆ ಎಂದೂ ಕರೆಯುವುದುಂಟು. ಕಣ್ಣು ತೆರೆದು ನೋಡದೆ, ಅಂದರೆ ವಿಚಾರ ಮಾಡಿ ಪರೀಕ್ಷಿಸದೆ ಏನಾದರೊಂದನ್ನು ನಂಬುವುದು ಕುರುಡು ನಂಬಿಕೆ ಎನ್ನಿಸಿಕೊಳ್ಳುತ್ತದೆ. ಹಾಗೆ ವಿಚಾರ ಮಾಡದಿರುವುದಕ್ಕೆ ಸಾಕಷ್ಟು ತಿಳಿವಳಿಕೆ ಗಳಿಸಿಕೊಂಡಿಲ್ಲದಿರುವುದು ಒಂದು ಕಾರಣವಿರಬಹುದು. ಅದು ಕ್ಷಮಾರ್ಹ. ಏಕೆಂದರೆ, ತಿಳಿವಳಿಕೆ ಗಳಿಸಿಕೊಂಡ ಮೇಲೆ ವಿಚಾರ ಮಾಡುವುದು ಸಾಧ್ಯ. ಅಕ್ಷಮ್ಯ ಎನ್ನಬಹುದಾದ ಇನ್ನೊಂದು ಕಾರಣವಿದೆ: ವೈಜ್ಞಾನಿಕ ದೃಷ್ಟಿಯಿಂದ ವಿಚಾರ ಮಾಡತೊಡಗಿದಾಗ ಅನಿವಾರ್ಯವಾಗಬಹುದಾದ ತೀರ್ಮಾನ ಅಹಿತವಾದುದಾದರೂ ಅದನ್ನು ಸ್ವೀಕರಿಸುವ ಮನೋದಾರ್ಢ್ಯವಿಲ್ಲದಿರುವುದು ಮತ್ತು ಹಿಂದಿನಿಂದ ನಂಬಿಕೊಂಡು ಬಂದುದನ್ನು ಕೈಬಿಡುವುದು ಅಗತ್ಯವೆನಿಸಿದಾಗಲೂ ಅದಕ್ಕೆ ಸಿದ್ಧವಿಲ್ಲದಿರುವ ಮನೋದೌರ್ಬಲ್ಯ. ಅಂಥ ಕುರುಡು ನಂಬಿಕೆಯುಳ್ಳವರಿಗೆ ಆ ನಂಬಿಕೆ ಆಧಾರರಹಿತವೆಂದು ಅವರ ಒಳಮನಸ್ಸು ಹೇಳುವುದರಿಂದ ಅವರು ಅದನ್ನು ಮುಚ್ಚಿಡುವ ಪ್ರಯತ್ನ ಮಾಡುತ್ತಾರೆ; ತಮ್ಮ ನಂಬಿಕೆ ವೈಜ್ಞಾನಿಕವಾದುದೆಂದು ಸಾಧಿಸಲು ಪ್ರಯತ್ನಿಸುತ್ತಾರೆ.

ವೈಜ್ಞಾನಿಕ ದೃಷ್ಟಿ ಎಂಬುದಕ್ಕೆ ಇಂದು ಸಾರ್ವತ್ರಿಕ ಮನ್ನಣೆ ದೊರೆತಿರುವುದರಿಂದ ಎಂಥ ಅವೈಜ್ಞಾನಿಕವಾದುದೇ ಆಗಲಿ, ಅದರ ಪ್ರತಿಪಾದಕರು ಅದಕ್ಕೆ ವೈಜ್ಞಾನಿಕತೆಯ ಹಣೆ ಪಟ್ಟಿ ತಗಲಿಸುವುದು ವ್ಯಾಪಕವಾಗಿರುವ ಒಂದು ಜಾಡ್ಯ. ಇಲ್ಲಿ, ಮೈಸೂರಿನಲ್ಲಿ (ಬಹುಶಃ ಇತರ ನಗರಗಳಲ್ಲಿಯೂ ಇರಬಹುದು), ಬೆಳಿಗ್ಗೆ ಬರುವ ವರ್ತಮಾನ ಪತ್ರಿಕೆಗಳ ಮಡಿಕೆಗಳಲ್ಲಿ ಜಾಹೀರಾತು ಕರಪತ್ರಗಳಿರುವುದು ಸರ್ವೇಸಾಮಾನ್ಯ. ಹೀಗೆ ಪದೇ ಪದೇ ಕಾಣಿಸಿಕೊಳ್ಳುವ ಎರಡು ಕರಪತ್ರಗಳೆಂದರೆ, 'ಸಿದ್ಧಿ ಸಮಾಧಿ ಯೋಗ'ದ್ದು ಮತ್ತು ಈಚೆಗೆ ಶ್ರೀ ಶ್ರೀ ಶ್ರೀ ಆಗಿರುವ ರವಿಶಂಕರ್ ಅವರ 'ಬದುಕುವ ಕಲೆ' (Art of Living)ಯದು. ವಾಣಿಜ್ಯೋದ್ಯಮಿಗಳು ಈ ರೀತಿ ತಮ್ಮ ಸರಕನ್ನು ಜಾಹೀರು ಮಾಡುವ ಬಗ್ಗೆ ನಾವು ಆಕ್ಷೇಪಣೆ ಮಾಡುವಂತಿಲ್ಲ. ಆದರೆ ತಮ್ಮ ಸರಕು ವೈಜ್ಞಾನಿಕವಾದುದೆಂದು ಹೇಳಿಕೊಂಡು, ಇಲ್ಲದಿರುವ ಗುಣಗಳನ್ನೂ ಸಾಮರ್ಥ್ಯಗಳನ್ನೂ ಅದಕ್ಕೆ ಆರೋಪಿಸಿ, ಮುಗ್ಧ ಜನರನ್ನು ಮೋಸ ಮಾಡುವುದು ಅಪರಾಧ. ಇಲ್ಲಿ ಕಾಣಿಸಿಕೊಂಡಿರುವ ಕರಪತ್ರಗಳ ಪ್ರಕಾರ ಸಿದ್ಧಿ ಸಮಾಧಿ ಯೋಗ ಹಾಗೂ 'ಬದುಕುವ ಕಲೆ' ಕಲಿಸುವ ಸುದರ್ಶನ ಕ್ರಿಯೆ – ಎರಡೂ ಸರ್ವರೋಗ ನಿವಾರಕಗಳು. ರಕ್ತದೊತ್ತಡ, ಹೃದ್ರೋಗಗಳು, ಅಪಸ್ಮಾರ, ಡಯಾಬಿಟಿಸ್, ಚರ್ಮರೋಗಗಳು, ಮನೋವ್ಯಾಧಿಗಳು, ಎಲ್ಲವನ್ನೂ ಅವು ಗುಣಪಡಿಸುತ್ತವೆ.

ಒಂದಕ್ಕೊಂದು ಸಂಬಂಧವೇ ಇಲ್ಲದ ಎಂಟು ಹತ್ತು ಬೇರೆ ಬೇರೆ ರೋಗಗಳನ್ನು ಯಾವುದೋ ಒಂದು ಮದ್ದು ಅಥವಾ ಒಂದು ಚಿಕಿತ್ಸೆ ಗುಣಪಡಿಸಬಲ್ಲುದೆಂಬುದು ಮೂರ್ಖತನ ಎಂಬ ಮಾತಿರಲಿ, ದೆಹಲಿಯಲ್ಲಿರುವ ಆಲ್ ಇಂಡಿಯಾ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ (AIIMS) ಮತ್ತು ಬೆಂಗಳೂರಿನಲ್ಲಿರುವ ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಹೆಲ್ತ್ ಅಂಡ್ ನ್ಯೂರೋ ಸೈನ್ಸಸ್ (NIMHANS) ಗಳಲ್ಲಿ ನಡೆಸಿರುವ ಸಂಶೋಧನೆಗಳಿಂದ ಸುದರ್ಶನ ಕ್ರಿಯೆಗೆ ಅಂಥ ಸಾಮರ್ಥ್ಯವಿರುವುದು ದೃಢೀಕೃತವಾಗಿದೆ ಎಂಬ ಸುಳ್ಳನ್ನು ಇಲ್ಲಿ ಪ್ರಚಾರ ಮಾಡಲಾಗುತ್ತಿದೆ. ಅದನ್ನು ಓದಿ ಆಶ್ಚರ್ಯಚಕಿತನಾದ ನಾನು NIMHANS ನಲ್ಲಿರುವ ನನ್ನ ಸ್ನೇಹಿತರನ್ನು ಸಂಪರ್ಕಿಸಿ ವಿಚಾರಿಸಿದಾಗ ತಿಳಿದು ಬಂದುದು ಇಷ್ಟು: ಸುದರ್ಶನ ಕ್ರಿಯೆಯ ಪರಿಣಾಮಗಳ ಬಗ್ಗೆ ಅಲ್ಲಿ ಸಂಶೋಧನೆ ನಡೆದಿರುವುದು ನಿಜ. ಅದರಿಂದ ಕಂಡುಬಂದಿರುವುದು ಇಷ್ಟು: ಸುದರ್ಶನ ಕ್ರಿಯೆ ಎಂಬುದು 'ಮಾರ್ಪಡಿಸಿದ ಪ್ರಾಣಾಯಾಮ' ಎನ್ನಬಹುದಾದ ಒಂದು ಶ್ವಾಸೋಚ್ಛ್ವಾಸದ ವ್ಯಾಯಾಮ (breathing exercise). ಅಂಥ ವ್ಯಾಯಾಮಗಳಿಂದ ದೇಹಕ್ಕೆ ಆಗುವ ಒಳಿತು ಅದರಿಂದಲೂ ಆಗುತ್ತದೆ. ಅದಕ್ಕಿಂತ ಹೆಚ್ಚಿನದೇನೂ ಇಲ್ಲ.

ಇಂಥ ಮೌಢ್ಯ ಸಾಮಾನ್ಯವಾಗಿ ವೈಜ್ಞಾನಿಕ ಸಂಘ ಸಂಸ್ಥೆಗಳಿಂದ ದೂರವಾಗಿಯೇ ಇರುತ್ತಿತ್ತು. ಈಚಿನ ದಿನಗಳಲ್ಲಿ ಅವು ವೈಜ್ಞಾನಿಕ ನೆಲೆಗಳ ಮೇಲೆಯೂ ದಾಳಿ ಮಾಡತೊಡಗಿವೆ. ಉದಾಹರಣೆಗೆ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಇಂದಿನ ಅಧ್ಯಕ್ಷರು ಆ ಸ್ಥಾನಕ್ಕೆ ಚುನಾಯಿತರಾದ ಹೊಸದರಲ್ಲಿ ಆ ಸಂಸ್ಥೆಯ ಕಾರ್ಯಕಾರೀ ಸಮಿತಿಯ ಸದಸ್ಯರೇ ಒಬ್ಬರು ಅವರನ್ನು ಸಂದರ್ಶಿಸಿದ ವರದಿ **ಪ್ರಜಾವಾಣಿ** ದಿನಪತ್ರಿಕೆಯ ಪುರವಣಿಯಲ್ಲಿ ಪ್ರಕಟವಾಯಿತು (ಮೇ ೧, ೨೦೦೩). "ಕರಾವಿಪ ಅಂದರೆ ಮೂಢನಂಬಿಕೆಗಳ ವಿರುದ್ಧ ಹೋರಾಟ ಮಾಡೋ ಸಂಸ್ಥೆ ಅಂತಾರೆ. ನೀವು ನೋಡಿದ್ರೆ ಹಣೆ ಮೇಲೆ ಇಷ್ಟು ದೊಡ್ಡ ವಿಭೂತಿ ಪಟ್ಟಾ ಹಚ್ಚಂಡಿದೀರಿ?" ಎಂಬ ಪ್ರಶ್ನೆಗೆ ಉತ್ತರವಾಗಿ ಆ ಅಧ್ಯಕ್ಷರು, "ಹೌದ್ರಿ ಈ ವಿಭೂತಿ ಪಟ್ಟ ನನ್ನನ್ನು ಪ್ರಸಿದ್ಧ ಮಾಡೇತಿ ಅನ್ನೋದು ಖರೆ. ಇದು ವೈಜ್ಞಾನಿಕವಾಗಿ ತಯಾರಿಸಿದ ಭಸ್ಮ. ಇದರಿಂದಾಗಿ ನೂರಾರು ಲವಣಗಳು ಇದಾವು. ಇದು ಒಂದು ಔಷಧ. ದೇಹಕ್ಕೆ ರಕ್ಷಣೆ ಕೊಡ್ತದ" ಎಂದರು! ವೈಜ್ಞಾನಿಕ ಸಂಸ್ಥೆಯೊಂದರ ಅಧ್ಯಕ್ಷರ ಬಾಯಿಯಿಂದ ಬರುವ ಮಾತೇ ಇದು? ಪತ್ರಿಕೆಯ ವಾಚಕರೊಬ್ಬರು "ಆ ಭಸ್ಮವನ್ನು ತಯಾರಿಸುವ 'ವೈಜ್ಞಾನಿಕ' ವಿಧಾನವನ್ನು ತಿಳಿಸಿ. ಅದರಲ್ಲಿರುವ ಆ ನೂರಾರು ಲವಣಗಳು ಯಾವುವು? ಆ ಭಸ್ಮ ಯಾವ ಯಾವ ರೋಗಗಳಿಗೆ ಔಷಧ? ಅದರ ಔಷಧ ಗುಣಗಳನ್ನು ಯಾವ ಸಂಶೋಧನಾಲಯದಲ್ಲಿ ಪರೀಕ್ಷಿಸಲಾಗಿದೆ?" ಎಂಬೆಲ್ಲ ವಿವರಗಳನ್ನು ತಿಳಿಯಲು ಅಪೇಕ್ಷಿಸಿ ಅದೇ ಪತ್ರಿಕೆಯ ಮುಂದಿನ ಸಂಚಿಕೆಯೊಂದರಲ್ಲಿ ಪತ್ರವನ್ನು ಬರೆದರು. ಅಧ್ಯಕ್ಷರು ಉತ್ತರಿಸಿಲ್ಲ.

ಇತ್ತೀಚೆಗೆ ರಾಷ್ಟ್ರೀಯ ಸಂಶೋಧನಾಲಯ ಒಂದರ ಆಶ್ರಯದಲ್ಲಿ ಪ್ರಕಟಗೊಳ್ಳುವ ಒಂದು ಪತ್ರಿಕೆಯಲ್ಲಿ ಇನ್ನೂ ಬೃಹದಾಕಾರದ ಒಂದು ಮೌಢ್ಯದ ಬಾಂಬ್ ಸಿಡಿಯಿತು. ಬೆಂಗಳೂರಿನಲ್ಲಿರುವ ನ್ಯಾಷನಲ್

> ವೈಜ್ಞಾನಿಕ ದೃಷ್ಟಿಯಿಂದ ವಿಚಾರ ಮಾಡತೊಡಗಿದಾಗ ಅನಿವಾರ್ಯವಾಗಬಹುದಾದ ತೀರ್ಮಾನ ಅಹಿತವಾದುದಾದರೂ ಅದನ್ನು ಸ್ವೀಕರಿಸುವ ಮನೋದಾರ್ಢ್ಯವಿಲ್ಲದಿರುವುದು ಮತ್ತು ಹಿಂದಿನಿಂದ ನಂಬಿಕೊಂಡು ಬಂದುದನ್ನು ಕೈಬಿಡುವುದು ಅಗತ್ಯವೆನಿಸಿದಾಗಲೂ ಅದಕ್ಕೆ ಸಿದ್ಧವಿಲ್ಲದಿರುವ ಮನೋದೌರ್ಬಲ್ಯವು ಅಕ್ಷಮ್ಯ. ಅಂಥ ಕುರುಡು ನಂಬಿಕೆಯುಳ್ಳವರಿಗೆ ಆ ನಂಬಿಕೆ ಆಧಾರರಹಿತವೆಂದು ಅವರ ಒಳಮನಸ್ಸು ಹೇಳುವುದರಿಂದ ಅವರು ಅದನ್ನು ಮುಚ್ಚಿಡುವ ಪ್ರಯತ್ನ ಮಾಡುತ್ತಾರೆ; ತಮ್ಮ ನಂಬಿಕೆ ವೈಜ್ಞಾನಿಕವಾದುದೆಂದು ಸಾಧಿಸಲು ಪ್ರಯತ್ನಿಸುತ್ತಾರೆ.

ಏರೋಸ್ಪೇಸ್ ಲ್ಯಾಬೋರೇಟರಿಯ ವಿಜ್ಞಾನಿಗಳು ನಿರ್ಮಿಸಿ ಕೊಂಡಿರುವ ಕನ್ನಡ ಸಾಂಸ್ಕೃತಿಕ ಸಂಘದ ವತಿಯಿಂದ **ಕಣಾದ** ಎಂಬ ಒಂದು ವಾರ್ಷಿಕ ವಿಜ್ಞಾನ ಪತ್ರಿಕೆ ಪ್ರಕಟವಾಗುತ್ತದೆ. ಆ ಪತ್ರಿಕೆಯ ೨೦೦೩ರ ಸಂಚಿಕೆಯಲ್ಲಿ ರುದ್ರಾಕ್ಷಿಯನ್ನು ಕುರಿತ ಒಂದು ಲೇಖನವಿದೆ. ಓದಿದರೆ ಪುರಾಣ ಶ್ರವಣದ ಅನುಭವ ನೀಡುವ ಆ ಲೇಖನ, ''ಶಿವನ ಸಂಕಲ್ಪದಿಂದ ಲೋಕ ಕಲ್ಯಾಣಕ್ಕಾಗಿ ರುದ್ರಾಕ್ಷಿಗಳು ೩೮ ವಿವಿಧ ರೂಪಗಳನ್ನು ತಾಳಿವೆ. ಶಿವನ ಸೂರ್ಯ(ಬಲ) ನೇತ್ರದಿಂದ ಬಂದ ಕಣ್ಣೀರಿನಿಂದ ಕೆಂಪು ಮತ್ತು ಹಳದಿ ಬಣ್ಣದ ೧೨ ಬಗೆಯ ರುದ್ರಾಕ್ಷಿಗಳು... ಇತ್ಯಾದಿ'' ಮಾತುಗಳಿಂದ ಪ್ರಾರಂಭವಾಗಿ ಯಾವ ಬಗೆಯ ರುದ್ರಾಕ್ಷಿಯನ್ನು ಧರಿಸಿದರೆ ಐಶ್ವರ್ಯ ಪ್ರಾಪ್ತಿಯಾಗುತ್ತದೆ, ಯಾವ ಬಗೆಯ ರುದ್ರಾಕ್ಷಿಯನ್ನು ಧರಿಸಿದರೆ ಪಾಪ ಪರಿಹಾರವಾಗುತ್ತದೆ, ಯಾವ ಬಗೆಯ ರುದ್ರಾಕ್ಷಿಯನ್ನು ಧರಿಸಿದರೆ ಬೇರೆಬೇರೆ ರೋಗಗಳು ಗುಣವಾಗುತ್ತವೆ ಎಂಬೆಲ್ಲ ವಿವರಗಳನ್ನು ನೀಡುತ್ತದೆ.

ಈ ಲೇಖನವನ್ನು ಬರೆದಿರುವವರು 'ತಾಂತ್ರಿಕ ಸಚಿವಾಲಯದ' ಇಬ್ಬರು ವಿಜ್ಞಾನಿಗಳು. ಇಬ್ಬರೂ **ಡಾಕ್ಟೊರೇಟ್** ಪದವಿ ಗಳಿಸಿರುವವರು. ವೈಜ್ಞಾನಿಕ ಸಿದ್ಧಾಂತಗಳು ಮತ್ತು ಅವುಗಳ ಬಗೆಗಿನ ಜಿಜ್ಞಾಸೆ ಕುರಿತ ನಿರೂಪಣೆಗೆ ಆಧಾರವಾಗಿರಬೇಕಾದುದು ಕೂಲಂಕಷವಾಗಿ ಪರೀಕ್ಷಿಸಿ ಖಚಿತಪಡಿಸಿಕೊಂಡಿರುವ ವಾಸ್ತವಾಂಶಗಳು ಮತ್ತು ಅವುಗಳಲ್ಲಿ ಗುರುತಿಸಬಹುದಾದಂಥ ನಿಸರ್ಗ ನಿಯಮಗಳು. ವಾಸ್ತವಾಂಶಗಳ ಬಗೆಗೆ ಎಳ್ಳಷ್ಟೂ ಕಾಳಜಿ ಇಲ್ಲದಿರುವ ಈ ಇಬ್ಬರು 'ವಿಜ್ಞಾನಿಗಳು' ಮೇಲೆ ನೀಡಿರುವಂಥ ಆಧಾರರಹಿತ ಹೇಳಿಕೆಗಳ ಒಂದು ದೀರ್ಘ ಸರಮಾಲೆಯನ್ನು ಸೃಷ್ಟಿಸಿ, ಕೊನೆಯಲ್ಲಿ ತಮ್ಮ ಆತ್ಮಸಾಕ್ಷಿಯನ್ನು (ಅದು ಇದ್ದರೆ) ಬದಿಗೊತ್ತಿ ''ಪಾಶ್ಚಾತ್ಯ ದೇಶಗಳಲ್ಲಿ ನಡೆದಿರುವ ಸಂಶೋಧನೆಗಳ ಪರಿಣಾಮವಾಗಿ ರುದ್ರಾಕ್ಷಿಯ ಚಿಕಿತ್ಸಾ ಪರಿಣಾಮಗಳು ಸಾಬೀತಾಗಿವೆ ಮತ್ತು ರುದ್ರಾಕ್ಷಿಯು ಅನೇಕ ಕಾಯಿಲೆಗಳನ್ನು ಗುಣಪಡಿಸುವುದು ಸಾಬೀತಾಗಿದೆ'' ಎಂಬ ಹಸಿ ಸುಳ್ಳು ಹೇಳಿ ಲೇಖನವನ್ನು ಮುಗಿಸಿದ್ದಾರೆ. ಲೇಖಕರಿಬ್ಬರೂ ಸಚಿವಾಲಯದವರಾದುದರಿಂದ ಇಂಥದೊಂದು ಲೇಖನ ಬರೆಯಲು ಅವರದೇ ಕಾರಣಗಳಿರಬಹುದು. ಆದರೆ ವೈಜ್ಞಾನಿಕ ಪತ್ರಿಕೆಯೊಂದರಲ್ಲಿ ಈ ಅಸಂಬದ್ಧ ಪ್ರಲಾಪಕ್ಕೆ ತಾವು ಒದಗಿಸಲು ಕಾರಣರಾದ **ಕಣಾದ** ಪತ್ರಿಕೆಯ ಬಳಗದವರೆಲ್ಲರೂ ನಾಚಿಕೆಯಿಂದ ತಲೆ ತಗ್ಗಿಸಬೇಕು.

ವಿಜ್ಞಾನಿಗಳೆನಿಸಿಕೊಂಡವರು ತಮ್ಮ ವೃತ್ತಿಗೆ ಸಂಬಂಧಿಸಿದ ವಿಷಯಗಳಲ್ಲಿ ಮಾತ್ರ ವೈಜ್ಞಾನಿಕತೆಗೆ ಅಂಟಿಕೊಂಡಿದ್ದು, ವೈಯಕ್ತಿಕ ಜೀವನದಲ್ಲಿ ಮೂಢನಂಬಿಕೆಗಳ ದಾಸರಾಗಿರುವುದು ಹೊಸ ವಿಷಯವೇನಲ್ಲ. ಆದರೆ, ಈಚಿನ ಕೆಲವು ವರ್ಷಗಳ ಹಿಂದಿನವರೆಗೆ ಅಂಥವರಿಗೆ ಒಂದು ಬಗೆಯ ಕೀಳರಿಮೆ ಇರುತ್ತಿತ್ತು. ನಿಜವಾದ ವಿಜ್ಞಾನಿಗಳ ದೃಷ್ಟಿಯಲ್ಲಿ ತಾವು ಸಣ್ಣವರಾಗಿ ಕಾಣುವೆವೆಂಬ ಭಯವಿತ್ತು. ಆದುದರಿಂದ, ತಮ್ಮ ವರ್ತನೆ ಅವಮಾನಕರವೆಂಬ ಭಾವನೆಯಿಂದ ಅವರು ಅದರ ಗೋಪ್ಯತೆಯನ್ನು ಕಾಪಾಡಲು ಹವಣಿಸುತ್ತಿದ್ದರು. ಈಚಿನ ಮೂರು ನಾಲ್ಕು ವರ್ಷಗಳಲ್ಲಿ ಪರಿಸ್ಥಿತಿ ಬದಲಾಗಿರುವುದು ನಿಜ. ಅದಕ್ಕೆ ಕಾರಣವನ್ನು ಹುಡುಕಿಕೊಂಡು ಬಹುದೂರ ಹೋಗಬೇಕಾಗಿಲ್ಲ. ಇಂದಿನ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವರ ಮತ್ತು ಅವರ ಸಚಿವಾಲಯದ ಬೆಂಬಲದಿಂದ ಯೂನಿವರ್ಸಿಟಿ ಗ್ರಾಂಟ್ಸ್ ಕಮೀಷನ್ನಿನವರು ಕಾಲೇಜುಗಳಲ್ಲಿ ಹಾಗೂ ವಿಶ್ವವಿದ್ಯಾನಿಲಯಗಳಲ್ಲಿ ಜೋತಿಷ್ಯವನ್ನು ಬೋಧನ ವಿಷಯವಾಗಿ ಅಂಗೀಕರಿಸುವುದಾದರೆ ಅದಕ್ಕೆ ಅಗತ್ಯವಾದ ಧನ ಸಹಾಯ ನೀಡಲು ಮುಂದಾದುದು ಸರಿಯಷ್ಟೆ. ಅವರ ಈ ಕ್ರಮದ ಯುಕ್ತಾಯುಕ್ತತೆಯ ಬಗ್ಗೆ ಆಗ ಸಾಕಷ್ಟು ವಾದ ವಿವಾದಗಳು ನಡೆದುವು. ಕೇಂದ್ರ ಸರ್ಕಾರದ ಈ ಬಗೆಯ ಕ್ರಮಗಳಿಂದಾಗಿ ಜೋತಿಷ್ಯ, ವಾಸ್ತು ಮುಂತಾದ ಮೌಢ್ಯಗಳಿಗೆ ಒಂದು ಬಗೆಯ ಕೃತಕ ಗೌರವಾರ್ಹತೆ ದೊರೆತಂತಾಗಿದೆ. ಆದುದರಿಂದ ವಿಜ್ಞಾನಿಗಳೆನಿಸಿಕೊಂಡ ಕಂದಾಚಾರಿಗಳು ಅಳುಕದೆ ತಮ್ಮ ಮೌಢ್ಯವನ್ನು ತೋರ್ಪಡಿಸಿಕೊಳ್ಳತೊಡಗಿದ್ದಾರೆ.

ಬದಲಾಗಿರುವ ಈ ಪರಿಸ್ಥಿತಿಯ ಫಲವಾಗಿ ಮೂಢನಂಬಿಕೆಗಳ ವಿರುದ್ಧ ಹೋರಾಡುತ್ತಿರುವ ವಿಚಾರಪರರ ಕೆಲಸ ಹೆಚ್ಚು ಶ್ರಮದಾಯಕವಾಗತೊಡಗಿದೆ. ಅಂಥವರು ತಮ್ಮ ಶಕ್ತಿಮೀರಿ ದುಡಿಯಬೇಕಾದ ಪರಿಸ್ಥಿತಿ ಉಂಟಾಗಿದೆ.


**ಪ್ರೊ|| ಜಿ. ಆರ್. ಲಕ್ಷ್ಮಣರಾವ್**

''ಮೈತ್ರಿ'', ೧೨ನೇ ಮುಖ್ಯರಸ್ತೆ, ಸರಸ್ವತಿಪುರಂ

ಮೈಸೂರು - ೫೭೦ ೦೦೯


## ಮಹಾಮನೆ



ಬಂಧುಗಳೇ
ಅಂದವಾದ ಒಂದೇ ಮನೆ ನಮಗೆ
ಇಂದ್ರ ಚಂದ್ರರ ವಾಸ್ತುಶಿಲ್ಪದ
ಶೈಲಿಯಲಿ ನಮ್ಮವರು ಕಟ್ಟಿದ ಮಹಾಮನೆ
ಇದು !

ಈ ಮನೆಯ ಮಹಾನುಭಾವಿಗಳೆಲ್ಲ
ಕುಲ, ಛಲ, ಬಲ ಮೀರಿ ನಿಂತವರು
ಷರೀಫ ಕಬೀರರಂಥವರು
ಬುದ್ಧ ಬಸವ ಅಲ್ಲಮಾದಿ ಪ್ರಮಥರು

ಬಂಧುಗಳೇ
ಅಂದವಾದ ಒಂದೇ ಮನೆ ನಮಗೆ

ಇವರೆಲ್ಲ ಈ ಮನೆಯ
ಬಾಗಿಲು ಕಿಟಕಿಗಳ ಸ್ವಚ್ಛಂದ ತೆರೆದು
ಹಗಲು ರಾತ್ರಿ ಎದೆಬಿಚ್ಚಿ
ಹಾಡಿದರು. ಮನುಷ್ಯ-ಮನುಷ್ಯರ ಹಾಡು !

ಇವರೆಲ್ಲ ಗಂಟೆ ಬಾರಿಸಿದರು
ನಮಾಜು ಮಾಡಿದರು
ಬೈಬಲ ಓದಿದರು
ಈ ಮಹಾಮನೆಯಲ್ಲಿ

ಬಂಧುಗಳೇ
ಅಂದವಾದ ಒಂದೇ ಮನೆ ನಮಗೆ
ಮಾತು ಮಾತಿಗೆ ಬೆಂಕಿ
ಮನುಷ್ಯ ಮನುಷ್ಯರ ಮೇಲಿರುವ ಶಂಕೆಗಳ
ಅಂಕಿ ಸಂಖ್ಯೆಗಳ ಲೆಕ್ಕ ನಮಗೆ ಬೇಡ
ನಾವು ಕಟ್ಟಿದ ಮನೆ :
ನಾವು ಸುಡುವದು ಬೇಡ !
ಅದು ಕೆಟ್ಟ ಇತಿಹಾಸ
ಮೈಮನಗಳ ತಿದ್ದಿ ತೀಡಿ ಭಾವ ತಿಳಿಗೊಳುವ
ಗಂಧವಾಗುವ ಮಂದಹಾಸದ ಹಾಡು
ನಮಗೀಗ ಬೇಕು.

– ಗವಿಸಿದ್ಧ ಎನ್. ಬಳ್ಳಾರಿ

*(ಮಾನ್ಯ ಗವಿಸಿದ್ಧ ಅವರು ಮಾರ್ಚ್ ಎರಡನೆಯ ವಾರದಲ್ಲಿ ಗತಿಸಿದರೆಂದು ತಿಳಿಸಲು ವಿಷಾದಿಸುತ್ತೇವೆ. – ಸಂ.)*

# "ಶೈವವಾತ್ಸಲ್ಯ"ದ ಕುರಿತು

**ಡಾ||** ಎಂ. ಪಿ. ಉಮಾದೇವಿ ನೇತ್ರ ವೈದ್ಯರು. ಪ್ರವೃತ್ತಿಯಲ್ಲಿ ಕವಯತ್ರಿ. ಅವರ ಕಥೆಗಳು, ನೀಳ್ಗತೆಗಳು, ಕಾದಂಬರಿಗಳು ಮಾಸಪತ್ರಿಕೆಗಳಲ್ಲಿ ಪ್ರಕಟವಾದಾಗ ಅಚ್ಚರಿ-ಆಘಾತವನ್ನು ತಂದೊಡ್ಡಿದ್ದವು. ಅವರ "ಓ! ಗಂಡಸೇ ನೀನೆಷ್ಟು ಒಳ್ಳೆಯವನು" ಅಥವಾ "ಪ್ರೇತಲೋಕದ ಪರಿಚಯ" ಅಪಾರ ಕುತೂಹಲವನ್ನು ನನ್ನಲ್ಲಿ ಉಂಟುಮಾಡಿದ್ದವು.

ಕೆಲಕಾಲದ ಮೌನದ ನಂತರದ ಅವರ "ಬದುಕಲಾಗದ ಬಲವಂತರು" ಬೃಹತ್ ಕಾದಂಬರಿ ಹೊರಬಂತು. ಆಮೆ ತನ್ನ ಚಿಪ್ಪಿನೊಳಗೆ ಅಡಗಿದಂತೆ, ತಪಸ್ವಿ ಗುಹೆಯಲ್ಲಿ ತಪಕ್ಕಾಗಿ ಗುಪ್ತವಾದಂತೆ ಉಮಾದೇವಿ ಮತ್ತೆ ಮಾಯವಾದರು. ಈಗ ಅವರ ಮಹಾಕಾವ್ಯ ಶೈವವಾತ್ಸಲ್ಯದ ಜೊತೆ ಪ್ರಕಟವಾಗಿದ್ದಾರೆ. ಶೈವವಾತ್ಸಲ್ಯದ ಹೊರಕವಚ, ಆಕೃತಿ, ರಚನೆ, ಆಕರ್ಷಕವಾಗಿವೆ. ತಾಳೇಗರಿಗಳ ಮಹಾಕಾವ್ಯದ ಆಕಾರ ಹೀಗೆ ಅಲ್ಲವೆ? "ಕನ್ನಡ ಸಾಹಿತ್ಯದ ೨೧ನೇ ಶತಮಾನದ ೩ನೇ ಸಹಸ್ರಮಾನದ ಆದಿಕಾವ್ಯ", ಶೈವವಾತ್ಸಲ್ಯ ಪ್ರಕಟವಾಗಿರುವುದು ೧.೧.೨೦೦೧ರಂದು. ಇದೊಂದು ಎಲ್ಲ ದೃಷ್ಟಿಯಿಂದಲೂ ಚರಿತ್ರಾರ್ಹವಾದ ದಾಖಲೆಯಾಗಿ ಉಳಿಯಬಹುದಾದ ಕೃತಿ.

ಈ ಮಹಾಕಾವ್ಯವನ್ನು ಅವರು ಅರ್ಪಿಸಿದ ರೀತಿಯೇ ಅವರ ಕಲಾತ್ಮಕ ವಿಭಿನ್ನ ದೃಷ್ಟಿಕೋನಕ್ಕೆ ಸಾಕ್ಷಿ.

ಗೂಡಿನಲ್ಲಿ ವಾಸಿಸುವ ಸರ್ವಾಂತರ್ಯಾಮಿ<br>
ಈ ಉಮಾ ಒಲಿದ/ಗೊಲಿದ ನಂಜುಂಡಸ್ವಾಮಿ<br>
- ಗೆ, ಅಹಂಕಾರದಿಂದ

ಶೈವವಾತ್ಸಲ್ಯದ ಪ್ರಾರಂಭದಲ್ಲಿ ಕವಯತ್ರಿಯ ಈ ಅಹಂಕಾರ ಕೆಲವರಿಗೆ ಉದ್ಧಟತನದ್ದಾಗಿ ಕಂಡರೂ, ಕಾವ್ಯದ ಕೊನೆಗೆ ಅವರ ಅಹಂಕಾರ ಸಾಧುವೆನಿಸುತ್ತದೆ. ತಮ್ಮ ಕಾವ್ಯಪ್ರತಿಭೆಯ ಬಗ್ಗೆ ಅತಿ ವಿಶ್ವಾಸದಿಂದ ನಮ್ಮ ಹಿಂದಿನ ಮಹಾಕವಿಗಳು ಇಂಥ ಮಾತನ್ನು ತಮ್ಮ ಬಗ್ಗೆ ಹೇಳಿಕೊಳ್ಳುವುದು ಸಂಪ್ರದಾಯವೇ ಆಗಿದೆಯಲ್ಲ! ವಾಗ್ದೇವಿಯ ಭಂಡಾರವನ್ನು ತಾನು ಒಡೆದಿದ್ದೇನೆ ಎಂದು ಮಹಾಕವಿಯೊಬ್ಬ ಹೇಳಿಕೊಂಡದ್ದನ್ನು ಓದಿದ ನೆನಪು.

ಈ ಮಹಾಕಾವ್ಯದ ಬೆಲೆ ರೂ. ೨೦೦೦. ೨೬ ಸಂವತ್ಸರಗಳ ತಪದ ಫಲವಾಗಿ ೪-೫ ಲಕ್ಷ ಖರ್ಚಿನ ನಂತರ ಹೊರಬಂದಿರುವ ಈ ಕೃತಿಯ ಬೆಲೆ ಬಡ ಕನ್ನಡಿಗನಿಗೆ ಹೊರೆ ಎಂಬುದು ಕವಯತ್ರಿಗೆ ಅರಿವಿದೆ. ಹಾಗಾಗಿ ಅರಿಕೆಯಲ್ಲಿ "ಬೆಳ್ಳಿ ತಟ್ಟೆಯಲ್ಲಿ ಹಾಕಿ ಹಿಡಿಯಕ್ಕಿ ತರುವಂತೆ ಗಣಪತಿಯ... ಎದೆಗಪ್ಪಿಕೊಳ್ಳಿ" ಎಂದು ವಿನಯದಿಂದಲೇ ವಿನಂತಿಸಿದ್ದಾರೆ.

ಮಹಾಕಾವ್ಯ ಅಂದರೆ ಮಹತ್ ಆದದ್ದು-ಬೃಹತ್ ಆದದ್ದು, ಮಹೋಪಮೆಗಳಿಂದ ಕೂಡಿದ್ದು, ವೀರಾಧಿವೀರರ ಶೌರ್ಯದ ಕುರಿತಾದದ್ದು, ಮುಂತಾದವುಗಳ ಜೊತೆ ಅದೊಂದು "ದರ್ಶನ"ವನ್ನು ಮಾಡಿಸಬೇಕೆಂಬುದು ಮಹತ್ವದ ವಿಚಾರ. ಕವಯತ್ರಿಯೇ ಮಹಾಕಾವ್ಯ ಅಂದರೆ ಏನು ಎಂದು ೪೫೩ನೇ ಪುಟದಲ್ಲಿ ೬ ದ್ವಿಪದಿಗಳಲ್ಲಿ ವರ್ಣಿಸಿದ್ದಾರೆ. ಇಡೀ ಕಾವ್ಯ ಸರಳ-ಸುಂದರ ದ್ವಿಪದಿಗಳಲ್ಲಿ ಅಂತ್ಯ ಪ್ರಾಸದಿಂದ ಕೂಡಿ ರಚಿತವಾಗಿದೆ. ೮ ಭಾಗಗಳಲ್ಲಿ ೧೦೦೮ ದ್ವಿಪದಿಗಳಲ್ಲಿ ೧೬ ಅಧ್ಯಾಯಗಳಿಂದ ಕೂಡಿರುವುದೂ, ಈ ಕೃತಿಯ ಪ್ರಕಾಶನದ ಹೆಸರು "ಪಫಬಭಮ" ಎಂದಿರುವುದು ಮಂತ್ರಾಕ್ಷರ ಸಂಖ್ಯೆಗಳ ಮಹಿಮೆಗಳಿಗೆ ಅನುಸಾರವಾಗಿದೆ.

೮ ಅಧ್ಯಾಯಗಳ ಹೆಸರುಗಳು, ಆ ಅಧ್ಯಾಯದ ಒಂದು ಮಹತ್ವದ ಪದ್ಯವನ್ನು ಪ್ರಾರಂಭದಲ್ಲಿ ಬರೆದಿರುವುದು ಈ ಮಹಾಕಾವ್ಯದ ಓದಿಗೆ ಮಾರ್ಗದರ್ಶಕವಾಗಬಲ್ಲದು. ಉಮೆ ಹೆಣೆಯುವ ಈ ಬಸವನ ಗೌಸಿನಲ್ಲಿ ನಾಯಕ ಒಬ್ಬನೇ, ನಾಯಕಿಗೆ ಹುಟ್ಟು ಸಾವು ಅನೇಕ. ೮ನೆಯ ಉಮೆಯ ನಶ್ವರ ಬದುಕಿನಲ್ಲಿ ಒಮ್ಮೆ ನಡೆದುಹೋದ ವಿಷಯವೇ ಈ ಕಾವ್ಯದ ವಸ್ತು ಎಂದು ಕವಯತ್ರಿ ಸ್ಪಷ್ಟಪಡಿಸುತ್ತಾರೆ. ಪದ್ಯಗಳು ತುಂಬ ಸರಳವಾಗಿದ್ದರೂ, ಕಾವ್ಯ ಹೆಣೆದಿರುವ ತಂತ್ರ ಸ್ವಲ್ಪ ಜಟಿಲವಾಗಿದೆ. ಕಸೂತಿಯ ಕಷ್ಟವಾದ ಹೆಣಿಗೆಯಂತೆ ಸರಿಯಾಗಿ ಅರ್ಥವಾಗದಿದ್ದರೆ ದಾರದ ಉಂಡೆಗಳು ಗೋಜಲು ಗೋಜಲಾಗುವಂತೆ ಓದುಗರಿಗೂ ದಾರಿ ತಪ್ಪಬಹುದು:

ಮೊದಲ ಅಧ್ಯಾಯದಲ್ಲಿ "ಕಮನೀಶ್ವರ" ಹರನ ವರ್ಣನೆ ತುಂಬಿದೆ. ಹರನ ಸತಿ ಭ್ರಮರ ಹರಿ ವರ್ಣನೆಯಿಂದ ಮತ್ಸರಗೊಂಡು, ಹರಿಯ ದಶಾವತಾರದಂತೆ ನೀನೇಕೆ ಅವತಾರ ಎತ್ತಬಾರದೆಂದು ಪತಿಯನ್ನು ಪ್ರಶ್ನಿಸುವುದು ಸ್ತ್ರೀಸಹಜವಾಗಿದೆ. ಪಂಚಭೂತಗಳಿಂದಾದ ತನ್ನ ಮೇಲೆ ಕಾಲಸ್ತ್ರೀ ಪ್ರಭಾವ ಇರದೇ, ನೀನು ಮಾತ್ರ ಕಾಲಸ್ತ್ರೀ ತುಳಿತಕ್ಕೆ ಒಳಗಾಗುತ್ತೀಯಾ ಎಂಬ ಪತಿಯ ಮಾತಿನಿಂದ ಅಂಜಿ, ಶ್ರೀಲಕ್ಷ್ಮಿಯ ಸಲಹೆಯಂತೆ ಪಾರ್ವತಿ ಅನೇಕ ಜನ್ಮಗಳನ್ನು ತಾಳುತ್ತ ಮತ್ತೆ ಮತ್ತೆ ಪತಿಯನ್ನು ಸೇರುತ್ತಾಳೆ.

ಸಾಕ್ಷಾತ್ ಉಮೆಯೇ ಬಸವ ಬೇಡಿದ ಗೌಸನ್ನು ದಾಕ್ಷಾಯಿಣಿಯ ಸೀರೆಗಳಿಂದ ಮಾಡುವುದು, ಆ ಗೌಸಿನ ಚೌಕಗಳನ್ನು ಪುರಾಣದ ಆಕರ್ಷಕ ಪ್ರಸಂಗಗಳಿಂದ ಚಿತ್ರಿಸುವುದು ೨ನೇ ಅಧ್ಯಾಯದಲ್ಲಿ "ಬಸವನ ಗೌಸು" ರೂಪದಲ್ಲಿ ಬಂದಿದೆ.

೩ನೇ ಅಧ್ಯಾಯದಲ್ಲಿ "ಹರ-ಹರಣ"ವಾಗುತ್ತದೆ. ಸುರಗಂಗೆಗೆ ಮನಸೋಲುವ ಚಿತ್ರಣ ರಮ್ಯವಾಗಿದೆ. ಗಂಗೆ ಪ್ರವಹಿಸುವ ಸ್ಥಳಗಳ ವರ್ಣನೆ, ಪುರುಷನಿಗಾಗಿ ಹಂಬಲಿಸುವ ಸುರಗಂಗೆಯ ತಲ್ಲಣದ ಚಿತ್ರಣವಿದೆ.

"ಶ್ರೀ-ಸ್ತ್ರೀ" ೪ನೇ ಅಧ್ಯಾಯದಲ್ಲಿ ದಾಕ್ಷಾಯಿಣಿಯ ಜೀವನ ಚಿತ್ರಿತವಾಗಿದೆ. ಹಾಲಾಹಲ ಕುಡಿದು ಶಿವ ನೀಲಕಂಠನಾದುದು, ದಕ್ಷಬ್ರಹ್ಮನ ಪುತ್ರಿ ದಾಕ್ಷಾಯಿಣಿ-ಶಿವ ಪರಸ್ಪರ ಮೋಹಿಸಿ ಮದುವೆಯಾದುದು, ದಕ್ಷಬ್ರಹ್ಮನ ಯಜ್ಞಕ್ಕೆ ಪತಿಯ ಉಪದೇಶವನ್ನು ಅಲಕ್ಷಿಸಿ ದಾಕ್ಷಾಯಿಣಿ ಹೋಗಿ ಅಪಮಾನಿತಳಾಗಿ, ಯಜ್ಞಕುಂಡಕ್ಕೆ ಹಾರಿದುದು, ದಕ್ಷಬ್ರಹ್ಮನ ಯಜ್ಞ ಅಪೂರ್ಣವಾದುದು, ಶಿವ-ದಾಕ್ಷಾಯಿಣಿ ಪರಸ್ಪರಕ್ಕಾಗಿ ಹಂಬಲಿಸಿದರೂ, ಸ್ವಪ್ರತಿಷ್ಠೆಯಿಂದಾಗಿ ಒಂದಾಗದಿರುವುದು ಪತಿವಿರಹದ ಕೊರಗಿನಲ್ಲೇ ದಾಕ್ಷಾಯಿಣಿಯ ಆತ್ಮಾಹುತಿಯಾಗುತ್ತದೆ.

೫ನೇ ಅಧ್ಯಾಯ ನಕ್ಷತ್ರ-ನಖಿಕ್ಷತದಲ್ಲಿ ಹಿಮವಂತನ ಮಗಳಾಗಿ ಹುಟ್ಟಿದ ಗೌರಿ ಅಂದರೆ ಉಮಾ ಪರಮೇಶ್ವರನನ್ನು ವರಿಸುವ ಪ್ರಸಂಗವಿದೆ. ಇದೊಂದು ಮನುಜ ದಿವಿಜ ವರ್ಣಸಂಕರ ವಿವಾಹವಾಗುತ್ತದೆ.

೬ನೇ ಅಧ್ಯಾಯದಲ್ಲಿ ಉಮೆಯ ಅವಸಾನದಿಂದ ನೊಂದ ತನ್ನ ಜೊತೆಗಾತಿಯಾಗಿ ಕಾಳಿಯನ್ನು ಸೃಷ್ಟಿಸುವುದು. ಅವಳು ಅನ್ನಪೂರ್ಣಳಾಗುವುದು, ವಿಘ್ನೇಶ್ವರನ ಸೃಷ್ಟಿ, ಅವನನ್ನು ಶಿವ ಮಗನೆಂದು ಒಪ್ಪದಿರುವುದು, ನಂತರ ವ್ಯಾಸನ ಲಿಪಿಕಾರ ಗಣೇಶನ ಪ್ರತಿಭೆಗೆ ಮಾರುಹೋಗಿ ಮಗನೆಂದು ಸ್ವೀಕರಿಸುವ ಅಪೂರ್ವವಾದ ಸ್ವಾರಸ್ಯಕರ ಪ್ರಸಂಗಗಳಿವೆ.

೭ನೇ ಅಧ್ಯಾಯ ಒಂದು ಮಹತ್ವದ ಭಾಗ. ದೇವಿಸ್ತುತಿಯಲ್ಲಿ ಬರುವ ದೇವಿಯ ಅದ್ಭುತ ಆವಿರ್ಭಾವ ಹೇಗಾಯಿತು, ಮಹಿಷಾಸುರ ಮರ್ದನ ಹೇಗಾಯಿತು ಎಂಬ ಚಿತ್ರಣವಿದೆ. ದೇವಿಗೆ ಶಸ್ತ್ರಾಸ್ತ್ರಗಳನ್ನು ಕೊಟ್ಟು ಮಹಿಷನನ್ನು ಕೊಲ್ಲಿಸುವಾಗ ಇದ್ದ ಆತುರ ಕೆಲಸವಾದ ಮೇಲೆ ಇರುವುದಿಲ್ಲ. ಕ್ರೋಧಿತಳಾದ ದೇವಿ "ಮಹಿಷನನ್ನು ಕೊಂದದ್ದು ನನ್ನ ಎಡ ಪಾದ" ಎಂಬ ಸತ್ಯದ ಅರಿವು ಮಾಡಿಕೊಡುವ ಪ್ರಸಂಗ ಅರ್ಧಪರಮೇಶ್ವರಿಯಲ್ಲಿ ಇದೆ. ಭರತನಾಟ್ಯಶಾಸ್ತ್ರದ ವಿವರಗಳು ಸುಂದರವಾಗಿ ಹೆಣೆದುಕೊಂಡಿವೆ.

ಕೊನೆಯ ೮ನೇ ಅಧ್ಯಾಯದಲ್ಲಿ ಪರಮೇಶ್ವರ ಸೌಂದರ್ಯವನ್ನು ವರ್ಣಿಸುವ ಸ್ಪರ್ಧೆಯಲ್ಲಿ ದೇವಿಯ ಎಲ್ಲ ರೂಪಗಳೂ ಪ್ರಯತ್ನಿಸಿ, ಮನುಜಳಾದ ಉಮೆ ಗೆದ್ದು ಪರಮೇಶ್ವರನಿಗೆ ಅತಿ ಪ್ರಿಯಳಾಗುತ್ತಾಳೆ. ಮನುಜ-ದಿವಿಜ ವರ್ಣಸಂಕರ ಶಾಶ್ವತವಾಗಲಿ ಎಂಬ ದೇವಾದಿದೇವತೆಗಳ ಘೋಷ, ಲಿಂಗರೂಪದಲ್ಲಿ ಪರಮೇಶ್ವರ ಭೂಮಿಯಲ್ಲಿ ಆವಿರ್ಭವಿಸುವುದು, ಮುರಾರಿಯೇ ಪೂಜಾರಿಯಾಗುವುದು ಸುಂದರವಾಗಿ ಚಿತ್ರತವಾಗಿದೆ.

ಈ ಮಹಾಕಾವ್ಯದ ದರ್ಶನವೇ ಈ ವರ್ಣಸಂಕರ. ಮಾನವ ತನ್ನ ಪ್ರೀತಿ - ತ್ಯಾಗ - ಸಾಧನೆಗಳಿಂದ ದೇವಮಾನವನಾಗಲು ಸಾಧ್ಯವೆಂಬ ದರ್ಶನವಿದೆ.

ಸ್ತ್ರೀಗೆ ಸಹಜವಾದ ಕಸೂತಿ ಕಲೆಯ ಕಲ್ಪನೆಯ ಮೂಲಕ ಅಕ್ಷರರೂಪದಲ್ಲಿ ಡಾ|| ಎಂ. ಪಿ. ಉಮಾದೇವಿ ನಂಜುಂಡಸ್ವಾಮಿಗೆ ದೇವಸ್ಥಾನ ನಿರ್ಮಿಸಿದ್ದಾರೆ. ಈ ದೇವಸ್ಥಾನದ ಭಿತ್ತಿಯಲ್ಲಿ ಪುರಾಣ ಪುಣ್ಯಕತೆಗಳ ಶಿಲ್ಪಗಳನ್ನು ಕೊರೆದಿದ್ದಾರೆ. ಅವರು ಕೊಡುವ ಕೆಲವು ಲೈಂಗಿಕ ವಿಚಾರ - ವರ್ಣನೆಗಳನ್ನು ಅಶ್ಲೀಲವೆನ್ನಲಾಗದು. ದೇವಾಲಯದ ಮಿಥುನ ಶಿಲ್ಪಗಳು ಅಶ್ಲೀಲವೇ? ಇದು ಭ್ರಮರ ಪ್ರವೃತ್ತಿಯ ಗಂಡುಹೆಣ್ಣಿನ ಕಾಮಕೇಳಿಯ ವರ್ಣನೆಗಳಲ್ಲ, ಧರ್ಮದ ಚೌಕಟ್ಟಿನಲ್ಲಿ ಪತಿ - ಪತ್ನಿಯರ ನಡುವಿನ ಅತಿಶಯ ಕಾಮ - ಪ್ರೇಮದ ಚಿತ್ರಣಗಳು ಅಷ್ಟೆ. ಶಿವನನ್ನು ಲಿಂಗದ ರೂಪದಲ್ಲಿ, ಪ್ರಕೃತಿ - ಪುರುಷನ ಸಂಯೋಗ ರೂಪದಲ್ಲೇ ನಾವು ಪೂಜಿಸುವ ಹಿನ್ನೆಲೆಯಲ್ಲಿ, ಶಿವ - ಶಿವೆಯರ ಪ್ರೇಮಪ್ರಸಂಗವೆಂಬ ಪವಿತ್ರ ಭಾವನೆಯಿಂದ ಇವನ್ನು ನೋಡಬೇಕು.

ಮುದ್ದಣ - ಮನೋರಮೆಯರಂತಹ ಕಾವ್ಯಾಲಾಪದಲ್ಲಿ ಆಸಕ್ತರಾದ ರಸಿಕ ದಂಪತಿಗಳು ಶಿವ - ಶಿವೆಯರಾಗಿ ಸಂತಸಪಡಬಹುದಾದ ಕೃತಿ "ಶೈವವಾತ್ಸಲ್ಯ".

ಡಾ|| ಎಂ. ಪಿ. ಉಮಾದೇವಿಯವರ ಎಲ್ಲ ಕತೆ-ಕಾದಂಬರಿಗಳಲ್ಲಿ ನಿರ್ಮಲವಾದ ಪುರುಷಪ್ರೇಮಕ್ಕಾಗಿ ಹಂಬಲಿಸುವ ಹೆಣ್ಣಿನ ಆರ್ತನಾದವನ್ನು ನಾನು ಗುರುತಿಸಿದ್ದೇನೆ. ಈ ಮಹಾಕಾವ್ಯ "ಶೈವವಾತ್ಸಲ್ಯ"ದಲ್ಲಿ ಈ ಹೆಣ್ಣಿನ ಆರ್ತನಾದ, ಆತ್ಮ - ಪರಮಾತ್ಮನಿಗಾಗಿ ಹಾತೊರೆವ ದಿವ್ಯ ಪ್ರೇಮಕ್ಕಾಗಿ ಮೇಲೇರಿರುವುದನ್ನು ಕಂಡಿದ್ದೇನೆ. ಅಕ್ಕಮಹಾದೇವಿಯ - ಮೀರಾದೇವಿಯ ಪ್ರೇಮ - ಭಕ್ತಿಯ ಅನುಭವ - ಅನುಭಾವವನ್ನು ಉಮಾದೇವಿಯವರ ಹರ ಭಕ್ತಿ - ಪ್ರೇಮ - ವಾತ್ಸಲ್ಯ ನೀಡಿದೆ. ಇದು ಮಹಾಕಾವ್ಯವೇ ಎಂದು ಕಾಲ ನಿರ್ಣಯ ಮಾಡುತ್ತದೆ. ವಿಮರ್ಶಕರ ನಿಕಷದಲ್ಲಿ ಕಾಲದ ಮೂಸೆಯಲ್ಲಿ ಅದರ ಮೌಲ್ಯಮಾಪನವಾಗಲಿ! ಆದರೆ ಈಗ ಈ ಮಹಾನ್ ಬೃಹತ್ ಪ್ರಯತ್ನವನ್ನು ಶ್ಲಾಘಿಸಲೇಬೇಕು.

**ವಿಜಯಾ ಶ್ರೀಧರ್**
೧ನೇ ಮುಖ್ಯರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪




# ಪ್ರೆಸ್ ಎಂಬ ಹಣೆಪಟ್ಟಿ ಯಾಕೆ ಬೇಕು?

**ಡಾ|| ನಿರಂಜನ ವಾನಳ್ಳಿ**

ಈ ಚೆಗೆ ಸಾರಿಗೆ ಇಲಾಖೆಯ ಆಯುಕ್ತರು ಸುತ್ತೋಲೆಯೊಂದನ್ನು ಹೊರಡಿಸಿ ಪ್ರೆಸ್ ಎಂಬ ಹಣೆಪಟ್ಟಿ ಹೊತ್ತು ಓಡಾಡುವ ವಾಹನಗಳನ್ನು ನಿರ್ದಾಕ್ಷಿಣ್ಯವಾಗಿ ತಪಾಸಣೆ ಮಾಡಿ ಈ ಹಣೆಪಟ್ಟಿಯನ್ನು ದುರ್ಬಳಕೆ ಮಾಡುತ್ತಿರುವ ಅಥವಾ ಸುಳ್ಳಾಗಿ ಪ್ರೆಸ್ ಎಂದು ಹಣೆಪಟ್ಟಿ ಅಂಟಿಸಿಕೊಂಡು ಓಡಾಡುತ್ತಿರುವವರ ವಿರುದ್ಧ ಕ್ರಮ ಕೈಗೊಳ್ಳುವಂತೆ ಸೂಚಿಸಿದ್ದಾರೆ. ಪತ್ರಿಕೋದ್ಯಮದ ಮರ್ಯಾದೆ ಉಳಿಸುವ ದೃಷ್ಟಿಯಿಂದ ಇದೊಂದು ಅಗತ್ಯ ಕ್ರಮ.

ಇಂದು ನಗರಗಳಲ್ಲಿ ಹಾಗೂ ಸಾಮಾನ್ಯ ಪೇಟೆಗಳಲ್ಲೂ ಖಾಸಗೀವಾಹನಗಳ ಮೇಲೆ ಪ್ರೆಸ್ ಎಂಬ ಲೇಬಲ್ಲು ಅಂಟಿಸಿಕೊಂಡು ಓಡಾಡುವ ವಾಹನಗಳನ್ನು ಕಾಣುತ್ತೇವೆ. 'ಪ್ರೆಸ್' ಎಂದು ಹಣೆಪಟ್ಟಿ ಅಂಟಿಸಿಕೊಂಡು ಓಡಾಡುವ ಹೆಚ್ಚಿನವರು ತಮಗೂ ಅಪರಿಚಿತರಾಗಿದ್ದು ಪತ್ರಿಕೋದ್ಯಮಕ್ಕೆ ಸಂಬಂಧಪಡದವರೇ ಆಗಿರುತ್ತಾರೆಂದು ಪತ್ರಕರ್ತರೂ ದೂರುತ್ತಾರೆ. ಮೂಲತಃ ಹೀಗೆ ಅಂಟಿಸಿಕೊಂಡು ರಾಜಾರೋಷ ಓಡಾಡುವವರ ಪ್ರಾಮಾಣಿಕತೆಯ ಕುರಿತು ಸಮಾಜಕ್ಕೆ ಗುಮಾನಿಗಳು ಇದ್ದೇ ಇರುತ್ತವೆ.

ಮೂಲತಃ ವಾಹನಗಳ ಮೇಲೆ ಹೀಗೆ ಪ್ರಚಾರ ಮಾಡಿಕೊಳ್ಳುವ ಉದ್ದೇಶವೇ ಪ್ರಶ್ನಾರ್ಹವಾದುದು ಹಾಗೂ ಸಂದೇಹಾಸ್ಪದವಾದುದು. ಸಂವಿಧಾನಾತ್ಮಕವಾಗಿ, ಕಾನೂನಿನ ಚೌಕಟ್ಟಿನಡಿ ಪತ್ರಕರ್ತರಿಗೆ ಯಾವುದೇ ವಿಶೇಷ ಕರ್ತವ್ಯಗಳಾಗಲೀ ಹಕ್ಕುಬಾಧ್ಯತೆಗಳಾಗಲೀ ಇಲ್ಲ. ಜಗತ್ತಿನ ಅತಿ ದೀರ್ಘ ಸಂವಿಧಾನವೆಂಬ ಹೆಗ್ಗಳಿಕೆಯ ಭಾರತೀಯ ಸಂವಿಧಾನದಲ್ಲಿ ಪತ್ರಿಕಾ ಸ್ವಾತಂತ್ರ್ಯ (press freedom) ಎಂಬ ಪ್ರತ್ಯೇಕ ಪ್ರಸ್ತಾವವೇ ಇಲ್ಲ. ಅಂದರೆ ಪತ್ರಕರ್ತನೂ ಶ್ರೀಸಾಮಾನ್ಯನೇ. ಈ ದೇಶದ ಜನಸಾಮಾನ್ಯರಿಗಿರುವ ಹಕ್ಕು ಬಾಧ್ಯತೆಗಳು 'ಅಷ್ಟು ಮತ್ತು ಅಷ್ಟೇ' ಪತ್ರಕರ್ತನಿಗೂ ಅನ್ವಯಿಸತಕ್ಕದ್ದು ಎಂಬುದು ಸಂವಿಧಾನಕರ್ತರುಗಳ ಆಶಯ. ಕಾಲಕಾಲಕ್ಕೆ ಪತ್ರಿಕಾ ಸ್ವಾತಂತ್ರ್ಯದ ಕುರಿತು ನ್ಯಾಯಾಲಯ ನೀಡಿರುವ ವ್ಯಾಖ್ಯಾನಗಳೂ ಇದನ್ನು ಸಮರ್ಥಿಸಿವೆ. ಅಂದರೆ ಪತ್ರಕರ್ತನಾದ ಕಾರಣದಿಂದ ಪತ್ರಕರ್ತ ವಿಶೇಷ ಸವಲತ್ತುಗಳನ್ನು, ಜನಸಾಮಾನ್ಯರಿಗೆ ಅತೀತವಾದ ರಕ್ಷಣೆಗಳನ್ನು ಕೇಳುವುದೇ ಸಂವಿಧಾನಕ್ಕೆ ವಿರುದ್ಧವಾದುದು. ಈ ನೆಲದ ಕಾನೂನು ತಮಗೆ ಸಂಬಂಧಪಡುವುದಿಲ್ಲ ಎಂಬಂತೆ ನಡೆದುಕೊಳ್ಳುವ ಕೆಲ ಪತ್ರಕರ್ತರ ಧಿಮಾಕಿನ ನಡತೆ ಪತ್ರಿಕೋದ್ಯಮ ವೃತ್ತಿಗೆ ಯೋಗ್ಯವಾದುದಲ್ಲ.



ಈ ಹಿನ್ನೆಲೆಯಲ್ಲಿ ಪ್ರೆಸ್ ಎಂಬ ಹಣೆಪಟ್ಟಿ ಅಂಟಿಸಿಕೊಂಡು ಓಡಾಡುವ ಅಗತ್ಯವನ್ನು ಪ್ರಶ್ನಿಸಬೇಕು. ಬೆಳಗಿನ ಪತ್ರಿಕೆಗಳನ್ನು ಸಾಗಿಸುವ ದೊಡ್ಡ ವಾಹನಗಳಿಗೆ ಪ್ರೆಸ್ ಎಂಬ ಬೋರ್ಡ್ ಇದ್ದರೆ ಅರ್ಥವಾಗುವಂಥದ್ದು. ಎಲ್ಲಾ ಊರುಗಳಿಗೆ ಬೇಗನೇ ಪತ್ರಿಕೆ ತಲುಪಿಸಬೇಕಾದ ಧಾವಂತವನ್ನೂ ಒಪ್ಪುವಾ. ರೋಗಿಗಳನ್ನು ಹೊತ್ತೊಯ್ಯುವ ಅಂಬುಲೆನ್ಸಿನ ಹಾಗೆ, ಮಂತ್ರಿವರೇಣ್ಯರನ್ನು ಕೂರಿಸಿಕೊಳ್ಳುವ ಗೂಟದ ಕಾರುಗಳ ಹಾಗೆ 'ಪ್ರೆಸ್' ವಾಹನಕ್ಕೂ ದಾರಿ ಬಿಡೋಣ.

ಆದರೆ ಪ್ರೆಸ್ ಎಂದು ಅಂಟಿಸಿಕೊಳ್ಳುವ ಸಾಗಾಣಿಕೆ ವಾಹನಗಳು ಪತ್ರಿಕೆಯ ಸಾಗಾಟಕ್ಕೆ ಸೀಮಿತಗೊಳ್ಳುವುದಿಲ್ಲ. ಕೆಲವು ವೇಳೆ ಪತ್ರಿಕೆಗಳನ್ನೆಂದೂ ಸಾಗಿಸದ ವಾಹನಗಳು ಕಳ್ಳಸಾಗಾಣಿಕೆಗೆ ಬಳಸಲ್ಪಡುವಾಗ ಈ ಬೋರ್ಡು ತಗುಲಿಸಿಕೊಂಡ ಉದಾಹರಣೆಗಳಿವೆ. 'ಪ್ರೆಸ್' ಅಂತ ಬೋರ್ಡಿದ್ದರೆ ಸಾಮಾನ್ಯವಾಗಿ ಪೊಲೀಸರೂ ತನಿಖೆಗೆ ಬಾರದಿರುವುದರಿಂದ ಈ ಆಟ. ಸಮಾಜದ್ರೋಹಿ ಕೃತ್ಯಗಳಿಗೆ ಬಳಸುವ ವಾಹನಗಳಿಗೆ ಪ್ರೆಸ್ ಎಂಬ ಹಣೆಪಟ್ಟಿ ದುರಾಚಾರ ಮಾಡಲು ಸಿಕ್ಕ ಲೈಸೆನ್ಸ್ ಆಗಿಬಿಟ್ಟಿದೆ!

ನಾನು ಗಮನಿಸಿದ್ದೇನೆ. ದೊಡ್ಡ ಪತ್ರಿಕೆಗಳನ್ನು ಪ್ರತಿನಿಧಿಸುವ ಜವಾಬ್ದಾರಿಯುತ ಪತ್ರಕರ್ತರಿಗೆ 'ಪ್ರೆಸ್' ಲೇಬಲ್ಲು ಅಗತ್ಯವಿರುವುದಿಲ್ಲ. ಅವರು ತಮ್ಮ ಸ್ಕೂಟರು, ಬೈಕುಗಳ ಮೇಲೆ ಈ ಬೋರ್ಡು ತಗುಲಿಸಿಕೊಂಡು ಹೆಮ್ಮೆ ಪಡುವುದಿಲ್ಲ! ಹೆಚ್ಚಾಗಿ ಈ ಬೋರ್ಡಿನಿಂದ ಮೆರೆಯುವವರು ತನ್ನತನದಿಂದ ಅಥವಾ ಪತ್ರಿಕೆಯ ಯೋಗ್ಯತೆಯಿಂದ ಸಾರ್ವಜನಿಕರು ಗುರುತಿಸಲಾರದಂಥವರೇ ಆಗಿರುತ್ತಾರೆ ಅಥವಾ ಅವರು ಪತ್ರಿಕೆಗೆ ಸಂಬಂಧಪಟ್ಟವರೇ ಆಗಿರುವುದಿಲ್ಲ. ಹೀಗಿದ್ದೂ ಅವರು ತಮ್ಮ ದ್ವಿಚಕ್ರವಾಹನಕ್ಕೆ ಪ್ರೆಸ್ ಎಂಬ ಕಿರೀಟ ಹೊತ್ತು ಓಡಾಡುವ ಅಗತ್ಯವಿದೆಯೆಂದು ಬಯಸುತ್ತಾರಾದರೆ ಅವರ ಗಾಡಿಯ ರಿಕಾರ್ಡುಗಳು ಸರಿಯಿರುವುದಿಲ್ಲಾ ಅಥವಾ ಕಾನೂನಿಗೆ ವಿರುದ್ಧವಾದುದೇನನ್ನೋ ಮಾಡುತ್ತಿರುವ ಅಂಜಿಕೆ ಅವರಿಗಿರುತ್ತದೆ, ಅದನ್ನು ಮರೆಮಾಚಲು 'ಪ್ರೆಸ್' ಎಂಬ ಹೆಗ್ಗಳಿಕೆ!

ಇಲ್ಲವಾದರೆ ದ್ವಿಚಕ್ರವಾಹನಕ್ಕೆ ಇದನ್ನು ಅಂಟಿಸುವುದರಿಂದ ಆಗುವ ಲಾಭವಾದರೂ ಏನು? ಪ್ರೆಸ್ ಎಂಬ ಕಾರಣಕ್ಕೆ ರಸ್ತೆ ನಿಯಮಗಳನ್ನು ಪಾಲಿಸಬೇಕಿಲ್ಲ ಎಂಬ ಅರ್ಥವೇ? ಎಲ್ಲರೂ ಇವರಿಗೆ ದಾರಿ ಬಿಟ್ಟುಕೊಡಬೇಕೆಂಬ ನಿರೀಕ್ಷೆಯೆ? ಒಂದು ನಿಮಿಷದಲ್ಲಿ ವ್ಯತ್ಯಾಸವಾಗುವ ಘನಂದಾರಿ ಕೆಲಸಕ್ಕೆ ಪತ್ರಕರ್ತರು ಈ ಲೇಬಲ್ಲನ್ನು ನೆಚ್ಚುವುದು ಕಡಿಮೆಯೆಂದೇ ನನ್ನ ತಿಳುವಳಿಕೆ.

ಸರ್ಕಾರದ ಗಮನಕ್ಕೆ ಬಂದಿರುವಂತೆ ಪ್ರಿಂಟಿಂಗ್ ಪ್ರೆಸ್ಸುಗಳ ಮಾಲೀಕರೂ 'ಪ್ರೆಸ್' ಎಂದು ಹಾಕಿಕೊಳ್ಳಲು ಆರಂಭಿಸಿದ್ದಾರೆ. ಯಾಕಾಗಬಾರದು?! ತುಂಬಿದ ಕೊಡ ತುಳುಕುವುದಿಲ್ಲ ಎಂದ ಹಾಗೆ ನಿಜವಾದ ಪತ್ರಕರ್ತರಿಗೆ ಹಣೆಪಟ್ಟಿಯ ಅಗತ್ಯ ಕಾಣುವುದಿಲ್ಲ. ರಾಷ್ಟ್ರಪತಿಗಳಂಥ ವಿಐಪಿ ಬಂದಾಗ ಮಾತ್ರ ಈ ಲೇಬಲ್ಲು ಉಪಯೋಗಕ್ಕೆ ಬಂದೀತು. ಅದುಬಿಟ್ಟು ದಿನನಿತ್ಯ ಅನಗತ್ಯವಾಗಿ ಯಾರಾದರೂ ಪ್ರೆಸ್ ಎಂಬ ಹಣೆಪಟ್ಟಿ ಅಂಟಿಸಿಕೊಂಡು ದೊಡ್ಡಸ್ತಿಕೆ ಮೆರೆಯಲು ಯತ್ನಿಸುತ್ತಿದ್ದರೆ ಸಮಾಜ ಅವರ ಬಗ್ಗೆ ಒಂದು ಕಣ್ಣಿಡುವುದು ಲೇಸು.

ಡಾ. ನಿರಂಜನ ವಾನಳ್ಳಿ
ನಂ. ೩೧, 'ಶಾಲ್ಮಲಾ', ಕೃಷ್ಣಮೂರ್ತಿ ಬಡಾವಣೆ
ತೊಣಚಿಕೊಪ್ಪಲು, ಮೈಸೂರು -೯

ಶ್ರೀಶ ಉಡುಪ





# ಬಿಂಬ

ಆ ದಿನದ ಸಂಜೆ ಯಾಕೋ ಎಂದಿನಂತೆ ಇರಲಿಲ್ಲ. ಆಕಾಶದಿಂದ ಬೀಳುತ್ತಿದ್ದ ಹಗುರ ಮಳೆ ಹನಿಗಳು ಸೂಜಿಯಂತೆ ಚುಚ್ಚುತ್ತಿದ್ದವು. ತಡೆಯಲಾಗದೆ ಒಳಬಂದು ಕಿಟಕಿಯೆದುರು ಕೂತಾಗಲೂ ಹನಿ ಬೀಳುತ್ತಲೇ ಇತ್ತು; ಹೇಗಿತ್ತು ಎಂದು ತಿಳಿಯಲಿಲ್ಲ ಅಷ್ಟೆ. ರಸ್ತೆಯ ಬದಿಗಳಲ್ಲಿ ತೆಳುವಾದ ಕಾಡು, ಅಲ್ಲಲ್ಲಿ ಕಟ್ಟಡಗಳಲ್ಲಿ ಜಾಗ ಬಿಟ್ಟುಕೊಡುವುದೂ ಇತ್ತು. ಅಂತಹ ಒಂದು ಜಾಗದಲ್ಲಿ ಹರಕು ಶೀಟುಗಳ ಗೂಡಂಗಡಿ. ಅಲ್ಲಿ ನಾಲ್ಕಾರು ಜನ ನಿಂತು ಮಾತಾಡಿಕೊಳ್ಳುತ್ತಿದ್ದರು. ಹರಕು ಬಟ್ಟೆಯ ತೆಳು ದೇಹದ ಕೂಸೊಂದು ಅವರನ್ನೇ ನೋಡುತ್ತಿತ್ತು – ಚಾ ಕುಡಿಯುವವರನ್ನು. ಹೆಗಲಿಗೆ ಇನ್ನೊಂದು ಮಗುವನ್ನು ಕಟ್ಟಿಕೊಂಡು ಹೆಂಗಸೊಬ್ಬಳು ಅದನ್ನು ಕರೆದುಕೊಂಡು ಬರುತ್ತಿದ್ದಳು. ಯಾಕೋ ಅವತ್ತು ಮುನಿಸಿಪಾಲಿಟಿ ಡಬ್ಬಿಯೂ ಅವರ ಹೊಟ್ಟೆ ತುಂಬಿಸುವುದರಲ್ಲಿ ವಿಫಲವಾಗಿತ್ತು.

ಸ್ವಲ್ಪ ಹೊತ್ತಿಗೇ ಬ್ಯಾಂಡ್‌ಸೆಟ್ ಕೇಳಿಸಿತು; ಜನ ಅಡ್ಡಾಡಿದರು; ಹನಿ ಮಳೆ ಬಿದ್ದುದರಿಂದ ಓಡಿದರು; ಅಂಗಡಿಯನ್ನೇ ನೋಡುತ್ತಾ ಹಿಂದೆ ಹಿಂದೆ ಬರುತ್ತಿದ್ದ ಪುಟ್ಟಿಯನ್ನು ನೂಕಿ ಬೀಳಿಸುತ್ತಾ ನುಗ್ಗಿದರು.

ಮನೆಯೊಳಗೆ ಹೀಗೇ ನಾಲ್ಕಾರು ಗೆಳೆಯರು ಹರಟುತ್ತಿದ್ದೆವು. ಬ್ಯಾಂಡ್‌ಸೆಟ್‌ನ ಶಬ್ದ ಕೇಳಿ ಹರಿ ಕೇಳಿದ : ''ಏನೋ ಮಾರಾಯ, ಏನು ವಿಶೇಷ? ಮದುವೆ ಪಾರ್ಟಿಯ ಬ್ಯಾಂಡ್‌ಸೆಟ್ ಕೇಳ್ತಾ ಇದೆ.'' ಮೈತ್ರಿ ತಮಾಷೆ ಮಾಡುವ ಹಾಗೆ 'ನಿಂಗೆ ಬೆಳಗ್ಗೆ ಪೇಪರ್ ನೋಡಲಿಕ್ಕೆ ಆಗಲ್ವಾ' ಎಂದದ್ದೇ ತಡ, ಹರಿ ಹಾರಿಬಿಟ್ಟ, 'ನಾನ್ ಕೇಳಿದ್ದೇನು ನೀನು ಹೇಳಿದ್ದೇನು? ನಾನ್‌ಸೆನ್ಸ್. ಏನು ವಿಶೇಷ ಅಂತ ಹೇಳಿದ್ರೆ ಸಾಕಾಗ್ತಿತ್ತು.' ರಾಜಿ ಮಾಡಿಸುವ ಧಾಟಿಯಲ್ಲಿ ಹೇಮ ಹೇಳಿದಳು – ಏ ಸುಮ್ನೆ ಕೂತ್ಕೊಳ್ರಪ್ಪ, ಎಷ್ಟು ಕಚ್ಚಾಡ್ತೀರೋ. ಇವತ್ತು ಮದರ್ ತೆರೆಸಾಳನ್ನು ಪೋಪ್ ಜಾನ್ ಪಾಲ್ ವ್ಯಾಟಿಕನ್ ಸಿಟೀಲಿ ಸಂತೆಯನ್ನಾಗಿ ಮಾಡ್ತಾನಂತೆ. ಅದೇ ವಿಶೇಷ. ಬೆಳಗ್ಗೆ ಪಕ್ಕದ್ಮನೆ ರಾಮು ಹೇಳಿದ್ದ. 'ಏನು ಯಾವ ಸಂತೆ? ಜನತಾ ಬಜಾರೋ, ಸೂಪರ್ ಬಜಾರೋ, ಹೈಟೆಕ್ ಬಜಾರೋ, ಇರೋ ಹಾಗೆ ಇದ್ಯಾವ ಬಜಾರು?' ಅಂದ ಮೈಕೆಲ್. 'ಥೂ' ಇವ್ನಿಗೊಬ್ಬಿಗೆ ಎಲ್ಲ ಬಿಡಿಸಿ ಹೇಳ್ಬೇಕು. ನೋಡು ಇವತ್ತು ಪೋಪ್ ಜಾನ್ ಪಾಲ್ ತೆರೆಸಾಗೆ 'ಸಂತ'ರ ರೀತಿಯ ಎಂಥದೋ ಒಂದು ಪದವಿ ಕೊಡ್ತಾನಂತೆ. ಆಗ ಇಷ್ಟತನಕ ಮದರ್ ಆಗಿದ್ದವಳು ಸೈಂಟ್ ತೆರೆಸಾ ಆಗ್ತಾಳಂತೆ. 'ಮೈತ್ರಿ, ನಾನೂ ಅದ್ಕೇ ಹೇಳಿದ್ದು ಗೊತ್ತಾಯ್ತಾ' ಅಂದ ಹೇಮಳ ಮುಖ ಮರಿಟೀಚರ್ ಹಾಗೆ ಇತ್ತು. ಮೈಕೆಲ್ ಬಿಡ್ತಾನಾ? 'ಏನು ಅದಕ್ಕೆ ಒಂದು ಹಜಾರಾ, ಎಷ್ಟಂತೆ ಸರ್ಟಿಫಿಕೇಟಿಗೆ?'

ಅಷ್ಟರಲ್ಲಿ ಪಕ್ಕದ ರಸ್ತೆಯಲ್ಲಿ ಸಾಲು ಸಾಲು ವಾಹನ ಹೋಗುವುದು ಕಾಣಿಸಿತು. ರಾಶಿ ರಾಶಿ ಜನರೂ ಹೋಗುತ್ತಿದ್ದರು. ಯಾರೋ ಒಬ್ಬ ರಿಕ್ಷಾಕ್ಕೆ ಮೈಕ್ ಕಟ್ಟಿಕೊಂಡು ಏನೋ 'ಲೊಳ್ ಲೊಳ್' ಎನ್ನುತ್ತಿದ್ದ. ಲುಂಗಿ ಮುಂಡಾಸುಗಳೇ ಕಾಣುತ್ತಿದ್ದಲ್ಲಿ ಗುಲಾಬಿ ಮಲ್ಲಿಗೆಗಳೂ ಕಾಣಿಸಿದವು. ಎರಡು ಲಾರಿಗಳಲ್ಲಿ ಮರದ ಕೊಂಬೆ, ಎಲೆ ಇತ್ಯಾದಿಗಳಿಂದ ವೇದಿಕೆ ಕಟ್ಟಿ ಅಲಂಕರಿಸಿದ್ದರು. ಅಣಕು ಮದರ್ ತೆರೆಸಾಗಳು ಅದೇ ನೀಲಿ ಅಂಚಿನ ಅಚ್ಚ ಬಿಳಿಯ ಸೀರೆಯ ಸೆರಗನ್ನು ತಲೆಗೆ ಹೊದೆದಿದ್ದರು. ಸೆರಗು ಗಾಳಿ ಹಾರಿಸಿದಂತೆ ಆಗಾಗ ತಲೆಯಿಂದ ಜಾರುತ್ತಿತ್ತು. ಸರಿಮಾಡಿಕೊಳ್ಳುತ್ತಿದ್ದರು. ಆದರೆ ಗಾಳಿ ಇರಲಿಲ್ಲ. ಅಣಕುಗಳಲ್ಲಿ ಒಂದಿಬ್ಬರು ಕಾಲೇಜ್ ಯುವತಿಯರು, ಒಂದು ಹುಡುಗಿಯ ಮುಖದ ಪೌಡರಿನಲ್ಲಿ ಮಳೆಯ ಹನಿ ಕುಂಚವನ್ನಾಡಿಸಿತ್ತು. ಜನ ಕುಣಿಯುತ್ತಿದ್ದರು. ಬೊಬ್ಬೆ ಹಾಕುತ್ತಿದ್ದರು; ಅಂತಹವರ ಕಣ್ಣುಗಳನ್ನು ಯಾರೋ ಕೆಂಪಾಗಿಸಿದಂತಿತ್ತು.... ಬ್ಯಾಂಡುಗಳು ಮತ್ತೆ ಮತ್ತೆ ಹೊಡೆತ ತಿನ್ನುತ್ತಲೇ ಇದ್ದವು..... ಮೈಕೆಲ್ ''ಸರ್ಟಿಫಿಕೇಟ್ ಯಾರಿಗೆ ಬೇಕು, ನೂರು ರೂಪಾಯಿ, ಐನೂರು ರೂಪಾಯಿ'' ಎನ್ನುತ್ತಿದ್ದ. ಯಾಕೋ ಇತಿಹಾಸದ ಮೇಷ್ಟ್ರು ನೆನಪಾಗುತ್ತಿದ್ದರು; ಅವರ ಕ್ಲಾಸು ನೆನಪಾಯಿತು. ಇಲ್ಲಿದ್ದವರು ಆ ಕ್ಲಾಸ್‌ಮೇಟ್ಸೇ ಆಗಿದ್ದರು. ಸಿಇಟಿಗೆ ತಯಾರಿ ಮಾಡುತ್ತಿದ್ದ ಪಕ್ಕದ ಮನೆಯ ರಶ್ಮಿ 'ವಾಲ್ಕೆನೋ' 'ಇಗ್ನಿಯಸ್ ರಾಕ್' ಇತ್ಯಾದಿ ಏನೋ ಉರು

ಹೊಡೆಯುತ್ತಿದ್ದಳು. ಮೈಕೆಲ್ ಹೇಳಿದ : 'ಈ ಇಗ್ನಿಯಸ್ ನಮಗೆ ಸಮಾಜದಲ್ಲಿ ಇತ್ತಲ್ಲ... ಏನು ಅವನ ಹೆಸರು...' 'ಇಗ್ನೇಷಿಯಸ್ ಲಾಯೆಲಾ, ಏನು ಸುಮ್ನೆ ಕೂತಿದ್ದಿ?' ಎಂದು ನನ್ನನ್ನು ಕೇಳಿದಳು ಮೈತ್ರಿ. ನವೋದಯ, ಪುನರುತ್ಥಾನ ಪಾಠದ ಸಮಯದಲ್ಲಿ ನಾನು ಲಾಯೆಲಾ, ಮೈಕೆಲ್ ಮಾರ್ಟಿನ್ ಲೂಥರ್, ರಾಮು ಇನ್ನ್ಯಾವನೋ... ಆಗಿದ್ದಿತು. ಹಾಗೇ ಕ್ಷಮಾ ಪತ್ರದ ಮಾರಾಟದ ಬಗ್ಗೆ ನಾವು ಡಯಲಾಗ್ ಹೊಡೆದದ್ದು ನೆನಪಾಯಿತು. ರೋಮ್ ನೆನಪಿಗೆ ಬಂತು. ವ್ಯಾಟಿಕನ್ ಚರ್ಚ್ ಹೇಗಿರಬಹುದು ಇತ್ಯಾದಿ ಎಲ್ಲ ಕಲ್ಪಿಸಿಕೊಂಡೆ. ಆ ಹಾಲ್‌ನಲ್ಲಿ ಇನ್ನೇನು ಪೋಪ್‌ಗೆ ವಿಶ್ ಮಾಡಿ ಮಾತನಾಡಲು ಶುರು ಮಾಡಬೇಕು, ಅಷ್ಟರಲ್ಲಿ ಕಾಲಿಗೆ ಕಲ್ಲು ಎಡವಿದಂತಾಯಿತು...

ಎಡವಿದ್ದು ಕಲ್ಲನ್ನಲ್ಲ, ಕಿವಿಗೆ ತಟ್ಟಿದ ಕೂಗು ಆ ಅನುಭವವನ್ನು ಕೊಟ್ಟಿತ್ತು. ಅತ್ತ ನೋಡಿದಾಗ ಪುಟ್ಟಿಯ ಅಮ್ಮ ಅಳುತ್ತಿದ್ದುದು ಕಾಣಿಸಿತು. ಆಕೆ ಇಲ್ಲಿಯವಳಲ್ಲ... ಎಲ್ಲೋ ಕೊಯಮತ್ತೂರಿನ ಕಡೆಯವಳಂತೆ. ಹತ್ತು ವರ್ಷಕ್ಕೇ ಮೂವತ್ತು ವರ್ಷದ ಹುಡುಗನ ಕೈಹಿಡಿದವಳಂತೆ. ಆಕೆಯ ಗಂಡ ಫ್ಯಾಕ್ಟರಿಯ ಕೆಲಸಗಾರನಂತೆ. ವರ್ಷದ ಹಿಂದೆ ಅದನ್ನು ಸರಕಾರದ ಕೈಯಿಂದ ಯಾರೋ ಅಮೆರಿಕಾದವ ತಗೊಂಡದ್ದಂತೆ. 'ಅವ ಚಲೋ ರಸಿಕ ಕಣ್ರೀ, ಇದು ಇಂಡಿಯಾದಲ್ಲಿ ಅವನ ಇಪ್ಪತ್ತೊಂದ್ನೇ ಕಂಪ್ನಿ' ಅನ್ನುತ್ತಿದ್ದರು ಪಾಟೀಲರು. ಆನಂತರ ಕಂಪ್ನಿ ಹಗಲೂ ರಾತ್ರಿ ಕೆಲಸ ಮಾಡ್ತಾ ಇತ್ತಂತೆ. ರಾತ್ರಿ ಕೆಲಸಕ್ಕೆ ಸಂಬಳ ಹೆಚ್ಚು ಮಾಡ್ಬೇಕು ಅಂತ ಕೇಳಿದ್ರಂತೆ. ಅವ್ರನ್ನೆಲ್ಲ ಕೆಲ್ಸದಿಂದ ಬಿಡಿಸಿದ್ನಂತೆ. ಒಂದಿನ ಅವ್ರು ಮುಷ್ಕರಾ ಮಾಡಿದ್ರಂತೆ. ಗಲಾಟೆ ಆಗಿ ಗೋಲಿಬಾರ್‌ನಲ್ಲಿ ಸತ್ತ ಜನರಲ್ಲಿ ಪುಟ್ಟಿಯ ಅಪ್ಪನೂ ಒಬ್ಬ ಅಂತ ಮರುದಿನ ಪೇಪರ್ ಹೇಳಿತ್ತು. ಆಗ ಪುಟ್ಟಿಗೆ ಮೂರು ತಿಂಗಳು....

ದಿನ ಸಾಗಿಸಲು ಪುಟ್ಟಿಯ ಅಮ್ಮ ಆ ಸಾಹೇಬನಲ್ಲಿ ಕೆಲ್ಸಕ್ಕೆ ಸೇರಿದ್ಳಂತೆ. ಆರು ತಿಂಗ್ಳ ನಂತ್ರ ಪುಟ್ಟಿಗೆ ಜ್ವರ ಶುರುವಾಗಿ ಆಸ್ಪತ್ರೆ ಸೇರಿದಾಗ ಸಾಲ ಮಾಡಿದ ಹಣ ತುಂಬಲು ಅವಳು ರಾತ್ರಿನೂ ಕೆಲಸ ಶುರು ಮಾಡಿದಳಂತೆ. ಒಂದು ದಿನ ಬೆಳಗಿನ ಜಾವ ಐದು ಗಂಟೆಗೆ ಮನೆಗೆ ಬರುತ್ತಿರುವಾಗ ಫಿಯೆಟ್ ಕಾರು ಅವಳನ್ನು ನಿಲ್ಲಿಸಿ ತನ್ನೊಡಲಿಗೆ ತುಂಬಿಸಿ, ಸಾಹೇಬ್ರ ಬಂಗ್ಲೆಗೆ ಕರಕೊಂಡು ಹೋಯಿತಂತೆ... 'ಆಕಿ ಇಲ್ಲಿಗೆ ಬಂದು ಒಂದೂವರೆ ವರ್ಷಾತು. ಚಿಕ್ಕ ಮಗೂಗೆ ಒಂದೈದು ತಿಂಗ್ಳು' ಎಂದಿದ್ದರು ಪಾಟೀಲರು.

'ಅಯ್ಯೋ ನನ್ ಮಗಳೆಲ್ಲಿ? ಕೊಡ್ರಪ್ಪೋ ನನ್ ಮಗಳನ್ನ ಹುಡುಕಿ ಕೊಡ್ರಿ' ಎಂದು ತಮಿಳಿನ ಧಾಟಿಯಲ್ಲಿ ಬೊಬ್ಬೆ ಹೊಡೆಯುತ್ತಿದ್ದಳು. ಮೂವತ್ತು ವರ್ಷದ ಆಕೆಗೆ ಒಬ್ಬ 'ಛೀ ಮುದುಕಿ, ನಿನ್ನ ಬೊಬ್ಬೆ ಕೇಳ್ತಾ ಕೂತ್ರೆ ಚರ್ಚ್‌ಗೆ ಹೋಗೋದಿಕ್ಕೆ ತಡ ಆಗತ್ತೆ' ಎನ್ನುತ್ತಾ ಮುಂದೆ ಹೋದ; ಉಳಿದವರನ್ನು ನೋಡಿ ಭುಜ ಕುಣಿಸಿದ.... ಪುಟ್ಟಿಯತ್ತ ನೋಡಿದೆ. ಅದಿನ್ನೂ ನೆಲದಲ್ಲೇ ಬಿದ್ದುಕೊಂಡಿತ್ತು. ಹಲವು ಬೂಟಿನ ಹಿಮ್ಮಡಿಯಲ್ಲಿ ಚರ್ಮ ಇದ್ದದ್ದು ನಂತರ ನಾನು ಚರ್ಚಿನೆದುರು ಹಾದು ಹೋದಾಗ ನಾಯಿ ಮೂಸಿ ನೋಡುತ್ತಿದ್ದುದನ್ನು ನೋಡಿ ತಿಳಿಯಿತು.

ಯಾರೋ ಒಬ್ಬ ಪೊಲೀಸ್ ಬಂದು ಜನರನ್ನು ಬದಿಗೆ ಸರಿಸಿದ. ಇನ್ನೊಬ್ಬ ಪೇದೆ ಕೊಳೆಯಾಗಿದ್ದ ಮಗುವನ್ನು ರಸ್ತೆಯಿಂದೆಳೆದು ಬದಿಗೆ ಸರಿಸಿ ಮುನ್ನಡೆದ. ಮಗುವಿಗೆ ಜನ ಜಾಗ ಬಿಟ್ಟುಕೊಟ್ಟು ಮೂರಡಿ ಹಿಂದೆ ಸರಿದರು. ಯಾಕೋ ಖಾಕಿ ಬಟ್ಟೆ ನೋಡಿಯೋ ಅಥವಾ ವಾಸನೆ ತಡೆಯಲು ಆಗದೆಯೋ ತಿಳಿಯಲಿಲ್ಲ. ಬಿಷಪ್, ಫಾದರ್‌ಗಳೆಲ್ಲ ಮರ್ಸಿಡೀಸ್‌ನಲ್ಲಿ ಅರ್ಜೆಂಟಲ್ಲಿ ಬಂದರು. ಪುಟ್ಟಿಯ ಅಮ್ಮ ಪುಟ್ಟಿಯನ್ನು ಬದಿಗೆ ಸರಿಸಿದಾಗ ಜನ ಬಿಟ್ಟ ಜಾಗದಲ್ಲಿ ಅವಳನ್ನು ನೋಡಿ 'ಪುಟ್ಟೀಈಈ...' ಎನ್ನುತ್ತಾ ಒಮ್ಮೆಗೆ ಓಡಿಬಂದಳು....

ಬಿಷಪ್ಪರ ಅದೃಷ್ಟಕ್ಕೆ ಅವಳೇನೂ ಸಾಯಲಿಲ್ಲ. ಪುಟ್ಟಿಯಿಂದ ಮೂರಡಿ ದೂರದಲ್ಲಿದ್ದ ಜನ ಮತ್ತೂ ಆರಡಿ ಹಿಂದೆ ಸರಿದರು. ಒಂದು ಹೆಂಗಸಿಗೆ ಮತ್ತೊಂದು ಹಸುಳೆಗೆ ಜಾಗ ಆಗಬೇಡವೇ? ಇದು ನಡೆವ ಹೊತ್ತಿಗೆ ಬಿಷಪ್ಪರು ಪರಿವಾರದೊಂದಿಗೆ ಚರ್ಚ್ ಹಾಲ್‌ನೆದುರು ಇಳಿದಾಗಿತ್ತು. ಅವರ ಕೈ ಗಣ್ಯರಿಂದ ಹಸ್ತ ಲಾಘವ ಪಡೆದು, ಅವರಿಂದ ಹಿಡಿಸಿಕೊಂಡು ಬಿಷಪ್ಪರನ್ನು ಒಳಗೆ ಕರೆದೊಯ್ದಿತು... ಇತ್ತ ತಾಯಿಯ ಕೈ ಎರಡು ಹಸುಳೆಗಳನ್ನು ಎದೆಗೆ ಅಪ್ಪಿಕೊಂಡಿತ್ತು. ಸುತ್ತ ಕೆಂಪು ಮಣ್ಣಿತ್ತು. ಯಾಕೋ ಮಳೆಗೂ ಮುನಿಸು. ನೆತ್ತರನ್ನು ತೊಳೆಯಲು ಅದು ಬರದೇ ಕೊನೆಗೆ ಪಕ್ಕದ ನಳ್ಳಿಯಿಂದ ಪೇದೆಯೊಬ್ಬ ಬಕೆಟ್ಟಿನಲ್ಲಿ ಡಾಂಬರು ರಸ್ತೆಗೆ ನೀರು ಚೆಲ್ಲಿದ್ದಾಗಿತ್ತು.

ಮೈತ್ರಿ ಈ ಹೊತ್ತಿಗೆ ಎಲ್ಲಿಂದಲೋ ಮದರ್ ತೆರೆಸಾಳ ಬಗ್ಗೆ ಇದ್ದ ಬುಕ್ ತಂದಿದ್ದಳು. ಹರಿ ಇವತ್ತಿನ ಪೇಪರ್ ತಂದಿದ್ದ. ಮೇಜಿನ ಮೇಲೆ ಮೊನ್ನಿನ ಪೇಪರಿತ್ತು; ಮುಖಪುಟದಲ್ಲಿ 'ಇಸ್ರೇಲ್ ಧಾಳಿಗೆ ಪೋಪ್ ಸಹಾನುಭೂತಿ' ಎಂದು ದಪ್ಪಕ್ಷರದಲ್ಲಿ ಅಚ್ಚಾಗಿತ್ತು. ಮತ್ತೆ ಇತಿಹಾಸದ ಮೇಷ್ಟ್ರು ನೆನಪಾದರು. ಈಗ ಅವರ ಪಕ್ಕ ಟಾಲ್‌ಸ್ಟಾಯ್ ನಿಂತಿದ್ದ - ನೆಕ್ಲುದೋವ್‌ನೊಂದಿಗೆ. ಮಾಸ್ಲೋವಾ-ನೆಕ್ಲುದೋವ್ ಒಬ್ಬರೇ ಆಗಿದ್ದಂತೆ ಒಮ್ಮೆ ಕಾಣಿಸಿದರೆ ಇನ್ನೊಮ್ಮೆ ಬೇರೆ ಬೇರೆಯಾಗಿ ಅಕ್ಕಪಕ್ಕ ನಿಂತಿದ್ದರು; ಮತ್ತೊಮ್ಮೆ ದೂರ ದೂರದಿಂದ ಓಡಿಬರುತ್ತಿದ್ದರು; ಇನ್ನೊಮ್ಮೆ ದೂರವಾಗಿ ಹೋಗುತ್ತಿದ್ದರು.... ಯಾಕೋ ಇದೇ ಚಿತ್ರ ಸ್ಥಿರವಾಗುತ್ತಾ ಬಂತು. ನೆಕ್ಲುದೋವ್ ಕ್ರಮೇಣ ಮರೆಯಾಗಿ ಅಲ್ಲಿ ತೆರೆಸಾ ಚಿತ್ರ ಕಾಣಿಸಿತು. ಕೆಳಗೆ ಹಲವು ಮಾಸ್ಲೋವಾಗಳಿದ್ದರು. ತೆರೆಸಾ ಓಡೋಡಿ ಬರುತ್ತಿದ್ದಳು....

ಅಲ್ಲಿ ಕಲ್ಕತ್ತಾದ ರಸ್ತೆಯಲ್ಲಿ, ಮಳೆ ಬಿರುಸಿನಲ್ಲಿ ಹೊಡೆಯುತ್ತಿತ್ತು. ಆಗಷ್ಟೇ ತೆರೆಸಾ ತಾನು ಇನ್ನರ್ಧ ಗಂಟೆಯೊಳಗೆ ಫಂಕ್ಷನೊಂದಕ್ಕೆ ಹೋಗಬೇಕಾಗಿದೆಯೆಂದೂ ಅದಕ್ಕಾಗಿ ವ್ಯವಸ್ಥೆ ಮಾಡುತ್ತಾರೆಂದೂ ಮನೆವಾರ್ತೆಯವಳ ಮೂಲಕ ತಿಳಿದುಕೊಂಡಿದ್ದಳು. ಆದರೂ ಒಂದು ತಣ್ಣನೆಯ ಆರ್ತನಾದ ಆಕೆಯನ್ನು ಬೀದಿಗೆಳೆದು ತಂದಿತ್ತು. ಅಲ್ಲೊಬ್ಬ ರೋಗಿ ಬಿದ್ದುಕೊಂಡಿದ್ದ. ಅವನ ಕಾಲುಗಳನ್ನು ಹೆಗ್ಗಣಗಳು ಕೊರೆದು ತಿನ್ನುತ್ತಿದ್ದುವು. ಪ್ರಜ್ಞಾಹೀನ ಸ್ಥಿತಿಯಲ್ಲಿದ್ದ ಆತನನ್ನು ಸ್ವಲ್ಪ ಹೊತ್ತು ಪ್ರಯತ್ನಪಟ್ಟು ಪ್ರಜ್ಞೆ ಬರುವಂತೆ ಮಾಡಿದ ತೆರೆಸಾ ಎರಡು ಕೈಚಾಚಿ ಅವನನ್ನು ಎತ್ತಿಕೊಂಡಳು. ಅಲ್ಲೇ ಹತ್ತಿರದ ಆಸ್ಪತ್ರೆಗೆ ಸಾಗಿಸಿದಾಗ ರಜಾ ದಿನವಾದ ಅಂದು ರೋಗಿಗಳನ್ನು ದಾಖಲು ಮಾಡಿಕೊಳ್ಳುವುದು ಕಾನೂನು ಪ್ರಕಾರ ತಪ್ಪೆಂದು ನೌಕರನೊಬ್ಬ ಲಾಯರಿಕೆ ಮಾಡಿದ. ಅಲ್ಲಿಂದ ಕೆಲವು ಕಡೆ ಸುತ್ತಿ ಸುತ್ತಿ ಕೊನೆಗೆ ಒಂದು ದವಾಖಾನೆಗೆ ಸೇರಿಸಿದರು. ಅದು ಮಾಸ್ಲೋವಾಳ ಸೈಬೀರಿಯಾದ ಜೈಲಿನಂತೆಯೇ ಇತ್ತು. ನೆಲದಲ್ಲಿ ಒತ್ತೊತ್ತಿಗೆ ಚಾಪೆ ಹಾಕಿ ರೋಗಿಗಳನ್ನು ಮಲಗಿಸಿದ್ದರು; ಕೀವುಗಳ ಹೊಲಸು ವಾಸನೆ ವಾಕರಿಕೆ ಹುಟ್ಟಿಸುವಂತಿತ್ತು. ಅಲ್ಲೇ ತೆರೆಸಾ ಸ್ವಲ್ಪಮಟ್ಟಿಗೆ ದಾದಿಯಾದಳು...

ಹಾಗೇ ಕಣ್ಣೆದುರು ಸ್ವಲ್ಪ ಹೊತ್ತಿನ ತನಕ ತೆರೆಸಾ ಮತ್ತು ರೋಗಿ ಮಾತ್ರ ಇದ್ದರು. ನಂತರ ತೆರೆಸಾ ನೆಕ್ಲುದೊವ್‌ನನ್ನು ಹಿಂಬಾಲಿಸಿದಂತೆ ಕಂಡಿತು. ರೋಗಿಯ ಅಕ್ಕಪಕ್ಕದಲ್ಲಿ ಎರಡು ಹಸುಳೆಗಳಿದ್ದವು. ಎದ್ದು ಹತ್ತಿರ ಹೋದೆ. ಅಲ್ಲಿ ಪುಟ್ಟಿಯ ತಾಯಿ ಮಲಗಿದ್ದಳು. ಪ್ರಜ್ಞೆ ತಪ್ಪಿದಂತಿತ್ತು. ನೀರು ಇತ್ಯಾದಿ ತರಲು ಮನೆಯತ್ತ ನಡೆದೆ.

'ಮಹಾಜನಗಳೇ.... ಕ್ರಿಸ್ತಪ್ರಭು... ಬೆಟ್ಟದ ಮೇಲಿನ ಉಪದೇಶ....ತೆರೆಸಾ....' ಭಾಷಣ ಚರ್ಚಿನಿಂದ ಕೇಳುತ್ತಿತ್ತು. ಆ ಹೊತ್ತಿಗೆ ಮೈಕೆಲ್ ಹೇಳಿದ – ಇವತ್ತು ಪೋಪ್ ತೆರೆಸಾಗೆ ಸಂತ ಪದವಿ ಕೊಡುವುದರಿಂದ ನಮ್ಮ ಊರಿನ ಚರ್ಚ್‌ನಲ್ಲಿ ಪೋಪ್‌ಗೆ ತೆರೆಸಾಗೆ ಗೌರವ ಸೂಚಿಸ್ತಾರಂತೆ ಅಂತ....

ಆತನಲ್ಲಿ ಬ್ಯಾಂಡೇಜು ತರಲು ಹೇಳಿ ನೀರು ತೆಗೆದುಕೊಂಡು ಪುಟ್ಟಿಯ ಅಮ್ಮನ ಮುಖಕ್ಕೆ ಚಿಮುಕಿಸಿದೆ.... ಚರ್ಚಿನಿಂದ ಪಾರ್ಟಿಯ ಗದ್ದಲ, ಸಂಗೀತ ಕೇಳಿಬರುತ್ತಿತ್ತು.... 'ಯಾಕೋ ಆ ವೈನ್‌ನ ಅಮಲು ಎಂದಿನಂತಿಲ್ಲ, ಈ ಅಮಲು ಎಲ್ಲಾ ಕಡೆ ತುಂಬಿಹೋಗಿದೆ ಮಾರಾಯಾ' ಎನ್ನುತ್ತಾ ಇಬ್ಬರು ಹೋಗುತ್ತಿದ್ದರು.. ಇನ್ನೊಬ್ಬ ''ಈ ಅಮಲು ದೋಚುವವರಿಗೆ ಒಳ್ಳೆಯ ಅವಕಾಶ....'' ಎನ್ನುತ್ತಾ ನಮ್ಮತ್ತ ನೋಡಿ ಥೂ ಎಂದು ಉಗಿದು ನಡೆದ.

ಯಾಕೋ ಪುಟ್ಟಿಗೆ ಮಾತ್ರ ಪ್ರಜ್ಞೆ ಬಂದಿತ್ತು.... ಪಾರ್ಟಿ ಇನ್ನೂ ಮುಗಿದಿರಲಿಲ್ಲ..... ಮಳೆ ಜೋರಾಗಿ ಸುರಿಯುತ್ತಿತ್ತು. ಎದೆಯ ಮೇಲಿನ ಕೈಗಳು ಹಾಗೆ ಮರಗಟ್ಟಿದ್ದವು.... ಮಿಂಚಿನ ಬೆಳಕಿನಲ್ಲಿ ನೆಕ್ಲುದೋವ್ ಯಾರನ್ನೋ ಕರೆದುಕೊಂಡು ಬರುತ್ತಾ ಇರುವಂತೆ ಕಾಣುತ್ತಿತ್ತು...

ಪುಟ್ಟಿಯ ಮುಖ ತೊಳೆಯುತ್ತಾ ನಿಟ್ಟುಸಿರು ಬಿಟ್ಟು ಮುಗುಳ್ನಕ್ಕೆ.

ಶ್ರೀಶ ಉಡುಪ
ಕೈಕಂಬ, ಅಜೆಕಾರು, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ-೫೭೪ ೧೦೧

ಹೆಂಗಸರ ಜೊತೆ ಇರುವವರು ಬಡಾಯಿ ಕೊಚ್ಚಲೇಬೇಕು. ವಾರ್ಸೋದ ಸಾಹಿತ್ಯ ವಲಯದಲ್ಲಿ ಮ್ಯಾಕ್ಸ್ ಪರ್ಸ್ಕಿಯನ್ನು ಹೆಂಗಸರ ಹುಚ್ಚನೆಂದೇ ಕರೆಯಲಾಗುತ್ತಿತ್ತು. ಆತನ ಶಿಷ್ಯರ ಪ್ರಕಾರ ಆತ ಹೆಂಗಸರಿಗಾಗಿ ತನ್ನ ಸಮಯವನ್ನು ಹಾಳು ಮಾಡಿರದಿದ್ದರೆ, ಈಗ ಬಹುಶಃ ಎರಡನೇ ಶೋಲೆಮ್ ಅಲೆಚೆಮ್‌ನೋ ಅಥವಾ ಒಬ್ಬ ಯಿದ್ದಿಶ್ ಮೊಪಾಸಾನೋ ಆಗಿರುತ್ತಿದ್ದ. ಆತ ನನ್ನಿಂದ ಇಪ್ಪತ್ತು ವರ್ಷ ದೊಡ್ಡವನಾಗಿದ್ರೂ ನಾವು ಒಳ್ಳೆಯ ಸ್ನೇಹಿತರಾಗಿದ್ದೆವು. ನಾನು ಆತನ ಲೇಖನಗಳನ್ನು ಓದಿದ್ದೆ ಮತ್ತು ಎಲ್ಲಾ ಕಥೆಗಳನ್ನೂ ಕೇಳಿದ್ದೆ. ಬೇಸಿಗೆಯ ಆ ಸಂಜೆ ನಾವು ಕಾಫಿ ಕುಡಿಯುತ್ತಾ, ಬ್ಲೂಬೆರಿ ಕುಕ್ಕೀಸ್ ತಿನ್ನುತ್ತಾ ಒಂದು ಸಣ್ಣ ಗಾರ್ಡನ್ ಕೆಫೆಯಲ್ಲಿ ಕೂತಿದ್ದೆವು. ಸೂರ್ಯ ಆಗಲೇ ಮುಳುಗಿದ್ದ. ಟಿನ್ ಹೆಂಚುಗಳ ಮೇಲೆ ಆಕಾಶದಲ್ಲಿ ಸೆಪ್ಟೆಂಬರ್‌ನ ಬಿಳಿಚಿಕೊಂಡ ಚಂದ್ರ ತೂಗಾಡುತ್ತಿದ್ದ. ಆದರೆ, ಇನ್ನೂ ಸ್ವಲ್ಪ ಉಳಿದಿದ್ದ ಸೂರ್ಯಾಸ್ತದ ಬೆಳಕು ಕೆಫೆಯ ಒಳಭಾಗದ ದಾರಿಯಲ್ಲಿದ್ದ ಗಾಜಿನ ಬಾಗಿಲಿನಲ್ಲಿ ಪ್ರತಿಬಿಂಬಿಸುತ್ತಿತ್ತು. ಗಾಳಿ ಬೆಚ್ಚಗೆ, ಪ್ರಾಗಾ ಕಾಡಿನಂತೆ, ಹೊಸದಾಗಿ ಬೇಯಿಸಿದ ಬಾಬ್ಕಾಗಳಂತೆ, ರೈತರು ಹಟ್ಟಿಯಿಂದ ತಂದು ತಮ್ಮ ಹೊಲಗಳಿಗೆ ಚೆಲ್ಲಿದ ಗೊಬ್ಬರದಂತೆ, ವಾಸನೆಯನ್ನು ಸೂಸುತ್ತಿತ್ತು. ಮ್ಯಾಕ್ಸ್ ಪರ್ಸ್ಕಿ ಒಂದಾದ ಮೇಲೊಂದು ಸಿಗರೇಟು ಸೇದುತ್ತಿದ್ದ. ಟ್ರೇ ಸಿಗರೇಟು ಚೂರು ಮತ್ತು ಬೂದಿಯಿಂದ ತುಂಬಿಹೋಗಿತ್ತು. ಮ್ಯಾಕ್ಸ್ ಪರ್ಸ್ಕಿ ನಲವತ್ತರ ವಯಸ್ಸಿನವನಾಗಿದ್ದರೂ ಇನ್ನೂ ಯುವಕನಂತೆಯೇ ಕಾಣುತ್ತಿದ್ದ. ಕೆಲವರು ಆತನ ವಯಸ್ಸು ಐವತ್ತರ ಹತ್ತಿರವಾಗಿದೆ ಎಂದೂ ಹೇಳುತ್ತಿದ್ದರು. ಆತನಿಗೆ ಒಬ್ಬ ಹುಡುಗನ ಶರೀರವಿತ್ತು. ತಲೆ ತುಂಬಾ ಕಪ್ಪಾದ ಮಿಂಚುವ ಕೂದಲು, ಚೂರು ಕಂದು ಬಣ್ಣವಿರುವ ಮುಖ, ತುಂಬಿದ ತುಟಿಗಳು ಹಾಗೂ ಒಬ್ಬ ವಶೀಲಿಕಾರನ ಹೊರಚಾಚುವ ಕಣ್ಣುಗಳಿದ್ದುವು. ಬಾಯಿಯ ಪಕ್ಕಕ್ಕಿರುವ ಎರಡು ಗೀಟುಗಳು ಆತನಿಗೆ ವಿಧಿಯ ಅರಿವನ್ನು ಹೊಂದಿದವನ ಕಳೆಯನ್ನು ನೀಡಿದ್ದವು. ಆತನ ವೈರಿಗಳು, ಆತ ಶ್ರೀಮಂತ ಹೆಂಗಸರಿಂದ ದುಡ್ಡು ಕೀಳುತ್ತಿದ್ದ ಎಂದು ಮಾತನಾಡಿಕೊಳ್ಳುತ್ತಿದ್ದರು. ಆತನಿಗಾಗಿ ಒಬ್ಬ ಹೆಂಗಸು ಆತ್ಮಹತ್ಯೆ ಮಾಡಿಕೊಂಡಳೆಂದೂ ಹೇಳಲಾಗುತ್ತಿತ್ತು. ನಮ್ಮ ವೈಟ್ರೆಸ್, ಯುವತಿಯ ಶರೀರವಿರುವ ಮಧ್ಯವಯಸ್ಕ ಹೆಂಗಸು, ಆತನನ್ನು ದಿಟ್ಟಿಸಿ ನೋಡುತ್ತಿದ್ದಳು. ಆಗೀಗ ನನ್ನನ್ನು ನೋಡಿ, ಹೀಗೆ ನೋಡುವುದು ತನ್ನ ಕೈ ಮೀರಿದ ಕೆಲಸ, ಎಂಬಂತೆ ಕಸಿವಿಸಿಗೊಂಡು ನಗುತ್ತಿದ್ದಳು. ಆಕೆಗೆ ಪುಟ್ಟ ಮೂಗಿತ್ತು, ಸುಗ್ಗಿದ ಕೆನ್ನೆಗಳು ಹಾಗೂ ಚೂಪಾದ ಗಲ್ಲವಿತ್ತು. ಆಕೆಯ ಎಡಕೈಯಲ್ಲಿ ಮಧ್ಯದ ಬೆರಳು ಇರಲಿಲ್ಲ ಎಂದು ನಾನು ಗಮನಿಸಿದೆ. ಮ್ಯಾಕ್ಸ್ ಪರ್ಸ್ಕಿ ಇದ್ದಕ್ಕಿದ್ದಂತೆಯೇ ನನ್ನನ್ನು ಕೇಳಿದ, ''ನಿನ್ನಿಂದ ಹನ್ನೆರಡು ವರ್ಷ ದೊಡ್ಡವಳಾದ ಆ ಹೆಂಗಸಿಗೇನಾಯಿತು ? ನೀನು ಇನ್ನೂ ಆಕೆಯ ಜೊತೆಗಿದ್ದೀಯಾ ?''

ನಾನು ಆತನ ಪ್ರಶ್ನೆಗೆ ಉತ್ತರ ಕೊಡಲು ಹೊರಟೆ, ಆದರೆ ಆತ ತನ್ನ ತಲೆ ಅಲ್ಲಾಡಿಸುತ್ತಾ ಹೇಳಿದ, ''ಚಿಕ್ಕ ಹುಡುಗಿಯರು ಕೊಡಲಾಗದಂತಹದ್ದು ಏನೋ ಈ ವಯಸ್ಸಾದ ಹೆಂಗಸರಲ್ಲಿರುತ್ತದೆ. ಸ್ವತಃ ನನಗೇ ಒಬ್ಬಳಿದ್ದಳು, ನನಗಿಂತ ೧೨ ವರ್ಷ ಹಿರಿಯಳಲ್ಲ – ೩೦ ವರ್ಷ ದೊಡ್ಡವಳು. ನಾನು ಇಪ್ಪತ್ತೇಳರ ಯುವಕ, ಆಕೆ ಬಹುಶಃ ಐವತ್ತರ ಆಸುಪಾಸಿನಲ್ಲಿದ್ದಳು. ಆಕೆ ಅವಿವಾಹಿತೆಯಾಗಿದ್ದಳು. ಜರ್ಮನ್ ಸಾಹಿತ್ಯವನ್ನು ಕಲಿಸುತ್ತಿದ್ದಳು. ಆಕೆಗೆ ಹಿಬ್ರೂ ಭಾಷೆಯೂ ತಿಳಿದಿತ್ತು. ಆ ದಿನಗಳಲ್ಲಿ ವಾರ್ಸೋದ ಶ್ರೀಮಂತ ಯೆಹೂದ್ಯರು ತಮ್ಮ ಮಗಳಂದಿರು ಗೆಯೋಟೆ, ಶೀಲ್ಲರ್, ಲೆಸ್ಸಿಂಗ್‌ರನ್ನು ಓದಿರಬೇಕೆಂದು ಬಯಸುತ್ತಿದ್ದರು. ಇಲ್ಲದಿದ್ದರೆ ಅವರನ್ನು ಸುಸಂಸ್ಕೃತರೆಂದು ಪರಿಗಣಿಸುತ್ತಿರಲಿಲ್ಲ. ಚೂರುಪಾರು ಹಿಬ್ರೂ ಇದ್ದರೂ ಒಳ್ಳೆಯದೇ. ಥೆರೇಸಾ ಸ್ಟೇನ್ ಇವನ್ನು ಕಲಿಸುತ್ತಾ ಬದುಕುತ್ತಿದ್ದಳು. ನೀನು ಬಹುಶಃ ಆಕೆಯ ಬಗ್ಗೆ ಕೇಳಿರಲಿಕ್ಕಿಲ್ಲ. ಆದರೆ ನನ್ನ ದಿನಗಳಲ್ಲಿ ಆಕೆ ವಾರ್ಸೋದಲ್ಲಿ ಬಹಳ ಹೆಸರುವಾಸಿಯಾಗಿದ್ದಳು. ಆಕೆ, ಕಾವ್ಯವನ್ನು ಬಹಳ ಗಂಭೀರವಾಗಿ



# ಕ್ಲೋಪ್‌ಸ್ಟಾಕ್‌ನ ಹೇಳಿಕೆ

ಮೂಲ : ಐಸಾಕ್ ಬಾಶೆವಿಸ್ ಸಿಂಗರ್

ಅನುವಾದ : ಅಶ್ವಿನಿ ಭಟ್

ತೆಗೆದುಕೊಂಡಂತಹ ಹೆಂಗಸು, ಇದರಿಂದಲೇ ಆಕೆ ಬಹಳ ಜಾಣೆ ಅಲ್ಲವೆಂದೂ ತಿಳಿಯಬಹುದು. ಆಕೆ ಖಂಡಿತ ವಾಗಿಯೂ ಸುಂದರಿಯಾಗಿರಲಿಲ್ಲ. ನೊವೊಲಿಪ್ಕಿ ಬೀದಿ ಯಲ್ಲಿದ್ದ ಆಕೆಯ ಪುಟ್ಟ ಮನೆಯೊಳಗೆ ಹೋಗುವುದೇ ಒಂದು ಅನುಭವವಾಗಿತ್ತು. ಎಲ್ಲಾ ಕಡೆ ಬಡತನ ಎದ್ದು ಕಾಣುತ್ತಿತ್ತು. ಆದರೆ ಆಕೆ ತನ್ನ ಕೋಣೆಗಳನ್ನು ಒಬ್ಬ ವೃದ್ಧ ಕನ್ಯೆಯ ದೇಗುಲದಂತೆ ಅಚ್ಚುಕಟ್ಟಾಗಿ ಇಟ್ಟಿದ್ದಳು. ತನ್ನ ಗಳಿಕೆಯ ಅರ್ಧದಷ್ಟನ್ನು ಆಕೆ, ಹೆಚ್ಚಾಗಿ, ವೆಲ್ವೆಟ್ ಮುಖಪುಟದ ಮೇಲೆ ಚಿನ್ನದ ಕೆತ್ತನೆಯಿರುವ ಪುಸ್ತಕಗಳ ಮೇಲೆ ಖರ್ಚು ಮಾಡುತ್ತಿದ್ದಳು. ಪೇಯಿಂಟಿಂಗ್‌ಗಳನ್ನೂ ಕೊಳ್ಳುತ್ತಿದ್ದಳು. ನಾನು ಆಕೆಯನ್ನು ಭೇಟಿಯಾದಾಗ ಆಕೆ ಇನ್ನೂ ಒಬ್ಬಂಟಿಯಾಗಿಯೇ ಇದ್ದಳು. ನನಗೆ ನನ್ನ ಒಂದು ಕಥೆಗೋಸ್ಕರ ಕ್ಲೋಪ್‌ಸ್ಟಾಕ್‌ನ "ಮೆಸಾಹ"ದಿಂದ ಹೇಳಿಕೆಯೊಂದು ಬೇಕಾಗಿತ್ತು. ನಾನು ಆಕೆಗೆ ಫೋನು ಮಾಡಿದೆ. ಆಕೆ ಆ ಸಂಜೆ ತನ್ನನ್ನು ಬಂದು ಕಾಣಲು ಹೇಳಿದಳು. ನಾನು ತಲುಪಿದ ಹೊತ್ತಿಗಾಗಲೇ ಆಕೆ ನನಗೆ ಬೇಕಾದ ಹೇಳಿಕೆಯನ್ನೂ, ಇನ್ನೊಂದಷ್ಟು ವಿಷಯಗಳನ್ನೂ ಹುಡುಕಿ ಇಟ್ಟಿದ್ದಳು. ಆಗಷ್ಟೇ ಹೊರಬಂದಿದ್ದ ನನ್ನ ಮೊದಲನೇ ಪುಸ್ತಕವನ್ನು ನಾನು ಆಕೆಗಾಗಿ ತೆಗೆದುಕೊಂಡು ಹೋದೆ. ಆಕೆಗೆ ಯಿದ್ದಿಶ್ ಚೆನ್ನಾಗಿ ಬರುತ್ತಿತ್ತು. ಪೆರೆಜ್‌ನನ್ನು ಆಕೆ ಆರಾಧಿಸುತ್ತಿದ್ದಳು – ಆಕೆ ಯಾರನ್ನು ತಾನೇ ಆರಾಧಿ ಸುತ್ತಿರಲಿಲ್ಲ? ಒಬ್ಬ ಕಟ್ಟಾ ಯಹೂದ್ಯ ದೇವರ ಬಗ್ಗೆ ಮಾತನಾಡುವಂತೆ, ಕ್ರಮಬದ್ಧವಾಗಿ ಆಕೆ "ಸಾಮರ್ಥ್ಯ"ದ ಬಗ್ಗೆ ಮಾತನಾಡಿದಳು. ಆಕೆ ಪುಟ್ಟದಾಗಿ, ಉರುಟಾಗಿದ್ದಳು. ಆಕೆಗೆ ಒಳ್ಳೆಯತನವನ್ನೂ, ನಿಷ್ಕಪಟತನವನ್ನೂ ಹೊರ ಸೂಸುವ ಕಂದುಬಣ್ಣದ ಕಣ್ಣುಗಳಿದ್ದವು. ಅಂತಹ ಹೆಂಗಸರು ಈ ದಿನಗಳಲ್ಲಿ ಇಲ್ಲವೇ ಇಲ್ಲ. ನಾನು ಯುವಕನಾಗಿದ್ದುದ ರಿಂದ ಮತ್ತು ಸಿನಿಕನಂತೆ ಆಡುತ್ತಿದ್ದುದರಿಂದ ಕೂಡಲೇ ಆಕೆಗೆ ದಿಗ್ಭ್ರಮೆಯಾಗುವಂತಹ ಎಲ್ಲಾ ಕೆಲಸಗಳನ್ನು ಮಾಡಿದೆ. ಎಲ್ಲಾ ಕವಿಗಳನ್ನು ಹುಟ್ಟು ದಡ್ಡರೆಂದು ದೂರಿದೆ ಮತ್ತು ಏಕಕಾಲಕ್ಕೆ ನಾಲ್ಕು ಜನ ಹೆಂಗಸರೊಂದಿಗೆ ಸಂಬಂಧವಿಟ್ಟುಕೊಂಡಿದ್ದೇನೆಂದು ಹೇಳಿದೆ. ಕಣ್ಣೀರು ತುಂಬಿಕೊಂಡು ಆಕೆ ಹೇಳಿದಳು, "ನೀನು ಎಷ್ಟು ಸಣ್ಣ ವಯಸ್ಸಿನವನು, ಎಷ್ಟು ಪ್ರತಿಭಾವಂತ, ಆದರೆ ಈಗಲೇ ಇಷ್ಟು ದುಃಖಿ. ನಿನಗೆ ಇನ್ನೂ ನಿಜವಾದ ಪ್ರೀತಿ ಎಂದರೆ ಏನು ಎಂದು ತಿಳಿಯದು. ಹಾಗಾಗಿ ನೀನು ನಿನ್ನ ಈ ದಿವ್ಯವಾದ ಜೀವವನ್ನು ಹಿಂಸಿಸುತ್ತಿದ್ದೀಯಾ. ನಿಜವಾದ ಪ್ರೇಮ ನಿನ್ನ ಬಳಿ ಬರುತ್ತದೆ, ಆಗ ನೀನು ಸ್ವರ್ಗದ ಬಾಗಿಲನ್ನು ತೋರಿಸುವಂತಹ ನಿಧಿಯನ್ನು ಪಡೆಯುತ್ತೀಯಾ." ದಾರಿತಪ್ಪಿದ್ದ ನನಗೆ ಸಮಾಧಾನ ನೀಡಲು, ಆಕೆ ಟೀಯ ಜೊತೆಗೆ ತಾನೇ ಸ್ವತಃ ತಯಾರಿಸಿದ ಜ್ಯಾಮ್‌ಕೇಕನ್ನೂ, ಒಂದು ಗ್ಲಾಸ್ ಚೆರ್ರಿ ಬ್ರ್ಯಾಂಡಿಯನ್ನೂ ಕೊಟ್ಟಳು. ನಾನು ಅಭ್ಯಾಸಬಲದಿಂದಲೋ ಎಂಬಂತೆ, ಹೆಚ್ಚು ಕಾಯದೆ ಆಕೆಗೆ ಮುತ್ತಿಡಲು ಶುರುಮಾಡಿದೆ. ಮೊದಲ ಮುತ್ತಿಗೆ ಆಕೆಯ ಮುಖಭಾವವನ್ನು ನಾನು ಎಂದೂ ಮರೆಯಲಾರೆ. ಆಕೆಯ ಕಣ್ಣುಗಳು ವಿಚಿತ್ರವಾದ ಬೆಳಕಿನೊಂದಿಗೆ ಹೊಳೆಯಲಾರಂಭಿಸಿದವು. ನನ್ನ ಎರಡೂ ತೋಳುಗಳನ್ನು ಅವುಚಿ ಹಿಡಿದು ಹೇಳಿದಳು, "ಹೀಗೆಲ್ಲಾ ಮಾಡಬೇಡ! ನಾನು ಇಂತಹ ವಿಷಯಗಳನ್ನು ಬಹಳ ಗಂಭೀರವಾಗಿ ತೆಗೆದುಕೊಳ್ಳುತ್ತೇನೆ." ಆಕೆ ನಡುಗುತ್ತಾ, ತೊದಲುತ್ತಾ ಗೆಯೋಟೆಯನ್ನು ನೆನೆಪಿಸಲು ಪ್ರಯತ್ನಿಸಿದಳು. ಆಕೆಯ ದೇಹ ವಿಚಿತ್ರ ರೀತಿಯಲ್ಲಿ ಬಿಸಿಯಾಯಿತು. ನಿಜವಾಗಿಯಲ್ಲದಿದ್ದರೂ, ಹೆಚ್ಚು ಕಡಿಮೆ ಬಲಾತ್ಕಾರದಿಂದ ಆಕೆಯನ್ನು ಪಡೆದೆ. ರಾತ್ರಿಯನ್ನು ಆಕೆಯ ಮನೆಯಲ್ಲೇ ಕಳೆದೆ. ಆ ರಾತ್ರಿ ಆಕೆ ಹೇಳಿದ್ದೆಲ್ಲವನ್ನೂ ಯಾರಾದರೂ ಬರೆದಿಟ್ಟಿದ್ದಿದ್ದರೆ ಅದು ಅದ್ಭುತವಾದ ಪುಸ್ತಕವಾಗಬಹುದು. ಆಕೆ ನಿಜಕ್ಕೂ ನನ್ನನ್ನು ಪ್ರೀತಿಸಲು ಶುರು ಮಾಡಿದಳು – ಆಕೆಯ ಕೊನೆಯ ಉಸಿರಿನ ತನಕ ಬಾಳಿಕೊಂಡು ಬಂದ ಪ್ರೀತಿ ಅದು. ನಾನು ಇಂದಿಗೂ ಪವಿತ್ರನಾಗಿರುವುದಕ್ಕೆ ಬಹಳ ದೂರ, ಆದರೆ ಆ ದಿನಗಳಲ್ಲಿ ನನ್ನಲ್ಲಿ ಆತ್ಮಸಾಕ್ಷಿಯ ಕುರುಹೂ ಇರಲಿಲ್ಲ, ನಾನು ಎಲ್ಲವನ್ನೂ ತಮಾಷೆಯೆಂದೆ ನೋಡುತ್ತಿದ್ದೆ. ಆಕೆ ದಿನವೂ ನನಗೆ ಫೋನ್ ಮಾಡಲು ಶುರು ಮಾಡಿದಳು – ದಿನಕ್ಕೆ ಮೂರು ಸಲ – ಆದರೆ ನನಗೆ ಆಕೆಗಾಗಿ ಸಮಯವಿರಲಿಲ್ಲ, ಸುಮ್ಮನೆ ನೆವ ಹೇಳ ತೊಡಗಿದೆ. ಆದರೂ, ಆಗೀಗ, ಮಳೆಯಿರುವ ರಾತ್ರಿ ಗಳಲ್ಲಿ, ನನಗೆ ಬೇರೆ ಯಾವ ಕೆಲಸ ಇಲ್ಲದಾಗ ಆಕೆಯನ್ನು ಭೇಟಿಯಾಗುತ್ತಿದ್ದೆ. ಪ್ರತಿ ಭೇಟಿಯೂ ಆಕೆಗೆ ದೊಡ್ಡ ರಜೆಯಂತಿರುತ್ತಿತ್ತು. ಸಾಧ್ಯವಾದಲ್ಲಿ ಹಬ್ಬದ ಊಟವನ್ನೇ ತಯಾರಿಸುತ್ತಿದ್ದಳು. ನನಗಾಗಿ ಹೂಗಳನ್ನು ತರುತ್ತಿದ್ದಳು. ದುಬಾರಿ ಬಟ್ಟೆಗಳನ್ನು ಅಥವಾ ಕಿಮೋನೋಗಳನ್ನು ಉಡುತ್ತಿದ್ದಳು. ನನಗಾಗಿ ಉಡುಗೊರೆಯ ಮಳೆಯನ್ನೇ ಹರಿಸುತ್ತಿದ್ದಳು. ಆಕೆಯೊಂದಿಗೆ ಪ್ರಾಚೀನ ಜರ್ಮನ್ ಸಾಹಿತ್ಯವನ್ನು ಓದುವಂತೆ ಒತ್ತಾಯಿಸುತ್ತಿದ್ದಳು. ನಾನು ಅವನ್ನೆಲ್ಲಾ ಹರಿದು ಚೂರು ಚೂರು ಮಾಡಿದೆ ಮತ್ತು ನನ್ನೆಲ್ಲಾ ತಪ್ಪುಗಳನ್ನೂ, ನಾನು ಯೌವನದಲ್ಲಿ ಭೇಟಿ ನೀಡಿದ ಸೂಳೆ ಮನೆಯ ಬಗ್ಗೆಯೂ ಆಕೆಯಲ್ಲಿ ನಿರ್ಲಜ್ಜನಾಗಿ ಹೇಳಿಕೊಳ್ಳುತ್ತಿದ್ದೆ. ಕೆಲವು ಹೆಂಗಸರನ್ನು ಸುಲಭವಾಗಿ ಆಶ್ಚರ್ಯಗೊಳಿಸಬಹುದು, ಅದಕ್ಕಾಗಿ ನನ್ನ ಬಳಿ ಹಲವು ವಿಷಯಗಳೂ ಇರುತ್ತಿದ್ದವು. ಆಕೆ ಮೆಲುವಾಗಿ, ಸುಂದರ ಪದಗುಚ್ಛಗಳನ್ನೂ ಹೇಳಿಕೆಯನ್ನೂ ಬಳಸಿ ಮಾತನಾಡುತ್ತಿದ್ದ ಕಾರಣಕ್ಕಾಗಿಯೇ ನಾನು ಕಚ್ಚಾ ಭಾಷೆಯನ್ನು ಬಳಸುತ್ತಿದ್ದೆ. ಎಲ್ಲವನ್ನೂ ಹೆಸರು ಹಿಡಿದು ಕರೆಯುತ್ತಿದ್ದೆ. ಆಕೆ ಹೇಳುತ್ತಿದ್ದಳು, "ದೇವರು ನಿನ್ನನ್ನು ಕ್ಷಮಿಸುತ್ತಾನೆ. ಆತ ಎಷ್ಟೊಂದು ಪ್ರತಿಭೆಯನ್ನು ನಿನಗೆ ಕೊಟ್ಟಿದ್ದಾನೆ, ಆತನಿಗೆ ನೀನೆಂದರೆ ನಿಜಕ್ಕೂ ತುಂಬಾ ಪ್ರೀತಿ." ಸತ್ಯವೇನೆಂದರೆ ಆಕೆಯನ್ನು ಹಾಳುಮಾಡುವುದು ಅಸಾಧ್ಯವಾಗಿತ್ತು. ಸಾಂಕೇತಿಕವಾಗಿ ಹೇಳಲು ಹೊರಟರೆ ಆಕೆ ಕೊನೆಯ ತನಕ ಕನ್ಯೆಯಾಗಿಯೇ ಉಳಿದಳು. ಆಕೆ, ಮಾನವ ಜಗತ್ತಿನ ಬಗ್ಗೆ ಅಳಿಸಲಾಗದಂತಹ ಪ್ರೀತಿ ಮತ್ತು ಪಾವಿತ್ರ್ಯತೆಯನ್ನು ಪಡೆದಿದ್ದಳು. ಆಕೆ ಎಲ್ಲರನ್ನೂ, ಕಡೆಗೆ ಆ ಪ್ರಸಿದ್ಧ ಸಿಮಿಟಿಕ್ ವಿರೋಧಿ ಪ್ಯೂರಿಶ್‌ಕೆವಿಚ್‌ನನ್ನೂ ಸಮರ್ಥಿಸುತ್ತಿದ್ದಳು. ಆಕೆ ಹೇಳುತ್ತಿದ್ದಳು, "ಪಾಪ, ಅವನು ಭ್ರಾಂತಿಯಲ್ಲಿದ್ದಾನೆ. ಕೆಲವು ಕತ್ತಲಲ್ಲಿ ಮುಳುಗಿರುವ ಆತ್ಮಗಳಿರುತ್ತವೆ, ಏಕೆಂದರೆ ಅವಕ್ಕೆ ದಿವ್ಯ ಬೆಳಕನ್ನು ನೋಡುವ ಅವಕಾಶ ಎಂದೂ ದೊರಕಿರುವುದಿಲ್ಲ." ಆ ದಿನಗಳಲ್ಲಿ ನನಗೆ ಅರ್ಥವಾಗಲಿಲ್ಲ; ನಾನು ಒಬ್ಬ ಸನ್ಯಾಸಿನಿಯ ಜೊತೆ ಮಲಗುತ್ತಿದ್ದೆ – ಸೇಂಟ್ ಥೆರೇಸಾಳಂತೆ ಈಕೆಗೂ ಅವಳದ್ದೇ ಹೆಸರಿತ್ತು.

"ಆಕೆ ಎಷ್ಟು ನಿರ್ಮಲಳಾಗಿದ್ದಳೆಂದರೆ, ನಾನು ಒತ್ತಾಯ ಮಾಡಿದ ಕೆಲವು ವಿಷಯಗಳು ಅವಳನ್ನು ಛಿದ್ರಗೊಳಿಸಿದವು. ನನ್ನ ಬಳಿ ಆಕೆಯ ಕಣ್ಣೀರಿನಿಂದ ತೊಯ್ದ ಕಾಗದಗಳ ಒಂದು ದೊಡ್ಡ ಕಂತೆಯೇ ಇದೆ; ಸುಳ್ಳು ಕಣ್ಣೀರಲ್ಲ ನಿಜವಾದ್ದು. ಅಂತಹ ಹೆಂಗಸರಿದ್ದರು ಎಂದು ನಂಬಲಾಗದಂತಹ ಸಮಯ ಈಗ ಬರುತ್ತಾ ಇದೆ. ಹೀಗೆಯೇ ವರ್ಷಗಳು ಕಳೆದವು, ಆಕೆಗೆ ವಯಸ್ಸಾಯಿತು, ಕೂದಲು ಬೆಳ್ಳಗಾಯಿತು, ಆದರೆ ಆಕೆಯ ಮುಖ ಇನ್ನೂ ಎಳಸಾಗಿಯೇ ಉಳಿಯಿತು ಮತ್ತು ಆಕೆಯ ಕಣ್ಣುಗಳು ಇನ್ನೂ ಕಲ್ಪನಾಲೋಕದ ಮಾಯೆಯಲ್ಲಿರುವಂತೆ ಹೊಳೆಯುತ್ತಿದ್ದುವು. ಆಕೆಗಾಗಿ ನನ್ನ ಬಳಿ ಸಮಯ ವಿರಲಿಲ್ಲ. ವಾರ್ಸೋದ ಶ್ರೀಮಂತ ಯಹೂದ್ಯರು ನಿಧಾನವಾಗಿ ಜರ್ಮನ್ ಸಂಸ್ಕೃತಿಯಲ್ಲಿ ಆಸಕ್ತಿ

---

**ಐಸಾಕ್ ಬಾಲ್ಸೆವಿಷ್ ಸಿಂಗರ್ (೧೯೦೪-೧೯೯೧)**

*ಸಿಂಗರ್ ಹುಟ್ಟಿದ್ದು ಪೋಲೆಂಡ್‌ನಲ್ಲಿ. ತಂದೆ, ಬಹಳ ಧರ್ಮಶ್ರದ್ಧೆಯುಳ್ಳ ಯಹೂದ್ಯ ಧರ್ಮಗುರು; ತಾಯಿ ಧಾರ್ಮಿಕ ಹಿನ್ನೆಲೆಯ ಕುಟುಂಬದವಳಾದರೂ ಬಹಳ ವಿಚಾರವಾದಿ. ಸಿಂಗರ್ ಅರ್ಧ ಶತಮಾನ ಅಮೆರಿಕಾದಲ್ಲಿದ್ದರೂ ತನ್ನ ಕಥೆಯಲ್ಲಿ ಯಹೂದ್ಯರ ನಾಡಿಗೆ ಪದೇಪದೇ ಸಂಚರಿಸುತ್ತಿದ್ದ. ಸಾರ್ವತ್ರಿಕ ಸತ್ಯದ ಬಗ್ಗೆ, ಸರ್ವಸಾಮಾನ್ಯ ಮನುಷ್ಯರ ಜೀವನದ ಬಗ್ಗೆ ಬರೆಯುವಾಗಲೂ ಸಿಂಗರ್‌ನ ಉದ್ರೇಕದ ಕಥನಕ್ರಮದ ಬಿಳಲು ಹೋಗಿ ಸೇರುವುದು ಪೋಲಿಶ್-ಯಿದ್ದಿಶ್‌ನ ಸಾಂಸ್ಕೃತಿಕ ಬೇರನ್ನೇ. ಅವನು ಬರೆಯಲು ಶುರುಮಾಡಿದ್ದು ಮಹಾಯುದ್ಧಗಳ ನಡುವಿನ ವರ್ಷಗಳಲ್ಲಿ, ಅದು ಕೂಡ ವಾರ್ಸೋದಲ್ಲಿ ಪತ್ರಕರ್ತನಾಗಿ. ಮೂಲತಃ ಯಿದ್ದಿಶ್‌ನಲ್ಲಿ ಬರೆದರೂ ಆತನ ಕಥೆಗಳು ಇಂಗ್ಲೀಷಿನಲ್ಲೇ ಹೆಚ್ಚು ಜನಪ್ರಿಯ – ಮತ್ತು ಹೆಚ್ಚಿನ ಅನುವಾದಗಳನ್ನು ಸಿಂಗರ್ ಸ್ವತಃ ತಾನೇ ಅನುವಾದಕರ ಜೊತೆ ಕೂತು ಬರೆಯುತ್ತಿದ್ದ. 'ಕ್ಲೋಪ್‌ಸ್ಟಾಕ್‌ನ ಹೇಳಿಕೆ' ಸಿಂಗರ್‌ನ* Crown of Feathers *ನಿಂದ ಆರಿಸಲ್ಪಟ್ಟ ಕಥೆ.*

*೧೯೭೮ರಲ್ಲಿ ಸಿಂಗರ್‌ಗೆ ನೊಬೆಲ್ ಪ್ರಶಸ್ತಿ ದೊರಕಿತು.*

ಕಳಕೊಂಡರು, ಥೆರೇಸಾಳ ದುಡಿಮೆ ದಿನೇ ದಿನೇ ಕಡಿಮೆಯಾಯಿತು. ನನಗೆ ನಮ್ಮ ಸಂಬಂಧವನ್ನು ಸಂಪೂರ್ಣವಾಗಿ ಕಡಿಯಲೂ ಸಾಧ್ಯವಾಗಲಿಲ್ಲ. ಎಲ್ಲವೂ ತಲೆಕೆಳಗಾದರೆ, ಎಲ್ಲರೂ ನನ್ನಿಂದ ದೂರವಾದರೆ, ನಾನು ಯಾವತ್ತೂ ಥೆರೇಸಾಳ ಮೇಲೆ ಆಕೆ ನನ್ನ ಅಮ್ಮನೆಂದು, ಹೆಂಡತಿಯೆಂದು, ನನ್ನ ರಕ್ಷಕಿಯೆಂದು ನೆನಸಿ ಅವಲಂಬಿತನಾಗಬಹುದು ಎಂಬ ಭಾವನೆ ಯಾವತ್ತೂ ನನ್ನಲ್ಲಿ ದೃಢವಾಗಿತ್ತು. ಆಕೆಗೆ ಆ ತರಹದ ತಾಳ್ಮೆಯ ಗುಣವಿತ್ತು. ನಾನು ಏನನ್ನೂ ಮಾಡಬಹುದಾಗಿತ್ತು. ಯಾವತ್ತೂ ನನ್ನನ್ನು ನಾನೇ ರಕ್ಷಿಸಿಕೊಳ್ಳಬೇಕಾಗಿರಲಿಲ್ಲ. ನನ್ನ ಪರಿಸ್ಥಿತಿಯಲ್ಲಿ ಯಾರಾದರೂ ಮಹಾ ಸುಳ್ಳುಗಾರನಾಗಿರಬೇಕಿತ್ತು, ಆದರೆ ಥೆರೇಸಾಗೆ ನಾನು ಸತ್ಯವನ್ನೇ ಹೇಳಬಹುದಿತ್ತು, ಅದು ಎಷ್ಟೇ ಭೀಕರವಾಗಿದ್ದರೂ ಕೂಡ. ಆಕೆಯ ಬಳಿ ಯಾವತ್ತೂ ಒಂದೇ ಉತ್ತರವಿರುತ್ತಿತ್ತು, 'ನೀನೊಬ್ಬ ಪಾಪದ ಹುಡುಗ ! ಉತ್ತಮ ಕಲಾವಿದ !'.

''ವರ್ಷಗಳು ತಮ್ಮ ಪಾಡಿಗೆ ತಾವು ಕೆಲಸ ಮಾಡಿದವು. ಥೆರೇಸಾ ಗೂನುಬೆನ್ನಿನವಳಾಗಿ, ಸುಕ್ಕುಗಟ್ಟಿದ್ದಳು. ಜೊತೆಗೆ ವಾತದ ತೊಂದರೆಯೂ ಇತ್ತು. ಆಕೆ ಬೆತ್ತದ ಕುರ್ಚಿಯೊಂದರಲ್ಲಿ ಒರಗಬೇಕಾಗಿ ಬಂದಿತ್ತು. ನಾನು ತೋರಿಸಿದ ಅನುಕಂಪಕ್ಕಾಗಿ, ಅದನ್ನು ಹಾಗೆಂದು ಕರೆಯಬಹುದೆಂದಿದ್ದರೆ, ನನಗೆ ನಾಚಿಕೆಯಾಗುತ್ತದೆ. ಆದರೆ ಆಕೆಯನ್ನು ಸಂಪೂರ್ಣವಾಗಿ ಬಿಡುವುದೆಂದರೆ ಕೊಂದಂತೆಯೇ ಎಂದು ನನಗೆ ತಿಳಿದಿತ್ತು. ಆಕೆ ತನ್ನೆಲ್ಲಾ ಶಕ್ತಿಯೊಂದಿಗೆ ನನಗೆ ಅಂಟಿಕೊಂಡಿದ್ದಳು. ರಾತ್ರಿ ಹಾಸಿಗೆಯಲ್ಲಿ ಪುನಃ ಯುವತಿಯಾಗುತ್ತಿದ್ದಳು. ಕೆಲವೊಮ್ಮೆ ಕತ್ತಲಲ್ಲಿ ಆಕೆ ಹೇಳುತ್ತಿದ್ದ ಮಾತುಗಳೂ ನನ್ನನ್ನು ದಿಗ್ಭ್ರಮೆಗೀಡುಮಾಡುತ್ತಿದ್ದವು. ಉಳಿದ ವಿಷಯಗಳೊಂದಿಗೆ, ಆಕೆ ಸಾಧ್ಯವಿದ್ದಲ್ಲಿ ತನ್ನ ಸಾವಿನ ನಂತರ ನನ್ನ ಎದುರು ಕಾಣಿಸಿಕೊಳ್ಳುತ್ತೇನೆಂದು ಮಾತು ಕೊಟ್ಟಿದ್ದಳು. ನಿನ್ನನ್ನು ನಿರಾಶೆಗೀಡುಮಾಡಲು ಬಯಸುವುದಿಲ್ಲ, ಹಾಗಾಗಿ ಮುಂಚಿತವಾಗಿಯೇ ಹೇಳುತ್ತಿದ್ದೇನೆ – ಆಕೆ ತನ್ನ ಮಾತನ್ನು ಉಳಿಸಿಕೊಳ್ಳಲಿಲ್ಲ. ಆದರೆ ನನ್ನ ಕಥೆ ಈಗಷ್ಟೇ ಶುರುವಾಗುತ್ತಿದೆ.''

ಮ್ಯಾಕ್ಸ್ ಪರ್ಸ್ಕಿ ವೈಟ್ರೆಸ್‌ಗೆ ಸನ್ನೆ ಮಾಡಿದ; ಆಕೆ ಒಮ್ಮೆಗೇ, ಆ ಕರೆಗಾಗಿ ಅಸಹನೆಯಿಂದ ಕಾಯುತ್ತಿದ್ದವಳಂತೆ, ಬೇಗ ಬಂದಳು. ಆತ ಆಕೆಯ ಬಳಿ ಮುದ್ದಾದ ಆಪ್ತತೆಯಿಂದ ಮಾತನಾಡಿದ, ''ಪನ್ನಾ ಹೆಲೇನಾ, ನನಗೆ ಹಸಿವಾಗುತ್ತಿದೆ.''

''ಓ ದೇವರೇ, ಇವತ್ತು ಇಲ್ಲಿ ನಿನಗಿಷ್ಟವಾದದ್ದೇ ಇದೆ – ಟೊಮೊಟೋ ಸೂಪ್.''

''ನೀನೇನು ತೆಗೆದುಕೊಳ್ಳುತ್ತೀ ?'' ಆತ ನನ್ನನ್ನು ಕೇಳಿದ.

''ನನಗೂ ಟೊಮೊಟೋ ಸೂಪ್.''

''ಪನ್ನಾ ಹೆಲೇನಾ, ಎರಡು ಸೂಪ್.'' ಆತ ಆಕೆಯನ್ನು ನೋಡಿ ಕಣ್ಣು ಹೊಡೆದ. ಥೆರೇಸಾ ಸ್ಟೇನ್ ಜೊತೆಗಿದ್ದಂತಹ ಗುಟ್ಟಾದ ಸಂಬಂಧ ಈತನಿಗೆ ಆಕೆಯ ಜೊತೆಗೂ ಇದೆ ಎಂದು ನನಗೆ ಕೂಡಲೇ ತಿಳಿಯಿತು. ಮ್ಯಾಕ್ಸ್ ಪರ್ಸ್ಕಿ ತನ್ನದೇ ಆದ ರೀತಿಯಲ್ಲಿ ದಯಾಪರನಾಗಿದ್ದ – ಹಣದ ವಿಷಯದಲ್ಲಲ್ಲ, ಪ್ರೀತಿಯ ವಿಷಯದಲ್ಲಿ.

ಸೂಪ್ ಕುಡಿದಾದ ಮೇಲೆ ಮ್ಯಾಕ್ಸ್ ಪರ್ಸ್ಕಿ ಒಂದು ಸಿಗರೇಟ್ ಉರಿಸಿ, ಕೇಳಿದ, ''ನಾನು ಎಲ್ಲಿ ನಿಲ್ಲಿಸಿದ್ದೆ ? ಹೌದು, ಆಕೆಗೆ ವಯಸ್ಸಾಯಿತು. ಆಕೆ ತನ್ನ ಮನೆಯನ್ನು ಬಿಟ್ಟು ಉಳಿದ ಜನರೊಂದಿಗೆ ಬಾಡಿಗೆ ಮನೆಯಲ್ಲಿ ಇರಬೇಕಾಯ್ತು. ಅದು ನಿಜಕ್ಕೂ ಒಂದು ದುರಂತ, ಆದರೆ ನನ್ನಿಂದ ಆಕೆಗೆ ಸಹಾಯ ನೀಡಲು ಸಾಧ್ಯವಿರಲಿಲ್ಲ. ನಿನಗೆ ಗೊತ್ತೇ, ನನ್ನ ಬಳಿ ಒಂದು ಪೆನ್ನಿಯೂ ಇರಲಿಲ್ಲ. ಸಾಮಾನು ಕಟ್ಟಲಾಗಲೀ, ಸಾಗಿಸಲಿಕ್ಕಾಗಲೀ ನನಗೆ ಸಹಾಯ ಮಾಡಲಾಗಲಿಲ್ಲ. ಏಕೆಂದರೆ ಥೆರೇಸಾ ಸ್ಟೇನ್‌ನ ಪ್ರಸಿದ್ಧಿಗೆ ಚೂರೂ ಕಳಂಕದ ಗುರುತಿರಲಿಲ್ಲ. ಗಾಳಿಮಾತು, ಖಂಡಿತಾ ಆಕೆಯ ಕೊನೆಯ ಪಾಠಕ್ಕೆ ತೊಂದರೆಯುಂಟು ಮಾಡುತ್ತಿತ್ತು. ಸತ್ಯವೇನೆಂದರೆ, ಥೆರೇಸಾ ನಿಜವಾಗಿಯೂ ಮಾಡಿದ್ದನ್ನು ಆಕೆಗೆ ಮಾಡಲು ಸಾಧ್ಯ ಎಂದು ಹೇಳಿದರೆ ಯಾರೂ ನಂಬುತ್ತಿರಲಿಲ್ಲ. ವಯಸ್ಸಾದಂತೆ ಈ ಪಾಪಪ್ರಜ್ಞೆಯೂ ಅವಳಲ್ಲಿ ಹೆಚ್ಚಾಯಿತು. ಆಕೆಗೆ ಸ್ವಂತ ಮನೆಯಿದ್ದುದರಿಂದ ನಮ್ಮ ಗುಟ್ಟನ್ನು ಮುಚ್ಚಿಡುವುದು ಕಷ್ಟವಿರಲಿಲ್ಲ. ನಾನು ಯಾವತ್ತೂ ಸಂಜೆಯಾಗುತ್ತಿದ್ದಂತೆಯೇ ಆಕೆಯ ಬಳಿ ಹೋಗುತ್ತಿದ್ದೆ, ಆಕೆಯ ವಿದ್ಯಾರ್ಥಿಯಂತೆ ನಟಿಸಲು ಯಾವತ್ತೂ ಒಂದು ಪುಸ್ತಕವನ್ನು ತೆಗೆದುಕೊಂಡು ಹೋಗಲು ಮರೆಯುತ್ತಿರಲಿಲ್ಲ. ನೆರೆಹೊರೆಯವರು ನನ್ನನ್ನು ನೋಡಿದರೂ ಕೂಡ, ನಾನು ಥೆರೇಸಾಳ ಪ್ರೇಮಿ ಎಂದು ಸಂಶಯ ಬರಲು ಸಾಧ್ಯವಿರಲಿಲ್ಲ. ಆದರೆ ಆಕೆ ಉಳಿದ ಜನರೊಂದಿಗೆ ಇರಲು ಶುರು ಮಾಡಿದ ಮೇಲೆ ಆಕೆಯನ್ನು ಭೇಟಿಯಾಗುವುದು ಕಷ್ಟವಾಗಿತ್ತು. ಇದೇ ನಮ್ಮ ಸಂಬಂಧದ ಕೊನೆಯಾಗಬೇಕಿತ್ತು. ಆದರೆ ಥೆರೇಸಾಳಂತಹ ಹೆಂಗಸರ ಜೊತೆ ಕೊನೆಯೆಂಬುದು ಪ್ರಾರಂಭದಷ್ಟೇ ಕಷ್ಟ. ಆಕೆ ಮತ್ತೂ ನನ್ನನ್ನು ಕರೆಯುತ್ತಿದ್ದಳು, ಉದ್ದನೇ ಪತ್ರಗಳನ್ನು ಬರೆಯುತ್ತಿದ್ದಳು. ನಾವು ಯಹೂದ್ಯರಿಲ್ಲದ ರಸ್ತೆಗಳಲ್ಲಿರುವ ದೂರದ ಕೆಫೆಗಳಲ್ಲಿ ಭೇಟಿಯಾಗಲು ಶುರುಮಾಡಿದೆವು. ಪ್ರತೀ ಸಾರಿ ಸಿಕ್ಕಾಗಲೂ ಆಕೆ ನನಗಾಗಿ ಏನಾದರೊಂದು ಉಡುಗೊರೆ ತರುತ್ತಿದ್ದಳು – ಪುಸ್ತಕ, ಟೈ, ಸಾಕ್ಸ್ ಅಥವಾ ಕೈವಸ್ತ್ರಗಳು ಕೂಡ.

ಈ ಸಮಯದಲ್ಲಿ ನನಗೆ ಬೈಲಾದ ಪಾದ್ರಿಯ ಸೋದರ ಸೊಸೆ, ನೀನಾ ಎಂಬ ಹುಡುಗಿಯ ಜೊತೆ ಸಂಬಂಧವಿತ್ತು. ಈ ನೀನಾ ಬಗ್ಗೆ ನಿನಗೆ ಬಹುಶಃ ಮುಂಚೆಯೇ ಹೇಳಿದ್ದೆ. ಆಕೆ ಪಾದ್ರಿಯ ಜಾಗದಿಂದ ಓಡಿಹೋಗಿ ವಾರ್ಸೋದಲ್ಲಿ ಪೈಂಟರ್ ಆಗಲು ಪ್ರಯತ್ನಿಸುತ್ತಿದ್ದಳು. ತನಗೆ ದುಡ್ಡು ಕಳುಹಿಸಲು ನಿರಾಕರಿಸಿದರೆ ಮತಾಂತರ ಮಾಡಿಕೊಳ್ಳುತ್ತೇನೆಂದು ಆಕೆ ತನ್ನ ಅಂಕಲ್ ಪಾದ್ರಿಯನ್ನು ಹೆದರಿಸುತ್ತಲೇ ಇದ್ದಳು. ಆಕೆಗೆ ಅರೆಹುಚ್ಚು. ಜನಪ್ರಿಯ ಕಾದಂಬರಿಗಳು ಕರೆಯುವಂತೆ, ಬಿರುಗಾಳಿಯಂತಹ ಪ್ರೀತಿ ನಮ್ಮದು. ಆಕೆ ಹೊಟ್ಟೆಕಿಚ್ಚಿನಿಂದ ಉರಿಯುತ್ತಿದ್ದಳು. ಯಾವತ್ತೂ ಅತ್ಯಂತ ಮುಗ್ಧರಾದ ಹೆಂಗಸರ ಬಗ್ಗೆ ಸಂಶಯಪಡುತ್ತಿದ್ದಳು. ಹಲವು ವಾರಗಳಿಗೊಮ್ಮೆ ಆತ್ಮಹತ್ಯೆಗೆ ಯತ್ನಿಸುತ್ತಿದ್ದಳು. ಅಂದಿನ ತನಕ ನಾನು ಯಾವ ಹೆಂಗಸನ್ನೂ ಹೊಡೆದಿರಲಿಲ್ಲ. ಆದರೆ ನೀನಾಳ ಉದ್ರೇಕ ಬರೀ ಹೊಡೆತದಿಂದ ಸರಿಹೋಗುವ ಜಾತಿಯದ್ದಾಗಿತ್ತು, ಅದನ್ನು ಆಕೆಯೇ ಒಪ್ಪುತ್ತಿದ್ದಳು. ಆಕೆ ಕೂದಲು ಕಿತ್ತು, ಅತ್ತು, ನಕ್ಕು, ಕಿಟಕಿಯಿಂದ ಹೊರಗೆ ಹಾರಲು ಹೊರಟು ತನ್ನ ಒರಟು ಚೇಷ್ಟೆಗಳನ್ನು ಶುರುಮಾಡಿದಾಗ ಆಕೆಯ ಮುಖದ ಮೇಲೆ ಒಂದೆರಡು ಕೆಂಡದಂತಹ ಹೊಡೆತ ಕೊಡದೆ ಬೇರೆ ಯಾವ ದಾರಿಯೂ ಇರುತ್ತಿರಲಿಲ್ಲ. ಆ ಪೆಟ್ಟು, ಜಾದೂ ತರಹ ಕೆಲಸ ಮಾಡುತ್ತಿತ್ತು. ಅನಂತರ ಹೆಚ್ಚಾಗಿ ಆಕೆ ಮುತ್ತಿಡಲು ಶುರುಮಾಡುತ್ತಿದ್ದಳು. ಆ ಹೊತ್ತಿಗಾಗಲೇ ನಾನು ನನ್ನ ಹೆಂಗಸರನ್ನು ನಿಭಾಯಿಸಲು ಕಲಿತಿದ್ದೆ. ಆದರೆ ನೀನಾ ತನ್ನ ಹೊಟ್ಟೆಕಿಚ್ಚಿನ ಗುಣದಿಂದ ನನ್ನನ್ನು ಪೀಡಿಸುತ್ತಿದ್ದಳು. ಎಲ್ಲಾದರೂ ನನ್ನನ್ನು ಬೇರೊಂದು ಹೆಂಗಸಿನ ಜೊತೆ ಹಿಡಿದರೆ ಆಕೆಯ ಕೂದಲನ್ನು ಎಳೆದು ಕಿತ್ತುಹಾಕುತ್ತಿದ್ದಳು. ನನ್ನ ಎಲ್ಲಾ ಹುಡುಗಿಯರನ್ನೂ ಆಕೆ ಓಡಿಸಿಬಿಟ್ಟಳು. ನಾನು ಎಷ್ಟು ಹತಾಶನಾಗಿದ್ದೆನೆಂದರೆ, ಒಂದು ನಾಟಕ ಬರೆಯಲು ಶುರು ಮಾಡಿದೆ – ಅದನ್ನು ಅನಂತರ ಸೆಂಟ್ರಲ್ ಥಿಯೇಟರ್‌ನಲ್ಲಿ ಹಾಳುಮಾಡಿ ಹಾಕಿದರು.

''ಚಳಿಗಾಲದ ಒಂದು ರಾತ್ರಿ, ನೀನಾ ಬೈಲಾಕ್ಕೆ ತನ್ನ ಅಂಕಲ್ ಅನ್ನು ನೋಡಲು ಹೋಗಬೇಕಾಗಿ ಬಂತು. ಆಕೆ ಎಲ್ಲಾದರೂ ಹೋಗಬೇಕಾಗಿ ಬಂದಾಗ ನನಗೆ ಬರೀ ಕೊನೆ ಗಳಿಗೆಯಲ್ಲಿ ತಿಳಿಸುತ್ತಿದ್ದಳು – ನಾನು ಬೇರೆ ಏನೂ ಕೆಲಸ ಇಟ್ಟುಕೊಳ್ಳದ ಹಾಗೆ. ಹುಚ್ಚರು ಹೆಚ್ಚಾಗಿ ಬಹಳ ಠಕ್ಕರಾಗಿರುತ್ತಾರೆ. ಅಂದು ಸಂಜೆ ಆಕೆ ಹೊರಡುತ್ತಿದ್ದೇನೆಂದು ಹೇಳಿದಾಗ,



ನನ್ನಿಂದ ಮೋಸ ಹೋದವರಿಗೆಲ್ಲಾ ಫೋನು ಮಾಡಲು ಶುರು ಮಾಡಿದೆ. ಆಗ ಎಲ್ಲಾ ಕಡೆ ಫ್ಲೂ ಜ್ವರ ಹಬ್ಬಿತ್ತು, ನಾನು ಫೋನು ಮಾಡಿದವರು ಕೆಲವರು ಮನೆಯಲ್ಲಿರಲಿಲ್ಲ ಇನ್ನು ಕೆಲವರು ಜ್ವರ ಬಂದು ಮಲಗಿದ್ದರು. ನಾನು ಹಲವು ವಾರ, ತಿಂಗಳುಗಳಿಂದ ಥೆರೇಸಾಳನ್ನು ನೋಡುತ್ತೇನೆಂದು ಹೇಳುತ್ತಿದ್ದುದರಿಂದ, ಇದೇ ಸರಿಯಾದ ಸಮಯ ಎಂದು ನನಗೆ ಹೊಳೆಯಿತು. ನಾನು ಆಕೆಗೆ ಫೋನು ಮಾಡಿ ರಾತ್ರಿ ಊಟಕ್ಕಾಗಿ ಕರೆದೆ. ಅನಂತರ ಆಕೆಯನ್ನು ನನ್ನ ಮನೆಗೆ ಕರೆದುಕೊಂಡು ಹೋದೆ. ನಾವು ಹಲವು ವರ್ಷಗಳಿಂದ ಪ್ರೇಮಿಗಳಾಗಿದ್ದರೂ, ಪ್ರತೀ ಸಲವೂ ಆಕೆ ಹೆದರಿದ ಕನ್ಯೆಯಂತೆ ವರ್ತಿಸುತ್ತಿದ್ದಳು. ರಾತ್ರಿ ಮಲಗಲು ಬರುವುದಿಲ್ಲವೆಂದು ಮನೆಯ ಒಡೆಯನಿಗೆ ಆಕೆ ಏನಾದರೊಂದು ಕಾರಣ ಕೊಡಬೇಕಾಗಿತ್ತು. ಆಕೆ ಎಷ್ಟೊಂದು ಹೆದರಿ, ನಿಟ್ಟುಸಿರು ಬಿಟ್ಟು, ತೊದಲಿದಳೆಂದರೆ ನಾನು ಈ ಎಲ್ಲಾ ವಿಷಯಗಳಿಗಾಗಿ ಪಶ್ಚಾತ್ತಾಪ ಪಡಬೇಕಾಯ್ತು. ಆಕೆ ಹೇಳುವಂತಹ ಆಹಾರ ಪ್ರಿಯಳಾಗಿರಲಿಲ್ಲ, ಆದರೆ ಆ ಸಂಜೆಯಂತೂ ಆಕೆ ಒಂದು ತುತ್ತನ್ನೂ ನುಂಗಲಿಲ್ಲ. ಟೇಬಲ್‌ನಲ್ಲಿ ನನ್ನ ಎದುರು ಒಬ್ಬ ಬಳಲಿದ ಮುದುಕಿ ಕುಳಿತಿದ್ದಳು. ವೈಟರ್ ಆಕೆಯನ್ನು ನನ್ನ ತಾಯಿಯೆಂದು ತಿಳಿದು ಕೇಳಿದ, ''ನಿಮ್ಮ ಅಮ್ಮ ಯಾಕೆ ಏನೂ ತಿನ್ನುತ್ತಿಲ್ಲ?'' ನನಗೆ ಆಭಾಸವೆನಿಸಿತು. ರಾತ್ರಿ ಊಟದ ನಂತರ ಆಕೆ ಮನೆಗೆ ಹೋಗಬಯಸಿದಳು. ಆದರೆ ಅದಕ್ಕೆ ನಾನು ಒಪ್ಪಿದ್ದರೆ ಆಕೆ ತೀವ್ರವಾಗಿ ನಿರಾಶೆಗೊಳ್ಳುತ್ತಿದ್ದಳು ಎಂದು ನನಗೆ ತಿಳಿದಿತ್ತು. ಆಕೆಯ ಬ್ಯಾಗಿನಲ್ಲಿ ಒಂದು ಜೊತೆ ರಾತ್ರಿಯ ಉಡುಪು ಇದ್ದದ್ದು ನಾನು ನೋಡಿದ್ದೆ. ಚುಟುಕಾಗಿ ಹೇಳುವುದಾದರೆ, ಆಕೆಯನ್ನು ನನ್ನ ಮನೆಗೆ ಬರುವಂತೆ ನಾನು ಒತ್ತಾಯಿಸಿದೆ. ಒಬ್ಬ ಯುವತಿ ಹಟಮಾಡಿದಾಗಲೇ ಅದು ಸಾಕಷ್ಟು ಹೊಲಸಾಗಿರುತ್ತದೆ. ಅದರಲ್ಲೂ ಒಬ್ಬ ಮುದುಕಿ ಹೆದರಿದ ಕನ್ಯೆಯ ಥರಾ ವರ್ತಿಸಿದರೆ ಅದು ಒಂದು ರೀತಿಯ ದುರಂತ ಹಾಗೂ ತಮಾಷೆ ಕೂಡ. ನಾವು ಮೂರು ಮಾಳಿಗೆ ಮೆಟ್ಟಲು ಹತ್ತಿದೆವು. ಕೆಲವು ಸಲ ಆಕೆ ವಿರಾಮ ಬೇಕೆಂದು ಕುಳಿತಳು. ನನಗಾಗಿ ಒಂದು ಜೊತೆ ಉಣ್ಣೆಯ ಒಳ ಉಡುಪನ್ನೂ ಉಡುಗೊರೆಯಾಗಿ ತಂದಿದ್ದಳು. ನಾನು ಟೀ ಮಾಡಿದೆ. ಒಂದು ಗ್ಲಾಸ್ ಕೋನಿಯಾಕ್ ಕೊಟ್ಟು ಆಕೆಯನ್ನು ಖುಷಿಗೊಳಿಸಲು ಪ್ರಯತ್ನಿಸಿದೆ. ಆದರೆ ಆಕೆ ಕುಡಿಯಲು ನಿರಾಕರಿಸಿದಳು. ಫಾಸ್ಟ್ ಮತ್ತು ಹೇನೆಯ 'ಬಕ್ ಡೆರ್ ಲೇಡರ್'ನಿಂದ ಬಹಳಷ್ಟು ಹೇಳಿಕೆಗಳಾದ ಮೇಲೆ, ಸಾಕಷ್ಟು ನೆಪಗಳನ್ನು ಕೊಟ್ಟ ಮೇಲೆ, ಹಿಂಜರಿಯುತ್ತಾ ಆಕೆ ನನ್ನ ಜೊತೆ ಮಲಗಲು ಬಂದಳು. ಆಕೆಯ ಬಗ್ಗೆ ನನಗೆ ಸ್ವಲ್ಪ ಕೂಡ ಆಸೆ ಉಳಿದಿರಲಿಕ್ಕಿಲ್ಲವೆಂದು ತಿಳಿದಿದ್ದೆ, ಆದರೆ ಈ ಕಾಮವೆಂಬುದು ಬರೀ ಚಪಲ. ಸ್ವಲ್ಪ ಹೊತ್ತಿನ ನಂತರ ನಾವಿಬ್ಬರೂ ನಿದ್ದೆ ಹೋದೆವು. ಆ ಹೊತ್ತಿಗಾಗಲೇ ನಾನು ಈ ರಾತ್ರಿಯೇ ನಮ್ಮ ಸಂಕಟದ ಸಂಬಂಧದ ಕೊನೆ ಎಂದು ನಿರ್ಧರಿಸಿದ್ದೆ. ಆಕೆಯೂ ಕೂಡ, ಇನ್ನು ಮುಂದೆ ನಾವು ನಮ್ಮನ್ನೇ ಮೂರ್ಖಗೊಳಿಸಬಾರದೆಂದು ಸೂಚನೆ ಕೊಟ್ಟಿದ್ದಳು.

''ನನಗೆ ಸುಸ್ತಾಗಿತ್ತು, ಚೆನ್ನಾಗಿ ನಿದ್ದೆ ಮಾಡಿದೆ. ಯಾವುದೋ ಅಹಿತವಾದ ಭಾವನೆಯೊಂದಿಗೆ ನನಗೆ ಎಚ್ಚರವಾಯಿತು. ಮೊದಲಿಗೆ, ಯಾರ ಜೊತೆ ಹಾಸಿಗೆಯಲ್ಲಿದ್ದೆ ಎಂಬುದೇ ನನಗೆ ಮರೆತುಹೋಗಿತ್ತು. ಒಂದು ಕ್ಷಣ, ಅದು ನೀನಾ ಎಂದುಕೊಂಡೆ. ನಾನು ಕೈಚಾಚಿ ಆಕೆಯನ್ನು ಮುಟ್ಟಿದೆ. ಆ ಕ್ಷಣ ನನಗೆ ಸತ್ಯ ತಿಳಿಯಿತು : ಥೆರೇಸಾ ಸತ್ತಿದ್ದಳು. ಇಂದಿನ ತನಕವೂ ನನಗೆ, ಆಕೆ ಹುಷಾರು ತಪ್ಪಿ ನನ್ನನ್ನು ಎಬ್ಬಿಸಲು ಪ್ರಯತ್ನಿಸಿದಳೇ ಅಥವಾ ಸುಮ್ಮನೇ ನಿದ್ದೆಯಲ್ಲೇ ಸತ್ತಳೇ, ಎಂದು ತಿಳಿದಿಲ್ಲ. ನಾನು ಎಷ್ಟೋ ದುರಂತಗಳನ್ನು ಅನುಭವಿಸಿದ್ದೇನೆ. ಆದರೆ ಆ ರಾತ್ರಿಯ ಅನುಭವ ಮಾತ್ರ ಭಯಂಕರ. ನನಗೆ ಬಂದ ಮೊದಲ ಯೋಚನೆಯೆಂದರೆ ಆಂಬುಲೆನ್ಸ್‌ನ್ನು ಕರೆಯುವುದು. ಆದರೆ ಇಡೀ ವಾರ್ಸೋಕ್ಕೆ ಕೂಡಲೆ ಥೆರೇಸಾ ಸ್ಟೇನ್ ಮ್ಯಾಕ್ಸ್ ಪರ್ಸ್ಕಿಯ ಹಾಸಿಗೆಯಲ್ಲಿ ಸತ್ತುಹೋಗಿದ್ದಾಳೆ ಎಂದು ತಿಳಿಯುತ್ತಿತ್ತು. ಕ್ರೋಚ್‌ಮಾಲಾದ ರಸ್ತೆಯ ಮಾಳಿಗೆಯಿಂದ ಪೋಪ್ ಏನನ್ನೋ ಕದಿಯುತ್ತಾ ಸಿಕ್ಕಿಬಿದ್ದಿದ್ದರೂ ಅದು ಇಷ್ಟೊಂದು ಕೋಲಾಹಲ ಉಂಟುಮಾಡುತ್ತಿರಲಿಲ್ಲ. ಮನುಷ್ಯ ಅಪಹಾಸ್ಯಕ್ಕೆ ಹೆದರುವಷ್ಟು ಯಾವುದಕ್ಕೂ ಹೆದರುವುದಿಲ್ಲ. ಅರ್ಧಕ್ಕರ್ಧ ವಾರ್ಸೋ ನನಗೆ ಶಾಪ ಹಾಕುತ್ತಿತ್ತು, ಉಳಿದರ್ಧ ಗೇಲಿ ಮಾಡುತ್ತಿತ್ತು. ದೀಪ ಉರಿಸಿ ಆಕೆಯ ಮುಖವನ್ನು ನೋಡಿದಾಗ ನಾನು ಭಯದಿಂದ ಮರಗಟ್ಟಿಹೋದೆ. ಆಕೆ ಅರುವತ್ತಲ್ಲ, ತೊಂಬತ್ತು ವಯಸ್ಸಿನವಳಂತೆ ಕಂಡಳು. ನಾನು ಯಾರಿಗೂ, ಯಾವತ್ತೂ ನನಗೇನಾಗಿದೆ ಎಂದು ತಿಳಿಯದಂತೆ ಜಗತ್ತಿನ ಮೂಲೆಗೆ ಓಡಲು ಬಯಸಿದ್ದೆ. ಆದರೆ ಎಲ್ಲಾ ದುಡ್ಡನ್ನೂ ನಾನು ಹೋಟೆಲಿನಲ್ಲಿ ಖರ್ಚು ಮಾಡಿದ್ದೆ. ನನ್ನ ಜೊತೆ ಮನೆಗೆ ಬಂದಿದ್ದು ಹಾಗೂ ಅಷ್ಟೊಂದು ಮೆಟ್ಟಲು ಹತ್ತಿದ್ದೇ ಆಕೆಯನ್ನು ಕೊಂದಿತ್ತು ಎಂದು ನನಗೆ ಅರ್ಥವಾಯಿತು. ನಿಜಕ್ಕೂ ನಾನು ಕರುಣೆಯ ಕಾರಣದಿಂದ ಒಂದು ಕೊಲೆ ಮಾಡಿದ್ದೆ.

''ನಾನು ಎಲ್ಲಾ ದೀಪಗಳನ್ನು ಉರಿಸಿ, ಹೆಣವನ್ನು ಒಂದು ಹೊದಿಕೆಯಿಂದ ಮುಚ್ಚಿ, ನನ್ನ ಹೆಡ್ಡತನದ ಜೀವನವನ್ನು ಮುಗಿಸಲು ಒಂದು ದಾರಿ ಹುಡುಕಲು ಶುರು ಮಾಡಿದೆ. ಆಕೆಯ ಬಳಿಯೇ ಸಾಯುವುದೆಂದರೆ ಎರಡು ಆತ್ಮಹತ್ಯೆ ಎಂಬ ಅರ್ಥ ಬರಬಹುದು; ಒಬ್ಬ ಸತ್ತು ಹೋದ ಮೇಲೂ ಜನ ಏನು ಯೋಚಿಸುತ್ತಾರೋ, ಹೇಳುತ್ತಾರೋ ಎಂದು ನೆನೆಸಿ ನಾಚಿಕೆ ಪಡುತ್ತಾನೆ. ಸಾವಿಗಿಂತ ಪ್ರಬಲವಾದ್ದು ಪ್ರೀತಿಯಲ್ಲ, ಗೌರವ. ನಾನು ನನ್ನ ವಾಚನ್ನು ನೋಡಿಕೊಂಡೆ – ಮೂರುಗಂಟೆಗೆ ಹತ್ತು ನಿಮಿಷವಿತ್ತು. ನಾನು ಹುಟ್ಟಿದ ದಿನವನ್ನು ಶಪಿಸುತ್ತಾ, ತಬ್ಬಿಬ್ಬಾಗಿ ನಿಂತಿದ್ದಾಗ ಕರೆಗಂಟೆ ಸದ್ದಾಯಿತು. ಅದು ಪೊಲೀಸೆಂದು ನನಗೆ ಖಂಡಿತವಾಗಿಯೂ ತಿಳಿದಿತ್ತು. ಅವರು ಸುಲಭವಾಗಿ ನನ್ನ ಮೇಲೆ ಕೊಲೆಯ ಆಪಾದನೆ ಹೊರಿಸಬಹುದಿತ್ತು. ನಾನು ಉತ್ತರಿಸಲಿಲ್ಲ, ಆದರೆ ಬಹಳ ಬೇಗ ಕರೆಗಂಟೆಯ ಸದ್ದು ಜೋರಾಯಿತು. ಮುಂದಿನ ದಾರಿ ಎಂದರೆ ಬಾಗಿಲನ್ನು ಒಡೆಯುವುದು ಎಂದು ನನಗೆ ತಿಳಿಯಿತು. ಅದು ಯಾರೆಂದು ಕೂಡ ಕೇಳದೇ ಬಾಗಿಲು ತೆಗೆದೆ. ನೀನಾ ನಿಂತಿದ್ದಳು.

''ಆಕೆಯ ರೈಲು ತಪ್ಪಿಹೋಗಿತ್ತು. ಥಿಯೇಟರ್‌ಗಳಿಗೆ ಬರಲಿಕ್ಕೆ, ರೈಲು ಹಿಡಿಯಲಿಕ್ಕೆ ತಡವಾಗಿ ಹೋಗುವುದರಲ್ಲಿ ನೀನಾ ನಿಸ್ಸೀಮಳು. ಬೇರೆ ಯಾವ ರೈಲು ಇರಲಿಲ್ಲವೆಂದೂ ಆಕೆ ಮನೆಗೆ ವಾಪಾಸು ಹೋದಳೆಂದೂ ತಿಳಿಸಿದಳು. ಆದರೆ ಮಧ್ಯರಾತ್ರಿಯಲ್ಲಿ ಆಕೆಗೆ ನನ್ನ ಜೊತೆ ಇರಬೇಕೆಂದು ಬಯಕೆಯಾಯಿತು. ಅಥವಾ ನನ್ನನ್ನ ಬೇರೆ ಯಾರ ಜೊತೆಗಾದರೂ ಹಿಡಿದು ಆಕೆಯ ಕಣ್ಣುಗಳನ್ನು ಕೀಳಬಹುದೆಂದು ಯೋಚಿಸಿದ್ದಳೇನೋ. ಆಶ್ಚರ್ಯ ವೇನೆಂದರೆ ನೀನಾಳನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಹೆಣದ ಜೊತೆಗೆ ಅಂತಹ ಸಂಕಟಕರ ಸನ್ನಿವೇಶದಲ್ಲಿ ಇರುವುದಕ್ಕೆ ಹೋಲಿಸಿದರೆ ಉಳಿದ ಎಲ್ಲಾ ದುಃಖ, ನಾಚಿಕೆಗಳೂ ಮಂಕಾಗಿ ಕಾಣುತ್ತವೆ. ''ಯಾಕೆ ಎಲ್ಲಾ ದೀಪಗಳು ಉರಿಯುತ್ತಿವೆ?'', ನೀನಾ ಹಾಸಿಗೆಯನ್ನು ನೋಡಿ ಉದ್ಗರಿಸಿದಳು. ''ಅವಳನ್ನು ಮುಚ್ಚಿಟ್ಟು ಏನೂ ಪ್ರಯೋಜನವಿಲ್ಲ!'' ಆಕೆ ಹಾಸಿಗೆಯ ಬಳಿ ಓಡಿಹೋಗಿ ಹೊದಿಕೆಯನ್ನು ಹರಿದುಹಾಕಲು ಹೊರಟಳು. ಆದರೆ ನಾನು ಆಕೆಯ ಕೈಹಿಡಿದು ಹೇಳಿದೆ, ''ನೀನಾ ಅಲ್ಲಿ ಮಲಗಿರುವುದು ಒಂದು ಹೆಣ.'' ನನ್ನ ಮುಖಭಾವದಿಂದ ನಾನು ಸುಳ್ಳು ಹೇಳುತ್ತಿಲ್ಲವೆಂದು ಆಕೆಗೆ ತಿಳಿಯಿತು. ನಾನು, ನೀನಾ ತನ್ನ ಗದ್ದಲದಿಂದ ನೆರೆಹೊರೆಯವರನ್ನು ಎಬ್ಬಿಸಬಹುದು ಎಂದು ತಿಳಿದಿದ್ದೆ. ನೀನಾಳನ್ನು ಗಾಬರಿ ಗೊಳಿಸಲು ಬರಿಯ ಇಲಿ ಅಥವಾ ಮಿಡತೆ ಸಾಕು. ಆದರೆ ಆ ಕ್ಷಣ ನೀನಾ ತನ್ನೆಲ್ಲ ಹುಚ್ಚು ಕಡಿಮೆಯಾದಂತೆ ಬಹಳ ಸಮಧಾನದಿಂದ ಇದ್ದಳು. 'ಹೆಣ? ಯಾರದ್ದು?' ನಾನು, ಅದು ಥೆರೇಸಾ ಸ್ಟೇನ್ ಎಂದು ಹೇಳಿದಾಗ ಆಕೆ ನಗಲಾರಂಭಿಸಿದಳು – ಉದ್ರೇಕದಿಂದಲ್ಲ, ಒಬ್ಬ ಆರೋಗ್ಯವಂತ ಹೆಂಗಸು ಒಂದು ಒಳ್ಳೆಯ ತಮಾಷೆ ಕೇಳಿ ನಗುವಂತೆ. ನಾನು ಹೇಳಿದೆ, ''ನೀನಾ ಇದು ತಮಾಷೆಯಲ್ಲ– ಥೆರೇಸಾ ಸ್ಟೇನ್ ನನ್ನ ಹಾಸಿಗೆಯಲ್ಲಿ ಸತ್ತಿದ್ದಾಳೆ.''

''ನೀನಾಗೆ ಥೆರೇಸಾ ಸ್ಟೇನ್ ಗೊತ್ತಿದ್ದಳು. ಇಡೀ ಪ್ರಜ್ಞಾವಂತ ವಾರ್ಸೋಕ್ಕೆ ಆಕೆಯ ಪರಿಚಯವಿತ್ತು. ನಾನು ಥೆರೇಸಾಳ ಪಾಕೆಟ್ ಬುಕ್ ಬಿಚ್ಚಿ ಆಕೆಯ ಪಾಸ್‌ಪೋರ್ಟನ್ನು ತೋರಿಸುವ ತನಕ, ನೀನಾ ನನ್ನನ್ನು ನಂಬಲಿಲ್ಲ. ರಷ್ಯನ್‌ರ ಜೊತೆ ಎಲ್ಲರೂ, ಹೆಂಗಸರೂ ಕೂಡ ಪಾಸ್‌ಪೋರ್ಟಿನ ಜೊತೆಗೇ ಓಡಾಡಬೇಕಿತ್ತು.''

''ನೀವು ಈ ಬಗ್ಗೆ ಈವರೆಗೆ ಬರೆಯದೇ ಇದ್ದಿದ್ದು ಹೇಗೆ?'' ನಾನು ಮ್ಯಾಕ್ಸ್ ಪರ್ಸ್ಕಿಯನ್ನು ಕೇಳಿದೆ.

''ಯಾರಿಗೂ ಈವರೆಗೆ ಸತ್ಯ ಏನೆಂದು ತಿಳಿದಿಲ್ಲ. ಆಮೇಲೆ, ಇನ್ನೂ ಕೂಡ ಥೆರೇಸಾ ಸ್ಟೇನ್ ಅನ್ನು ತಿಳಿದಿರುವ ಹಲವರಿದ್ದಾರೆ.''

ಆತ ಇನ್ನೊಂದು ಸಿಗರೇಟು ಹೊತ್ತಿಸಿದ. ರಾತ್ರಿಯಾಗಿತ್ತು. ಚಂದ್ರ ಹಿತ್ತಾಳೆಯಂತೆ ಹಳದಿಯಾಗಿದ್ದ.

''ಇದು ಎಂತಹ ಕಥೆಯಾಗಬಹುದು,'' ನಾನು ಹೇಳಿದೆ.

''ನನ್ನ ಮುದಿಪ್ರಾಯದಲ್ಲಿ, ವಾರ್ಸೋದಲ್ಲಿ ಎಲ್ಲರೂ ಥೆರೇಸಾ ಸ್ಟೇನ್ ಅನ್ನು ಮರೆತಾಗ ಬಹುಶಃ ನಾನು ಇದರ ಬಗ್ಗೆ ಬರೆಯಬಹುದು. ಈಗಿನ್ನೂ ಬಹಳ ಬೇಗವಾಯ್ತು. ಆದರೆ ನಿನಗೆ ಎಲ್ಲವನ್ನೂ ಹೇಳುತ್ತೇನೆ. ನೀನಾ ನನಗೆ ಸಹಾಯ ಮಾಡಲು ತಯಾರಿದ್ದಳು, ಒಂದು ಉಪಾಯ ಕೂಡ ಮಾಡಿದಳು. ನಾವು ಸೈಬೇರಿಯಾವನ್ನೋ, ಗಲ್ಲು ಮರವನ್ನೋ ತಲುಪುತ್ತಿದ್ದೇವೇನೋ, ಆದರೆ ಇಂತಹ ಗಳಿಗೆಯಲ್ಲಿ ಕೆಲವೊಮ್ಮೆ ವಿಚಿತ್ರವಾದ ಧೈರ್ಯ ಬರುತ್ತದೆ. ನಾವು ಹೆಣಕ್ಕೆ ಬಟ್ಟೆ ತೊಡಿಸಿದೆವು. ವಾಚ್‌ಮನ್‌ಗೆ, ಈಕೆಗೆ ಪಿತ್ತಕೋಶದ ತೊಂದರೆಯಾಗಿದೆ ಹಾಗಾಗಿ ಆಸ್ಪತ್ರೆಗೆ ಕರಕೊಂಡು ಹೋಗುತ್ತಿರುವುದಾಗಿ ಹೇಳುವುದೆಂದು ನಿರ್ಧರಿಸಿದೆವು. ವಾಚ್‌ಮನ್ ಒಬ್ಬ ಮುದಿ ಕುಡುಕ, ಆತ ಗೇಟು ತೆರೆದಾಗ ದೀಪ ಕೂಡ ಹಾಕಲಿಲ್ಲ. ಥೆರೇಸಾ ಸ್ಟೇನ್‌ಳ ರಾತ್ರಿಯ ಬಟ್ಟೆ ತೆಗೆದು ಆಕೆಯ ಲಂಗ ತೊಡಿಸುವ ಹೊತ್ತಿಗೆ ನಾವು ಅರ್ಧ ಸತ್ತೇ ಹೋಗಿದ್ದೆವು. ಅವಳ ದೇಹ ಒಂದು ಭಗ್ನ ಅವಶೇಷದಂತಿತ್ತು. ಆಕೆಗೆ ಬಟ್ಟೆ ತೊಡಿಸಿ, ಎತ್ತಿಕೊಂಡು, ನಾನು ಮೂರು ಮಾಳಿಗೆ ಕತ್ತಲಿನ ಮೆಟ್ಟಲನ್ನು ಇಳಿದೆ. ಆಕೆ ಹೆಚ್ಚು ಭಾರವಿರಲಿಲ್ಲ, ಆದರೂ ಇಳಿಯುವ ಹೊತ್ತಿಗೆ ನಾನು ಛಿದ್ರವಾಗಿ ಹೋಗಿದ್ದೆ. ನೀನಾ ಆಕೆಯ ಆ ಪಾದಗಳನ್ನು ಹಿಡಿದು ನನಗೆ ಸಹಾಯ

ಮಾಡಿದಳು. ನೀನಾ ಇದನ್ನೆಲ್ಲಾ ಹೇಗೆ ಮಾಡಿದಳೆಂಬುದು ನನಗೆ ಇನ್ನೂ ಒಂದು ಒಗಟು. ಅದರ ಮೊದಲಾಗಲೀ ನಂತರವಾಗಲೀ ಆಕೆ ಅಷ್ಟೊಂದು ಸಹಜವಾಗಿ ಇರಲಿಲ್ಲ – ಸ್ವಲ್ಪ ಅತೀ ಸಹಜವೆಂದೇ ಹೇಳಬಹುದು. ಗೇಟಿನ ಪಕ್ಕದ ಕತ್ತಲಿನ ದಾರಿಯಲ್ಲಿ ನಾನು ಥೆರೇಸಾಳನ್ನು ಗೋಡೆಯ ಬದಿಗೆ ಒತ್ತಿ ಹಿಡಿದೆ. ಆಕೆಯ ತಲೆ ನನ್ನ ಭುಜದ ಮೇಲೆ ಬಿತ್ತು ಮತ್ತು ಒಂದು ನಿಮಿಷ ನಾನು ಆಕೆ ಜೀವಂತವಾಗಿದ್ದಾಳೆಂದೇ ಭಾವಿಸಿದೆ! ನೀನಾ ವಾಚ್‌ಮನ್‌ನ ಕಿಟಕಿಯನ್ನು ತಟ್ಟಿದಳು, ಬಾಗಿಲು ತೆರೆದಂತೆ ಕೀರಲು ಸದ್ದು ಕೇಳಿಬಂತು. ಆತ ನಿಟ್ಟುಸಿರು ಬಿಡುತ್ತಾ, ಶಪಿಸುತ್ತಾ ಗೇಟ್ ತೆರೆದ. ನಾನೂ ನೀನಾ ಸೇರಿ ಥೆರೇಸಾಳ ಭುಜಗಳನ್ನು ಹಿಡಿದು ನೇರವಾಗಿ ಎತ್ತಿಕೊಂಡು ಬಂದೆವು. ನಾನು ವಾಚ್‌ಮನ್‌ಗೆ ಸ್ವಲ್ಪ ದುಡ್ಡು ಕೂಡ ಕೊಟ್ಟೆ. ಆತ ಏನೂ ಪ್ರಶ್ನಿಸಲಿಲ್ಲ, ನಾವೂ ಏನೂ ಹೇಳಲಿಲ್ಲ. ನಾವು ಎಲ್ಲಿಯಾದರೂ ಪೊಲೀಸರ ಕೈಗೆ ಸಿಕ್ಕುತ್ತಿದ್ದರೆ ಇಂದು ನಾನು ಇಲ್ಲಿ ನಿನ್ನ ಜೊತೆ ಕೂತಿರುತ್ತಿರಲಿಲ್ಲ. ಆದರೆ ದಾರಿ ಖಾಲಿಯಾಗಿತ್ತು. ನಾವು ಹತ್ತಿರದ ಮೂಲೆಗೆ ಹೆಣವನ್ನು ಎಳೆದು, ದಾರಿಯ ಬದಿಯಲ್ಲಿ ಕೂರಿಸಿದೆವು. ನಾನು ಆಕೆಯ ಪಾಕೆಟ್ ಬುಕ್ಕನ್ನು ಬಳಿಯಲ್ಲೇ ಇಟ್ಟೆ. ಇದು ಇಷ್ಟೂ ನಡೆಯಲು ಕೆಲವು ನಿಮಿಷಗಳಷ್ಟೇ ಬೇಕಾಯಿತು. ನಾನು ಎಷ್ಟು ತಬ್ಬಿಬ್ಬಾಗಿದ್ದೆನೆಂದರೆ ಮುಂದೇನು ಮಾಡುವುದೆಂದು ತಿಳಿಯಲಿಲ್ಲ. ನೀನಾ ನನ್ನನ್ನು ತನ್ನ ಮನೆಗೆ ಕರಕೊಂಡುಹೋದಳು.



''ಸರಿಯಾದ ಕೊಲೆ ಎನ್ನುವಂತಹದ್ದು ಏನೂ ಇಲ್ಲ – ಎಂದು ಒಂದು ಹಳೆಯ ಮಾತಿದೆ. ನಾವು ಆ ರಾತ್ರಿ ಮಾಡಿದ್ದೆಲ್ಲವೂ ಸರಿಯಾದ ಅಪರಾಧವೇ ಆಗಿತ್ತು. ನಾವು ಬಹುಶಃ ಥೆರೇಸಾಳನ್ನು ಕತ್ತು ಹಿಸುಕಿಯೂ ಕೊಲ್ಲಬಹುದಿತ್ತೇನೋ – ಆಗ ಬಹುಶಃ ನಮ್ಮ ಬೆರಳ ಗುರುತು ಸಿಕ್ಕಿರುತ್ತಿತ್ತು. ಆದರೆ ಆ ಗುರುತನ್ನು ಕಂಡುಹುಡುಕುವ ವಿಧಾನ ವಾರ್ಸೋದಲ್ಲಿರಲಿಲ್ಲ. ಒಬ್ಬ ಮುದುಕಿ ದಾರಿಯಲ್ಲಿ ಸತ್ತು ಬಿದ್ದಿದ್ದಳು ಎಂದು ರಷ್ಯನ್ ಪೊಲೀಸರು ಆಸಕ್ತಿ ತೋರಿಸಲಿಲ್ಲ. ಆಕೆಯನ್ನು ಒಂದು ಹೆಣದ ಮನೆಗೆ ಕೊಂಡೊಯ್ದರು. ಥೆರೇಸಾ ಸ್ಟೇನ್ ಸತ್ತಿದ್ದು ಯಹೂದ್ಯರಿಗೆ ತಿಳಿದಾಗ, ಮುಖಂಡರೆಲ್ಲಾ ಆಕೆಯ ಹೆಣವನ್ನು ಶುದ್ಧಿ ಮಾಡಲು ಏನೂ ಶವಪರೀಕ್ಷೆಯಿಲ್ಲದೆಯೇ ಜೆಸ್ಟಾ ಬೀದಿಯ ಸ್ಮಶಾನಕ್ಕೆ ಕೊಂಡೊಯ್ಯುವ ಏರ್ಪಾಡು ಮಾಡಿದರು. ಇದೆಲ್ಲಾ ನನಗೆ ಆಮೇಲೆ ತಿಳಿದುಬಂತು. ನೀನು ಬಹುಶಃ ಇದನ್ನು ನಂಬಲಿಕ್ಕಿಲ್ಲ, ಆದರೆ ಆ ರಾತ್ರಿ ಅಥವಾ ಆ ರಾತ್ರಿಯ ಉಳಿದ ಸಮಯದಲ್ಲಿ ನಾನು ನೀನಾ ಜೊತೆ ಮಲಗಿದೆ, ಯಾವತ್ತಿನಂತೆಯೇ. ನಾನು ಧೈರ್ಯದಿಂದಿದ್ದೆ, ಅರ್ಧ ಬಾಟಲ್ ವೋಡ್ಕಾ ಕೂಡ ಕುಡಿದೆ.

''ಥೆರೇಸಾ ಸ್ಟೇನ್‌ನ ಸಾವಿನ ಸುದ್ದಿಯಿಂದಾಗಿ ವಾರ್ಸೋ ದಂಗಾಗಿತ್ತೆಂದು ನಿನಗೆ ನಾನು ಹೇಳಬೇಕಾಗಿಲ್ಲ. ನಮ್ಮ ಯಿದ್ದಿಶ್ ಪತ್ರಿಕೆಗಳು ಬರೀ ಅದರ ಬಗ್ಗೆಯೇ ಬರೆದವು. ಥೆರೇಸಾ ತನ್ನ ಮನೆಯ ಯಜಮಾನತಿಗೆ ತಾನು ತನ್ನ ಅನಾರೋಗ್ಯದ ಸಂಬಂಧಿಕನೊಂದಿಗೆ ರಾತ್ರಿ ಕಳೆಯುತ್ತೇನೆಂದು ಹೇಳಿ ಹೋಗಿದ್ದಳು. ಆದರೆ ಆ ಸಂಬಂಧಿಕ ಯಾರು? ಯಾರಿಗೂ ಯಾವತ್ತೂ ತಿಳಿಯಲಿಲ್ಲ. ನನ್ನ ವಾಚ್‌ಮನ್ ನಾವು ಮಧ್ಯರಾತ್ರಿ ಒಬ್ಬ ಹೆಂಗಸನ್ನು ಹೊತ್ತು ಹೋಗಿದ್ದನ್ನು ಪೊಲೀಸರಿಗೆ ತಿಳಿಸಬಹುದಿತ್ತು. ಆದರೆ ಆತ ಅರೆ ಕುರುಡನಾಗಿದ್ದ, ಮತ್ತು ಪೇಪರ್ ಓದುತ್ತಿರಲಿಲ್ಲ. ಆಕೆಯ ಪಾಕೆಟ್‌ಬುಕ್ ಬಳಿಯೇ ದೊರಕಿದ್ದುದರಿಂದ ಆಕೆ ಸ್ವಾಭಾವಿಕ ಕಾರಣಗಳಿಂದಲೇ ಸತ್ತಿರಬೇಕೆಂದು ಊಹಿಸಲಾಯಿತು. 'ಟುಡೇ' ಪತ್ರಿಕೆಯವನೊಬ್ಬ, ಥೆರೇಸಾ ಸ್ಟೇನ್ ಬಡವರಿಗೆ ಹಾಗೂ ರೋಗಿಗಳಿಗೆ ಸಹಾಯ ಮಾಡಲು ಹೋಗುತ್ತಿದ್ದಳೆಂಬ ಹೊಸ ಕಥೆ ಹುಟ್ಟಿಸಿದ್ದು ಇನ್ನೂ ನನಗೆ ನೆನಪಿದೆ. ಆತ ಆಕೆಯನ್ನು ಪರ್‌ಟೆಸ್‌ನ ಕಥೆಯಲ್ಲಿ ಬರುವ – ರಾತ್ರಿಯ ಪ್ರಾರ್ಥನೆಗೂ ಹೋಗದೆ ರೋಗಪೀಡಿತ ವಿಧವೆಯ ಒಲೆಯನ್ನು ಹಚ್ಚಲು ಹೋದ – ಸಂತಳಿಗೆ ಹೋಲಿಸಿದ್ದ.

''ನಮ್ಮ ವಾರ್ಸೋದ ಯಹೂದ್ಯರಿಗೆ ಉತ್ತರಕ್ರಿಯೆ ಮಾಡುವುದೆಂದರೆ ಪ್ರೀತಿ. ಆದರೆ ಥೆರೇಸಾ ಸ್ಟೇನ್‌ನ ಶವಸಂಸ್ಕಾರದಂತಹದ್ದು ನಾನು ನೋಡೇ ಇರಲಿಲ್ಲ. ನೂರಾರು ಜನ ಶವ ಯಾತ್ರೆಯಲ್ಲಿ ಪಾಲ್ಗೊಂಡರು. ಹೆಂಗಸರು, ಹುಡುಗಿಯರು ಸತತವಾಗಿ ಅಳುತ್ತಿದ್ದರು. ಹಲವರು ಥೆರೇಸಾಳ ಗುಣಗಾನ ಮಾಡುತ್ತಿದ್ದರು. ಜರ್ಮನ್ ಸಿನಗಾಗ್‌ನ ಪಾದ್ರಿಯಂತೂ ಗೆಯೋಟೆ, ಶಿಲ್ಲರ್, ಲೆಸ್ಸಿಂಗ್, ಜೂಡ್ಹಾ ಲೆವಿ ಹಾಗೂ ಸೋಲೋಮನ್ ಗೇಬ್ರಿಯಲ್‌ರ ಆತ್ಮಗಳು ಕೂಡ ಥೆರೇಸಾಳಿಗಾಗಿ ಶೋಕಿಸುತ್ತಿವೆ ಎಂದು ಹೇಳಿಕೆ ನೀಡಿದ. ನನಗೆ ನೀನಾಳ ರಹಸ್ಯ ಮುಚ್ಚಿಡುವ ಶಕ್ತಿಯ ಬಗ್ಗೆ ನಂಬಿಕೆಯಿರಲಿಲ್ಲ. ಹೆಚ್ಚಾಗಿ ಹುಚ್ಚು ಮತ್ತು ದೂರು ಕೇಳುವ ಅಭ್ಯಾಸ ಜೊತೆಜೊತೆಗೇ ಇರುತ್ತವೆ. ನಮ್ಮ ಮೊದಲ ಜಗಳವಾದಾಗಲೇ ನೀನಾ ಪೊಲೀಸರ ಬಳಿಗೆ ಹೋಗಬಹುದೆಂದು ಭಯಪಟ್ಟಿದ್ದೆ. ಆದರೆ ಆಕೆಯಲ್ಲಿ ನಿಜವಾಗಿಯೂ ಬದಲಾವಣೆಯಾಗಿತ್ತು. ಆಕೆ ತನ್ನ ಹೊಟ್ಟೆಕಿಚ್ಚಿನಿಂದ ನನಗೆ ಕಾಟ ಕೊಡುವುದನ್ನು ನಿಲ್ಲಿಸಿದಳು. ನಿಜಕ್ಕೂ, ನಾವು ಆನಂತರ ಆ ರಾತ್ರಿಯ ಬಗ್ಗೆ ಮಾತೇ ಎತ್ತಲಿಲ್ಲ. ಅದು ನಮ್ಮ ದಿವ್ಯ ರಹಸ್ಯವಾಯಿತು.

''ಅದಾದ ಸ್ವಲ್ಪ ಸಮಯದಲ್ಲಿ ಯುದ್ಧ ಶುರುವಾಯಿತು. ನೀನಾಗೆ ಸುಮಾರು ವರ್ಷಗಳಿಂದ ಇದ್ದ ಕ್ಷಯರೋಗ ಹೆಚ್ಚಾಯಿತು. ಆಕೆಯ ಮನೆಯವರು ಆಕೆಯನ್ನು ಓಟ್‌ವೋಕ್‌ನಲ್ಲಿದ್ದ ಆಸ್ಪತ್ರೆಯಲ್ಲಿ ಇರಿಸಿದರು. ನಾನು ಆಗೀಗ ಹೋಗಿ ಆಕೆಯನ್ನು ನೋಡುತ್ತಿದ್ದೆ. ಆಕೆಯ ಸ್ವಭಾವದಲ್ಲಿ ಏನೋ ಒಂದು ಬದಲಾವಣೆಯಾಗಿತ್ತು. ಆಕೆಯ ಹುಚ್ಚನ್ನು ಪೆಟ್ಟಿನಿಂದ ನಿಯಂತ್ರಿಸುವ ಅಗತ್ಯವಿರಲಿಲ್ಲ. ಆಕೆ ೧೯೪೧ರಲ್ಲಿ ತೀರಿಹೋದಳು.''

''ಆಕೆ ಆಮೇಲೆ ನಿಮ್ಮ ಮುಂದೆ ಕಾಣಿಸಿಕೊಳ್ಳಲಿಲ್ಲವೇ?'' ನಾನು ಕೇಳಿದೆ.

''ನಿನ್ನರ್ಥ ನೀನಾಳೇ ಅಥವಾ ಥೆರೇಸಾಳೇ? ಇಬ್ಬರೂ ಮಾತುಕೊಟ್ಟಿದ್ದರು. ಆದರೆ ಉಳಿಸಿಕೊಳ್ಳಲಿಲ್ಲ. ಆತ್ಮ ಎನ್ನುವಂತಹದ್ದು ಏನಾದರೂ ಇದ್ದರೂ, ಅವು ಇನ್ನೊಂದು ಜಗತ್ತಿನಿಂದ ಸಂದೇಶಗಳೊಂದಿಗೆ ಬರುವ ಪ್ರಯತ್ನ ಮಾಡುತ್ತಿದ್ದವು ಎಂದು ನಾನು ನಂಬುವುದಿಲ್ಲ. ಸಾವೇ ನಮ್ಮೆಲ್ಲಾ ಅಸಂಬದ್ಧತೆಯ ಕೊನೆ ಎಂದು ನನ್ನ ನಂಬಿಕೆ.

''ನಾನು ಇನ್ನೊಂದು ಸತ್ಯ ಹೇಳಲು ಮರೆತೆ. ನನ್ನ ಕಥೆಯೊಂದಿಗೆ ನೇರವಾಗಿ ಸಂಬಂಧಿಸಿದ್ದಲ್ಲವಾದರೂ ಅಷ್ಟೇ ಆಸಕ್ತಿಯ ವಿಷಯವಾಗಿದೆ. ಅಷ್ಟು ವರ್ಷಗಳೂ, ನೀನಾ ಮತಾಂತರದ ವಿಷಯದಲ್ಲಿ ತನ್ನ ಅಂಕಲ್ ಬೈಲಾದ ಪಾದ್ರಿಯನ್ನು ಹೆದರಿಸಿದ್ದಳು. ತನ್ನ ಕುಟುಂಬದಲ್ಲಿ ಮತಾಂತರವಾಗುವುದರ ಬಗ್ಗೆ ಪಾದ್ರಿ ತೀವ್ರವಾಗಿ ಭಯಪಟ್ಟು ಆಕೆಗೆ ದುಡ್ಡು ಕಳಿಸುತ್ತಿದ್ದ. ಆಕೆಯ ಸಾವಿನ ಬಳಿಕ, ಕುಟುಂಬದವರು ಆಕೆಯನ್ನು ಹೂಳಲು ಹೊರಟಾಗ ದಾಖಲೆಗಳ ಅಗತ್ಯ ಒದಗಿಬಂತು. ಆಗ ಆಕೆ ಹಲವು ವರ್ಷಗಳಿಂದ ಕ್ರೈಸ್ತ ಮತದವಳಾಗಿದ್ದಳೆಂದು ತಿಳಿದುಬಂತು. ಆಗಲೇ ವಾರ್ಸೋ ಜರ್ಮನ್‌ರ ಸ್ವಾಧೀನದಲ್ಲಿತ್ತು. ಮನೆಯವರು ಅಧಿಕಾರಿಗಳಿಗೆ ಲಂಚಕೊಟ್ಟು ಆಕೆಯನ್ನು ಯಹೂದ್ಯರ ಸ್ಮಶಾನದಲ್ಲೇ ಹೂತರು. ನಿಜಕ್ಕೂ ನೋಡಿದರೆ ಆಕೆ ಮೊದಲ ಸಾಲಲ್ಲಿ ಥೆರೇಸಾ ಸ್ಟೇನ್ ಪಕ್ಕದಲ್ಲೇ ಇದ್ದಾಳೆ. ಆಕೆ ಯಾತಕ್ಕೆ ಮತಾಂತರವಾದಳೆಂದು ನನಗೆ ತಿಳಿಯದು. ಆಕೆ ಹೆಚ್ಚಾಗಿ ಯಹೂದ್ಯ ದೇವರ ಬಗ್ಗೆ ಆಕೆಯ ಪವಿತ್ರ ಪೂರ್ವಜರ ಬಗ್ಗೆ ಮಾತನಾಡುತ್ತಿದ್ದಳು.''

ಮ್ಯಾಕ್ಸ್ ಪರ್ಸ್ಕಿ ಸುಮ್ಮನಾದ. ರಾತ್ರಿ ಇನ್ನೂ ತಣ್ಣಗಾಯಿತು. ಬಾಗಿಲ ಮೇಲೆ ದೀಪದ ಸುತ್ತಲೂ ಸೇರಿದ ಸೊಳ್ಳೆ, ಮಿಡತೆ, ಚಿಟ್ಟೆಗಳು, ಕೀಟಗಳು ಬೇಸಿಗೆಯ ರಾತ್ರಿಯ ಕೋಲಾಹಲವನ್ನು ಪ್ರತಿಬಿಂಬಿಸುತ್ತಿದ್ದವು. ಮ್ಯಾಕ್ಸ್ ಪರ್ಸ್ಕಿ ತನ್ನ ತುಟಿಯಲ್ಲಿ ಬಚ್ಚಿಟ್ಟಿದ್ದ ಸತ್ಯವನ್ನು ನೆನಸಿಕೊಂಡು ತಲೆದೂಗುತ್ತಾ ಹೇಳಿದ : ''ಪ್ರೀತಿಯಲ್ಲಿ ನೀನು ಉಪಕಾರ ಮಾಡುತ್ತಿರುವುದಿಲ್ಲ, ನೀನೊಬ್ಬ ಅಹಂಕಾರಿಯಾಗಿರಬೇಕು. ಇಲ್ಲದಿದ್ದರೆ ನಿನ್ನನ್ನೂ ಮತ್ತು ನಿನ್ನ ಪ್ರೀತಿಯನ್ನೂ ನಾಶ ಮಾಡುತ್ತೀಯಾ.''

ಆತ ಸ್ವಲ್ಪ ಸಂಕೋಚಿಸುತ್ತಾ ವೈಟ್ರೆಸ್‌ನ್ನು ನೋಡಿದ. ಆಕೆ ಕೂಡಲೇ ಟೇಬಲ್ ಬಳಿ ಬಂದಳು. ''ಇನ್ನೂ ಚೂರು ಕಾಫಿ?''

''ಹೌದು, ಹೆಲೇನಾ. ಹೇಳು, ಇವತ್ತು ಎಷ್ಟು ಹೊತ್ತಿನವರೆಗೆ ಕೆಲಸ ಮಾಡುತ್ತೀಯಾ?''

''ಯಾವತ್ತಿನಂತೆಯೇ, ನಾವು ೧೨ ಗಂಟೆಗೆ ಮುಚ್ಚುತ್ತೇವೆ.''

''ನಾನು ನಿನಗಾಗಿ ಹೊರಗೆ ಕಾಯುತ್ತಿರುತ್ತೇನೆ.''

ಅನುವಾದ : ಅಶ್ವಿನಿ ಭಟ್
೩೮/೩೩, ತಾರಕಂ, ೧ನೇ ಮಹಡಿ, ಕರ್ಪಗಾಂಬಾಳ್ ನಗರ, ಮೈಲಾಪುರ, ಚೆನ್ನೈ - ೬೦೦ ೦೦೪

# ರಾಮನಿಗೆ ಸೀತೆ ಏನಾಗಬೇಕು?

**ಬೆ**ಳಗಾನ ರಾಮಾಯಣ ಕೇಳಿ, ರಾಮನಿಗೆ ಸೀತೆ ಏನಾಗಬೇಕು, ಎಂದು ಕೇಳಿದರಂತೆ! ಇಂತಹ ಉಡಾಫೆಯ ಮಾತುಗಳಿಂದ ಎಲ್ಲರಿಗೆ ಮನರಂಜನೆ ಒದಗಿಸಿ ಕೇಳುಗನಿಗೆ ಅವಮಾನಿಸಿ ಆ ಸಂದರ್ಭದಿಂದ ತಾವು ಬಚಾಯಿಸಿಕೊಳ್ಳುವ ಮಾರ್ಗ ಅನುಸರಿಸುತ್ತಿದ್ದುದು ಎಷ್ಟರಮಟ್ಟಿಗೆ ಸರಿ? ನಿಜಕ್ಕೂ ಈ ಕುರಿತು ಚಿಂತಿಸಿದಾಗ, ಸಹನೆಯಿಂದ ಕೇಳಿದ ಶ್ರೋತೃವಿನ ಕಕ್ಕಾಬಿಕ್ಕಿಯಾದ ಪ್ರಶ್ನೆಯಿದು ಎಂದು ಹೇಳುವುದಕ್ಕಿಂತ ಇಡೀ ರಾಮಾಯಣದ ಮೂಲ ಧ್ಯೇಯಕ್ಕೆ ಕೈಹಾಕಿದ ಪ್ರಶ್ನೆಯಿದೆಂದು ಹೇಳಬಹುದು. ಅಂತೆಯೇ ಎಂದಿನಿಂದಲೋ ನಮ್ಮ ವ್ಯಾವಹಾರಿಕ ಬದುಕಿನಲ್ಲಿ ಇಣುಕಿದ ಈ ವಾಕ್ಯವನ್ನು ನಾವೆಲ್ಲರೂ ಒಂದಿಲ್ಲ ಒಂದು ರೀತಿಯಲ್ಲಿ ಆಶ್ರಯಿಸುವವರೇ ಆಗಿರುತ್ತೇವೆ. ಇಲ್ಲದಿದ್ದರೆ ನಮ್ಮ ನಂಬಿಕೆ, ಶ್ರದ್ಧೆ, ಗಾಳಿ ಪಾಲಾಗದಂತೆ ಭ್ರಾಮಕಲೋಕದ ಯಜಮಾನರಾಗಿ ಮೆರೆಯಲು ಸಾಧ್ಯವಾಗದು.

ರಾಮಾಯಣ ಭಾರತೀಯ ಮನಸ್ಸುಗಳಿಗೆ ಪರಮಪೂಜ್ಯ. ರಾಜಕೀಯ ಮುಖಂಡರಿಗೆ 'ರಾಮ-ರಾಜ್ಯ' ನಿರ್ಮಾಣ ಮಾಡುವ ತಮ್ಮ ಅನುಶಾಸನದಲ್ಲಿ ರಾಮ ಆರಾಧ್ಯ ರಾಜಕೀಯ ಗುರುವಾದರೆ, ಧರ್ಮಬೋಧಕರಿಗೆ, ಮನುಷ್ಯರ ಹೃದಯಗಳಿಗೆಲ್ಲಾ 'ರಾಮ್' (ದಯೆ) ಬರುವಂತೆ ಪರಿವರ್ತಿಸುವ ಹುಚ್ಚು. ಆದರ್ಶ ಅವಿಭಕ್ತ ಹಿಂದು ಕುಟುಂಬಕ್ಕೆ ತಂದೆಯ ವಚನ ಪಾಲಿಸುವ ರಾಮನಂತಹ ಮಗ, ಪ್ರತಿನಿಧಿತ್ವಕ್ಕೆ ಚ್ಯುತಿಯಾಗದಂತಹ ಭರತ, ಸಹೋದರ ವಾತ್ಸಲ್ಯದ ಪ್ರತಿರೂಪವಾದ ಲಕ್ಷ್ಮಣ, ಹನುಮಂತನಂತಹ ಭಂಟ, ಗಂಡನ ನೆರಳಾಗಿರುವ ಸೀತೆ, ಹದಿನಾಲ್ಕು ವರುಷಗಳ ಕಾಲ ತನ್ನ ತಪಸ್ಸಿನ ಧಾರೆಯೆರೆದು ಪತಿಗೆ ಶ್ರೀರಕ್ಷೆಯಾಗಿರುವ ಮಹಾಸಾಧ್ವಿ ಊರ್ಮಿಳೆ... ಮುಂತಾದ ಕೌಟುಂಬಿಕ ಮರ್ಯಾದೆಗಳ ಸಾಕಾರ ಮೂರ್ತಿಗಳು ಈ ರಾಮಾಯಣದ ಕಥಾ ವಸ್ತುವಿನಲ್ಲಿ ಇಂತಹ ಸಮಾಜ ತಮ್ಮ ಸಮಾಜವೆಂಬುದು ಭಾರತದ ಕುಟುಂಬದ ಮನಸ್ಸುಗಳ ಹೆಮ್ಮೆ. ಅಂಥವರಿಗೆ 'ರಾಮನಿಗೆ ಸೀತೆ-ಏನಾಗಬೇಕು?' ಎಂಬ ಪ್ರಶ್ನೆ ಕಿರಿಕಿರಿಯ ಜೊತೆಗೆ ಉದ್ಧಟತನವಾಗಿ ಕಾಣುವುದು ಸಹಜವೇ. ಆದರೆ ಇಂತಹ ಉದ್ಧಟತನದ ಪ್ರಶ್ನೆ ಎಂತಹ ಶ್ರೋತೃವಿನಿಂದ ಬಂದಿರಬೇಕು?

ಪ್ರಶ್ನೆ ಕೇಳುವ ಉದ್ಧಟತನ ಭಾರತೀಯ ಚಾರ್ವಾಕ ಮನಸ್ಸಿಗಲ್ಲದೆ ಇನ್ನಾರಿಗೆ ಸಾಧ್ಯ? ಇಡೀ ರಾಮಾಯಣದ ಚಲನೆ ಕೈಕೇಯಿಗೆ ಕೀ ರೂಪದಲ್ಲಿ ಮಂಥರೆಯಾದರೆ ಇದರ ಗತಿಗೆ ಸೀತೆ. ಈ ಪಾತ್ರಗಳಿರದಿದ್ದರೆ ರಾಮಾಯಣದ ರಚನೆ ಸಾಧ್ಯವಾಗುತ್ತಿರಲಿಲ್ಲ. ಆದಿ ಕೈಕೇಯಿ ಆದರೆ ಚಲನೆ ಹಾಗೂ ಅಂತ್ಯ ಸೀತೆಯೇ ಆಗುತ್ತಾಳೆ. ಇವೆರಡು ಪಾತ್ರಗಳಲ್ಲಿಯ ಸೀತೆ ರಾಮನಿಗೆ ಏನಾಗಬೇಕು? ಅಂತೆಯೇ, ಭವಭೂತಿ ತನ್ನ 'ಉತ್ತರರಾಮಚರಿತ'ದಲ್ಲಿ ವಾಲಿಯ ವಧೆ, ಸೀತೆಯ ಪರಿತ್ಯಾಗವನ್ನು ಲವ-ಕುಶ ಹಾಗೂ ಪೃಥ್ವಿಯ ಮುಖಾಂತರ ಪ್ರಶ್ನಿಸುತ್ತಾನೆ. ಪ್ರಶ್ನೆಗೊಳಪಡುವ ರಾಮ ಹತ್ತನೆಯ ಶತಮಾನಕ್ಕಿಂತ ಮೊದಲು ವಾಲ್ಮೀಕಿಯ ರಾಮಾಯಣದ ಕಥಾನಾಯಕನಾಗಿದ್ದುದರಿಂದ ಸಾಧ್ಯವಾಯಿತೇನೋ!

ಪ್ರಶ್ನೆ ಕೇಳುವ ಉದ್ಧಟತನ ಭಾರತೀಯ ಚಾರ್ವಾಕ ಮನಸ್ಸಿಗಲ್ಲದೆ ಇನ್ನಾರಿಗೆ ಸಾಧ್ಯ? ಇಡೀ ರಾಮಾಯಣದ ಚಲನೆ ಕೈಕೇಯಿಗೆ ಕೀ ರೂಪದಲ್ಲಿ ಮಂಥರೆಯಾದರೆ ಇದರ ಗತಿಗೆ ಸೀತೆ. ಈ ಪಾತ್ರಗಳಿರದಿದ್ದರೆ ರಾಮಾಯಣದ ರಚನೆ ಸಾಧ್ಯವಾಗುತ್ತಿರಲಿಲ್ಲ. ಆದಿ ಕೈಕೇಯಿ ಆದರೆ ಚಲನೆ ಹಾಗೂ ಅಂತ್ಯ ಸೀತೆಯೇ ಆಗುತ್ತಾಳೆ. ಇವೆರಡು ಪಾತ್ರಗಳಲ್ಲಿಯ ಸೀತೆ ರಾಮನಿಗೆ ಏನಾಗಬೇಕು?

ವೈದಿಕ ವ್ಯವಸ್ಥೆ ಎತ್ತಿ ಹಿಡಿಯುವಲ್ಲಿ ಕ್ಷತ್ರಿಯನಿಂದ ಬ್ರಾಹ್ಮಣನಾಗುವ ಗುಂಗಿನಲ್ಲಿ ಭಾನಾಮತಿಗೊಳಗಾಗುವ ವಾಲ್ಮೀಕಿಯ ರಾಮ ಕಾಳಿದಾಸನ ಕಾಲಕ್ಕೆ ಸಾಮಾನ್ಯ ಅರಸ. ಭವಭೂತಿಯ ಕಾಲಕ್ಕೆ ಮಾನವೀಯತೆ ತುಂಬಿಕೊಂಡ ಅರಸು, ಮುಂದೆ ೧೦ನೇ ಶತಮಾನದ ಭಕ್ತಿ ಚಳುವಳಿಯ ಪ್ರಭಾವದಲ್ಲಿ ವಿಷ್ಣುವಿನ ಅವತಾರಿಯಾದ ರಾಮ ಭಾರತೀಯ ಭಾವನಾ ವಾದಿ ಪ್ರಜ್ಞೆಗೆ ಪ್ರಶ್ನಾತೀತನಾದ. ಮರ್ಯಾದಾ ಪುರುಷೋತ್ತಮನಾದ. ಇಂತಹ ರಾಮನ ಸೀತೆ ಪರಿತ್ಯಾಗಕ್ಕೊಳಗಾದಾಗ ಸೀತೆಯೆ? 'ಕರುಣಾಳು ರಾಘವನ ತಪ್ಪಿಲ್ಲ, ತಾನು ಹೆಣ್ಣಾಗಿ ಹುಟ್ಟಿದುದೆ ತಪ್ಪು' ಎಂದು ಗೋಗರೆಯುವ ವಾತಾವರಣದಲ್ಲಿ 'ರಾಮನಿಗೆ ಸೀತೆ ಏನಾಗಬೇಕು?' ಎಂದು ಕೇಳಿದ ಶ್ರೋತೃವಿನ ಪ್ರಶ್ನೆಗೆ ಯಾವ ಪಂಡಿತ ಉತ್ತರಿಸಿಯಾನು? ಯಾರು ಸಹಾನುಭೂತಿಯಿಂದ ಈ ಕಡೆ ನೋಡಿಯಾರು?

ಸೀತೆಯ ಸ್ವಯಂವರದಲ್ಲಿ ಶ್ರೀರಾಮ ಶಿವಧನುಸ್ಸನ್ನೇ ಎತ್ತಿದ. ಅದು ಸಹ ಕೌಶಿಕ ಮುನಿಯ ಆಣತಿಯಂತೆ. ಆದರೆ ಅದು ಪ್ರಾರಂಭದಲ್ಲಿಯೇ ಭಾರತೀಯ ಭಾವ ಜಗತ್ತಿನ ಅಪಶಕುನದಂತೆ ಮುರಿದುಬಿತ್ತು! ಇದು ಸೀತೆಯ ಬಾಳಿನ ಮುನ್ಸೂಚನೆಯೂ ಹೌದು. ಅಲ್ಲದೆ ರಾಜಕುಮಾರಿಯೋರ್ವಳ ಸ್ವಯಂವರದಲ್ಲಿ ಪಾಲ್ಗೊಂಡ ಯಾವ ರಾಜಕುಮಾರನೂ ಮದುವೆಯಾಗಲು ತನ್ನಪ್ಪನ ಅಪ್ಪಣೆ ಕೇಳಲಾರ. ಆದರೆ ರಾಮಾಯಣದ ರಾಮ ಸೀತೆಯನ್ನು ಮದುವೆಯಾಗಲು ಅಪ್ಪ ದಶರಥನ ಅಪ್ಪಣೆ ಕೇಳಿದ!

ಗಂಡನ ನೆರಳಾಗಿ ವನವಾಸವನ್ನೇ ತನ್ನ ವನ-ವಿಹಾರವನ್ನಾಗಿ ಮಾಡಿಕೊಂಡು ಹಿಂಬಾಲಿಸಿದ ಸೀತೆಗೆ ರಾಮ ಕೊಟ್ಟದ್ದೇನು? ಸೌಮ್ಯ ತಪಸ್ಸಿನ ಬದುಕು ನಡೆಸದೆ ರಾಕ್ಷಸರ ವಧೆಗಿಳಿದ. ವನ್ಯಜೀವಿಗಳ, ವನ್ಯಪ್ರದೇಶದ ರಾಕ್ಷಸರ ಜೀವನಕ್ಷೇತ್ರದ ಮೇಲೆ ವಿನಾಕಾರಣ ಅತಿಕ್ರಮಣ ಸಲ್ಲದು ಎಂಬ ಸೀತೆಯ ಜೀವಪ್ರೇಮದ ಮಾತುಗಳಿಗೆ, ಅವಳ ದಾಂಪತ್ಯ ಬದುಕಿಗೆ ಪೂರಕವಾಗುವ ಪ್ರಕೃತಿ ವರ್ಣನೆಗಳಿಗೆ ಕಿವುಡನಾಗಿ 'ಬೇಕಾದರೆ ನಿನ್ನನ್ನು



ಶಿವಕುಮಾರ ನಾಗವಾರ

ಮತ್ತು ಲಕ್ಷ್ಮಣನನ್ನು ಬಿಟ್ಟೇನು; ಆದರೆ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರ ರಕ್ಷಣೆಗಾಗಿ ಕೊಟ್ಟ ಮಾತು ತಪ್ಪುವುದಿಲ್ಲ' ಎಂದು ನಿಷ್ಠುರವಾಗಿ ನುಡಿದ.

ದಂಡಕಾರಣ್ಯದಲ್ಲಿ ತನ್ನ ಕಣ್ಣೆದುರೆ ವಿರಾಧನು ಸೀತೆಯ ಸೊಂಟಕ್ಕೆ ಕೈಹಾಕಿ ದೂರ ಎಳೆದುಕೊಂಡು ಹೋಗಿ ತನ್ನ ತೊಡೆಯ ಮೇಲೆ ಕೂರಿಸಿಕೊಂಡರೂ ರಾಮ ವ್ಯಗ್ರನಾಗದೆ ಲಕ್ಷ್ಮಣನಿಂದ ವಿರಾಧನ ವಧೆ ಮಾಡಿಸುವಲ್ಲಿ ಗಂಡನ ಬಗ್ಗೆ ಸೀತೆಗೆ ಎಂತಹ ಭಾವನೆ ಬಂದಿರಬೇಕು? ಪರಪುರುಷನಿಂದ ಗಂಡನೆದುರೆ ಲೈಂಗಿಕ ಕಿರುಕುಳದ ಅವಮಾನಕ್ಕೆ ಬಲಿಯಾದರೂ ಗಂಡನ ನಿಷ್ಕ್ರಿಯತೆಯ ಬಗ್ಗೆ ಸೀತೆಯ ಸ್ಥಿತಿ ಏನಾಗಬೇಕು?

ರಾವಣನ ಅಪಹರಣದಲ್ಲಿ ಮತ್ತೊಮ್ಮೆ ಲೈಂಗಿಕ ಕಿರುಕುಳಕ್ಕೆ ಬಲಿಯಾದ ಸೀತೆಗೆ ಎಂತಹ ಅವಮಾನ! ವರ್ಷಗಟ್ಟಲೆ ರಾವಣನ ಅಶೋಕವನದಲ್ಲಿ ಕೈದಿಯಾಗಿದ್ದ ಸೀತೆಯನ್ನು ರಾಮ ಬಿಡುಗಡೆ ಮಾಡಿದ್ದು ತನ್ನ ಕುಲದ, ವಂಶದ ಮರ್ಯಾದೆಗಾಗಿ, ಸೀತೆಗಾಗಿ ಅಲ್ಲ. ಸಾರ್ವಜನಿಕವಾಗಿಯೆ ಪುರುಷಗತ್ತಿನಲ್ಲಿ ಹೇಳುತ್ತಾನೆ: 'ಭದ್ರೆ, ನಿನ್ನಲ್ಲಿ ನನಗೀಗ ಯಾವ ಆಸಕ್ತಿಯೂ ಇಲ್ಲ. ಪರಪುರುಷನಲ್ಲಿ ದೀರ್ಘಕಾಲದವರೆಗೆ ಇದ್ದ ಹೆಣ್ಣನ್ನು ಯಾವ ಗೌರವವಂತ ಸ್ವೀಕರಿಸಿಯಾನು? ದಶ ದಿಕ್ಕುಗಳತ್ತ ಎಲ್ಲಿ ಬೇಕಾದರೂ ಹೋಗು. ಬೇಕಾದರೆ ಲಕ್ಷ್ಮಣನನ್ನೋ ಭರತನನ್ನೋ ಜೀವನಕ್ಕಾಗಿ ಆಶ್ರಯಿಸು. ಇಲ್ಲವೆಂದರೆ ಸುಗ್ರೀವ, ವಿಭೀಷಣರನ್ನಾದರೂ ಆಶ್ರಯಿಸು. ಅಥವಾ ನಿನ್ನ ತವರು ಮನೆಗಾದರೂ ಹೋಗು.'

ಗಂಡನನ್ನೇ ದೈವವೆಂದು ಭಾವಿಸಿದ್ದ ಸೀತೆಗೆ ಎಂತಹ ಆಘಾತ! 'ನಿನಗಾಗಿ ನಾನು ನಿನ್ನನ್ನು ರಾವಣನ ಸೆರೆಯಿಂದ ಬಿಡಿಸಿದೆನೆಂದು ತಿಳಿಯಬೇಡ. ನನ್ನ ಕುಲದ, ವಂಶದ ಘನತೆಗೆ ಕುಂದು ಬರುತ್ತದೆ ಎಂದು ವಿಮುಕ್ತಿಗೊಳಿಸಿರುವೆ,' ಎಂದು ಹೇಳಿ ತಿರಸ್ಕರಿಸುವ ಗಂಡನನ್ನು ಸೇರಲು ಸಾರ್ವಜನಿಕರ ಸಮ್ಮುಖದಲ್ಲಿ ಅಗ್ನಿ ಪ್ರವೇಶ ಮಾಡಿ ತನ್ನ ಶುದ್ಧತೆಯನ್ನು ಡಂಗೂರ ಹೊಡೆದು ಹೇಳುವಂತಾಯಿತು ಸೀತೆಗೆ. ಅಷ್ಟೇ ಅಲ್ಲ ಒಬ್ಬ ಅಗಸನ ಮಾತುಗಳ ನೆಪದಲ್ಲಿ ಅಯೋಧ್ಯೆಯಿಂದ ತುಂಬು ಗರ್ಭಿಣಿ ಸೀತೆಯನ್ನು ಕಾಡಿಗೆ ಅಟ್ಟಿದ ಶ್ರೀರಾಮ!

ಕಾಡಿನ ಪ್ರಕೃತಿಯ ಮಡಿಲಲ್ಲಿಯ ವಾಲ್ಮೀಕಿ ಆಶ್ರಮದ ಆಶ್ರಯದಲ್ಲಿ ಲವ - ಕುಶರ ಸಾನ್ನಿಧ್ಯದಲ್ಲೂ ಮುಂದೆ ರಾಮನು ಸೀತೆಗೆ ಇರಗೊಡದೆ 'ನಿನ್ನ ಪರಿಶುದ್ಧತೆಯನ್ನು ಮತ್ತೊಮ್ಮೆ ಸಾಬೀತುಪಡಿಸಿ ಅಯೋಧ್ಯೆಗೆ ಬಾ' ಎಂದು ಕರೆಯುವುದರೊಂದಿಗೆ ಸೀತೆಯಿಂದ ಮಕ್ಕಳನ್ನು ಕಸಿದುಕೊಂಡ!

ಪತಿಯ ಪ್ರೇಮವಂಚಿತ ಸೀತೆ ತನ್ನ ಬದುಕಿನುದ್ದಕ್ಕೂ ರಾಮನಿಂದ ಆಳವಾದ ತಾತ್ಸಾರ, ಉಡಾಫೆ, ನಿರ್ಲಕ್ಷ್ಯ, ಉಪೇಕ್ಷೆ, ಪರಿಹಾಸ್ಯ, ತಾಟಸ್ಥ್ಯ ಹಾಗೂ ಅವಮಾನಕ್ಕೆ ಒಳಗಾಗಿ ಅಂತ್ಯದಲ್ಲಿ ತನ್ನ ತಾಯ್ತನದ ಪ್ರೇಮಕ್ಕೂ ಎರವಾಗುವಂತೆ ಪುರುಷರೂಪದ ರಾಮ ತನ್ನ ಸನಾತನ ಮೌಲ್ಯದ ಅಂತಿಮ ರಾಮ-ಬಾಣ ಸೀತೆಯ ಮೇಲೆ ಪ್ರಯೋಗಿಸಲು ನೆಲದಲ್ಲಿ ಹುಗಿದುಹೋಗದೆ ಬೇರೆ ದಾರಿಯೇ ಸೀತೆಗುಳಿಯಲಿಲ್ಲ.

ಇಂತಹ ನಿಷ್ಠುರ, ಕಠೋರ ರಾಮನನ್ನು ಪ್ರೇಮಮಯಿ ವಾಲ್ಮೀಕಿ ರಾಮಾಯಣದ ಸೀತೆ ರಾಮನಿಗೆ 'ಪುರುಷ ರೂಪದ ಸ್ತ್ರೀ'ಯೆಂದು, 'ತನ್ನ ಹೆಂಡತಿಯನ್ನು ಇತರರಿಗೆ ಕೊಡುವ ಶೈಲೂಷ ನಟನೆಂದು' ಮೂದಲಿಸಿದರೆ ಸನಾತನಿಗಳಲ್ಲಿ ಸಿಕ್ಕಿಹಾಕಿಕೊಂಡ ಸೀತೆ 'ಕರುಣಾಳು ರಾಘವನ ತಪ್ಪಲ್ಲ, ತಾನು ಹೆಣ್ಣಾಗಿ ಹುಟ್ಟಿದ್ದುದೇ ತಪ್ಪು' ಎಂಬ ನಿರ್ಧಾರಕ್ಕೆ ಬರುವ ಪಂಚಕನ್ಯೆಯರಲ್ಲೊಬ್ಬಳಾದ 'ಮಹಾಸತಿ' ಸೀತೆ ನಮ್ಮ ಮುಂದೆ ನಿಲ್ಲುತ್ತಾಳೆ.

ಹಾಗಾದರೆ, ನಿಜವಾದ ಅರ್ಥದಲ್ಲಿ ರಾಮನಿಗೆ ಸೀತೆ ಏನಾಗಬೇಕು?

ಹಲವು ಭಾರತೀಯ ರಾಮಾಯಣಗಳಲ್ಲಿ ವಾಲ್ಮೀಕಿ ಮೂಲದ ರಾಮಾಯಣ ಕೇಳಿಯೇ ಈ ಪ್ರಶ್ನೆ ಹುಟ್ಟಿದ್ದಿರಬಹುದು. ಇಂತಹ ರಾಮಾಯಣದ ರಾಮ ಬುದ್ಧನ ಪೂರ್ವದ ವರುಷಗಳ ಹಿಂದಿನ ರಾಮನಾಗಿದ್ದರೂ ರಾಮಾಯಣ ಮಾತ್ರ ಬುದ್ಧನ ನಂತರ ಅಯೋಧ್ಯೆ (ಉತ್ತರಪ್ರದೇಶ), ಕಿಷ್ಕಿಂಧೆ (ಮಧ್ಯಪ್ರದೇಶ) ಹಾಗೂ ಲಂಕೆಯ (ಮಧ್ಯಪ್ರದೇಶದ ಅಸೂರಘಡ) ಸುತ್ತದ ಜನಪದ ಹಾಡುಗಬ್ಬಗಳನ್ನು ಕವಿ ವಾಲ್ಮೀಕಿ ಒಟ್ಟುಗೂಡಿಸಿ ಸುಮಾರು ೧೨೦೦೦ ಶ್ಲೋಕಗಳ ಕಾವ್ಯರಚನೆಯ ಮುಖಾಂತರ ಪ್ರಕಟಿಸಲು ಇಲ್ಲಿಯ ಸೀತೆ ಸಕಲಜೀವಿಗಳ ಜೀವನಕ್ರಮ ಮನ್ನಿಸುವ ಸೀತೆ: 'ನಮಗೆ ಏನೂ ಮಾಡದವರ ವಿರುದ್ಧ ಬಾಣ ಪ್ರಯೋಗವೇಕೆ?' ಎಂದು ಗಂಡನನ್ನು ಪ್ರಶ್ನಿಸುವ, ತಿದ್ದುವ, ಸತಿ ಗಂಡನ ಸಮನಾಗಿ ತನ್ನ ಅಸ್ತಿತ್ವ ಗುರುತಿಸಿಕೊಳ್ಳುವ ಸೀತೆ ಭಾರತೀಯ ಬ್ರಾಹ್ಮಣ್ಯದಲ್ಲಿ ಸಿಕ್ಕಿಹಾಕಿಕೊಂಡು ಅಳುಮುಂಜಿಯಾಗಿ, ಪಂಚ ಪತಿವ್ರತೆಯರಲ್ಲೊಬ್ಬಳಾಗಿ ಪುರುಷ ಸಮಾಜದ ಎಲ್ಲಾ ದಬ್ಬಾಳಿಕೆಗಳಿಗೆ ತನ್ನ ಹಣೆಬರಹವನ್ನೇ ಹಳಿದುಕೊಳ್ಳುವವಳಾಗಿ ಮಾರ್ಪಾಡಾದ ಸೀತೆ ಮೂಲ ರಾಮಾಯಣದ ಸೀತೆಯಿಂದ ಬಹುದೂರ ಹೋದವಳು. ಕ್ರಿ.ಶ. ನಾಲ್ಕನೆಯ ಶತಮಾನದ ನಂತರ ದೈವತ್ವಕ್ಕೆ ಏರತೊಡಗಿದ ರಾಮ ಅನೇಕ-ಪ್ರಕ್ಷೇಪಗಳೊಂದಿಗೆ, ಮರ್ಯಾದಾ ಪುರುಷೋತ್ತಮನಾಗಿ, ಪುರುಷ ವ್ಯಾಘ್ರನಾಗಿ ಮೆರೆಯತೊಡಗಿದ. ಇದು ಮುಂದೆ ಸಂತ ಕವಿ ತುಲಸಿದಾಸನಿಂದ ಉತ್ತರಭಾರತದಲ್ಲಿ, ಮಹಾರಾಷ್ಟ್ರದ ಸಂತ ರಾಮದಾಸನಿಂದ ದಕ್ಷಿಣ ಭಾರತದಲ್ಲಿ ಉತ್ತೇಜನ ಪಡೆದುದನ್ನು ನೋಡುತ್ತೇವೆ.

ವಾಸ್ತುಶಿಲ್ಪಗಳ ನಿರ್ಮಾಣವು ಹಿಂದಿನ ಅರಸರ ಆಡಳಿತದ ಅವಿಭಾಜ್ಯ ಅಂಗ. ಹೀಗಾಗಿ ಸಹೋದರ ಭಾಷೆ, ಸಹೋದರ ಸಂಸ್ಕೃತಿ ಮೊದಲು ಮಾಡಿ ಪ್ರಕೃತಿ ನ್ಯಾಯದಂತೆ ನೆರೆದೇಶಗಳ ಮೇಲೆ ಆಕ್ರಮಣ ಮಾಡಿ ಸಂಪತ್ತು ಲೂಟಿ ಮಾಡುವುದು ಸಾಮ್ರಾಜ್ಯದ ವಿಸ್ತರಣೆಯ ಭಾಗವಾಗಿತ್ತು. ಇಂತಹ ವಾತಾವರಣದಲ್ಲಿ ಬಾಹುಬಲವುಳ್ಳವನೇ ಸರ್ದಾರ. ಬಸದಿ ದೇವಾಲಯಗಳಾಗಿ, ದೇವಾಲಯಗಳು ವಿಹಾರಗಳಾಗಿ, ವಿಹಾರಗಳು ಬಸದಿಯೋ ದೇವಾಲಯಗಳೋ ಆಗಿ, ಮತ್ತೆ ಇವೆಲ್ಲವೂ ಮಸೀದಿಗಳೋ ಗೋರಿಗಳೋ ಆಗಿ ಪರಿವರ್ತನೆಗಳಾದ ಭೂಸತ್ಯಗಳು ಇತಿಹಾಸದ ಗರ್ಭದಲ್ಲಡಗಿವೆ.

*ಕೋಟಿ ಕೋಟಿ ದೀಪ ಬೆಳಕು*
*ನದಿಯ ಜಲದ ಪದರ ಮೇಲೆ।*
*ಹೊಳಪು ಕಾಂತಿ ಬೀರಿ ನಿಲ್ಲೆ*
*ಬಾಬರನ ವಿಜಯ ಶೋಭೆ॥*
*ನೋಡಿ ಚೌಸಾ ಮುಗ್ಧನಾದೆ*
*ಲಕ್ಷ್ಮಿಯನ್ನು ನಾಚಿಸುತ್ತಾ।*
*ದೀಪಾವಳಿ ಚಂದ್ರ ಬೆಳಕು*
*ದೆಹಲಿ ಸೆರಗನ್ನಪ್ಪಿತು॥*

ಇದು ಬಾಬರನ ನಾಡಿನ ಹಿಂದುಗಳ ದೀಪಾವಳಿ ಕಂಡ ಕವಿ ಚೌಸಾನ ಕಾವ್ಯಲಹರಿ.

ಇಂತಹ ಬಾಬರನಿಗೆ
ಮುತ್ತಿನ ಹಾರವ ಜೋಡಿಸು ಎಲೆ ತಾಗಿ
ಬಂದನು ನೋಡು ಬಾಬರ್ ವೀರ।
ಕಂಕಣ ಬಂಧವ ಬಿಗಿಯಮ್ಮ ಎಲೆ ತಾಗಿ
ಬಂದನು ನೋಡು ಬಾಬರ ವೀರ॥

ದೀಪಾವಳಿ ಮಾರನೆ ದಿನ ಹಿಂದು ಹೆಂಗಳೆಯರು ಬಾಬರನಿಗೆ ಸಹೋದರನೆಂದು ಮಾಡುವ ರಕ್ಷಾ ಬಂಧನದ ಬಗ್ಗೆ ಇತಿಹಾಸದ ಜೊತೆ ಮೆಲುಕಾಡಿಸುವುದು ಜನಪದ ಲೋಕ.

ಇಂದಿನ ಹಿಂದುತ್ವವಾದಿ ಸಂಘಟನೆಗಳ ಕೈಯಲ್ಲಿ ರಾಜಕೀಯ ಪ್ರೇರಿತ ಉಗ್ರ ಭಾವನಾ ಲಹರಿಯ 'ಜೈ ಶ್ರೀರಾಮ' ಶಂಬೂಕ, ವಾಲಿಯರಂತೆ ಅಯೋಧ್ಯೆಯಲ್ಲಿ ಮಧ್ಯಕಾಲೀನ ಚರಿತ್ರೆ ಸರಿಪಡಿಸಲು ೧೯೯೨ರ ಡಿಸೆಂಬರ್ ೬ರಂದು ಮಸೀದಿಯನ್ನು ಧ್ವಂಸ ಮಾಡಿದ! ಇಂತಹ ಇಂದಿನ ಜೈ ಶ್ರೀರಾಮನಿಗೆ ಸೀತೆ ಏನಾಗಬೇಕು? ಮತ್ತೆ ಚಾರ್ವಾಕ ಕಿವಿಯಲ್ಲಿ ಕುಹಕ ಆಡುತ್ತಾನೆ: 'ರೂಪಾ ಕನ್ವರಳಂತೆ ಮಹಾಸತಿ ದೇವಾಲಯದಲ್ಲಿ ಪ್ರತಿಷ್ಠಾಪನೆಗೊಳ್ಳಬೇಕು!'

ಮೂಲತಃ 'ನೇಗಿಲ ಗೆರೆ' ಅರ್ಥದ ಸೀತೆ ಪುರುಷ ಸಮಾಜದಲ್ಲಿ ವ್ಯಕ್ತೀಕರಿಸಿ ''ಪವಿತ್ರ ಸೀತಾ, ಸನಿಹ ಬಾ; ನಿನ್ನನ್ನು ನಾವು ಗೌರವಿಸಿ ಪೂಜಿಸುತ್ತೇವೆ'' ಎಂಬ ಅಭಿಧಾನದ ಸೀತೆ. ಋಗ್ವೇದದ 'ರಾಮ'ನ (ಆನಂದಮಯ, ಹೊಳೆಯುವ, ಬಿಳಿ, ಶುಭ್ರ ಮುಂತಾದ ಅರ್ಥದಲ್ಲಿ ಗಂಡಸಿಗೆ ಕೊಡುವ ಹೆಸರು) ಜೊತೆ ಸೇರಿ ಹಾಡುಗಬ್ಬಗಳಲ್ಲಿ ವಿಹರಿಸಿ ರಾಮಾಯಣದಲ್ಲಿ ಸಂಸ್ಕಾರಗೊಂಡು ಬ್ರಾಹ್ಮಣ್ಯದಲ್ಲಿ ಶ್ರೀರಾಮ ಪುರುಷೋತ್ತಮನ ಮತ್ತು ಜೈ ಶ್ರೀರಾಮನ ನೆರಳಾಗಿ 'ಮಹಾಸತಿ' ಯಾದಂತಹವಳು! ಇವತ್ತಿನ ದಿನಮಾನಗಳಲ್ಲೂ ಸಹ 'ಸತಿ'ಯಾಗುವ ಸೀತೆಯರಿಗೆ ಲೆಕ್ಕವೇ ಇಲ್ಲ. ವ್ಯವಸ್ಥೆಯ ಪರವಾಗಿ ಸದಾ ನಿಲ್ಲುವ ತನ್ನಡಿಯಲ್ಲಿಯೆ ಎಲ್ಲಾ ಜನಾಂಗ ನಿಲ್ಲುವಂತೆ ಆಶಿಸುವ ನಾಗರ ಸಂಸ್ಕಾರದ ಚೌಕಟ್ಟು ಬುಡಕಟ್ಟು ಸಂಸ್ಕಾರಗಳಿಗೆ ನಿರ್ದಯಿಯಾಗಿ ತೊಡಿಸುವ ನಿರಂಕುಶ ಸರ್ವಾಧಿಕಾರದ ನಿರ್ದಯತೆ, ನಿಷ್ಕಾರುಣ್ಯದ ರಾಮನಿಗೆ, ಬಿಲ್ವಿದ್ಯೆ ಬ್ರಹ್ಮಾಸ್ತ್ರದ ಅಹಂಕಾರಿಗೆ ವ್ಯಕ್ತಿ ಸ್ತರದಲ್ಲಿ ಪ್ರೀತಿಸುವ ಸರ್ವರ ಜೀವನ ಕ್ರಮಗಳಿಗೆ ಮನ್ನಿಸುವ, ಪ್ರಕೃತಿಯಲ್ಲಿ ಒಂದಾಗಿ ಬಾಳುವ ಸೀತೆ ಏನಾಗಬೇಕು? ಇದೇ ಶ್ರೋತೃವಿನ ಮೂಲ ಪ್ರಶ್ನೆಯೇನೋ!

**ಶಿವಕುಮಾರ ನಾಗವಾರ**
ಪ್ರಾಚಾರ್ಯರು, ಆರ್.ಆರ್.ಕೆ. ಸಮಿತಿಯ ವಿಜ್ಞಾನ ಕಾಲೇಜು,
ಮಾಧವನಗರ, ನೌಬಾದ, ಬೀದರ - ೫೮೫ ೪೦೨

# ಸೆಲ್ಲಾಯಣ



''ದಯವಿಟ್ಟು ನಿಮ್ಮ ಸೆಲ್‌ಫೋನ್‌ಗಳನ್ನು ಬಂದ್ ಮಾಡಿ ಒಳಗೆ ಬನ್ನಿ. ಮೊಬೈಲ್ ಫೋನ್‌ಗಳಿಂದ ಧ್ವನಿವರ್ಧಕಗಳ ಕ್ಷಮತೆಗೆ ಹಾನಿಯುಂಟಾಗುತ್ತದೆ.''

ಪದೇ ಪದೇ ಧ್ವನಿವರ್ಧಕದ ಮೂಲಕ ಪ್ರೇಕ್ಷಕರನ್ನು ಕಾರ್ಯಕ್ರಮ ನಿರ್ವಾಹಕರು ಕೇಳಿಕೊಳ್ಳುತ್ತಲೇ ಇದ್ದರು. ಕಿಕ್ಕಿರಿದ ಸಭಾಂಗಣದಲ್ಲಿ ಪ್ರಸಿದ್ಧ ಕಾಲೇಜೊಂದರ ವಿದ್ಯಾರ್ಥಿನಿಯರು ನಾಟಕವೊಂದನ್ನು ಪ್ರದರ್ಶಿಸುವ ಕಾರ್ಯಕ್ರಮವಿದ್ದಿತು. ಸಭೆಯಲ್ಲಿ ಎಲ್ಲ ವಯಸ್ಸಿನ ಜನರೂ ಉಪಸ್ಥಿತರಿದ್ದರೆನ್ನಬಹುದು. ಆದರೂ ಯುವಜನಾಂಗದ ಪ್ರಾತಿನಿಧ್ಯವೇ ಹೆಚ್ಚೆನ್ನಬೇಕು. ಹರೆಯದ ವಿದ್ಯಾರ್ಥಿನಿಯರು ಪ್ರಸ್ತುತಪಡಿಸುವ ಕಾರ್ಯಕ್ರಮವೆಂದಮೇಲೆ ಕೇಳಬೇಕೇ!

ನಾಟಕವೇನೋ ಸಮಯಕ್ಕೆ ಸರಿಯಾಗಿ ಆರಂಭವಾಯಿತು. ವಿದ್ಯಾರ್ಥಿನಿಯರ ಅಭಿನಯ ಮೆಚ್ಚಬೇಕಾದ್ದು. ಪ್ರೇಕ್ಷಕರೆಲ್ಲರೂ ನಿಶ್ಶಬ್ದವಾಗಿ, ಪೀಠೋಪಕರಣದ ಅಂಚಿನಲ್ಲಿ ಕುಳಿತು, ಅತಿ ಆಸಕ್ತಿಯಿಂದ ಪಾತ್ರಧಾರಿಗಳ ಉತ್ಕೃಷ್ಟ ಮಟ್ಟದ ಅಭಿನಯವನ್ನು ಸವಿಯುತ್ತಿದ್ದರು. ''ಸ್ಪ್ಲಿಟ್ ಪರ್ಸನಾಲಿಟಿ ''ಯುಳ್ಳ ಯುವತಿಯೊಬ್ಬಳ ಕಥೆಯ ಮೇಲೆ ಆಧಾರಿತವಾದ ಇಂಗ್ಲಿಷ್ ನಾಟಕ. ಮುಖ್ಯ ಪಾತ್ರಧಾರಿ ಯುವತಿಯ ಅಭಿನಯವಂತೂ ಯಾವ ಅನುಭವೀ ನಟಿಯನ್ನೂ ಮೀರಿಸುವಂತಿತ್ತು.

ಇದ್ದಕ್ಕಿದ್ದಂತೆ ಧ್ವನಿವರ್ಧಕದಿಂದ 'ಕೊರ ಕೊರ' ಎಂಬ ಕರ್ಕಶ ಶಬ್ದ ಶುರುವಾಯಿತು. ಪಾತ್ರಧಾರಿಗಳು ಆಡುವ ಮಾತು ಒಂದೂ ಕೇಳಿಸದಾಯಿತು. ಆದರೂ ಪಾತ್ರಧಾರಿಗಳು ನಾಟಕದ ಬಿಸಿ ಇಳಿಯಬಾರದೆಂದು ನಟನೆಯನ್ನು ಮುಂದುವರೆಸಿದರು. ಆದರೆ ದುರದೃಷ್ಟವಶಾತ್ ಕೊರ ಕೊರ ಶಬ್ದವೇ ಹೆಚ್ಚಾಗಿ, ಮಾತುಗಳೇ ಕೇಳದಾದುವು. ಸಭಿಕರೆಲ್ಲರೂ ''ಲೊಚ್,ಲೊಚ್'' ಎನ್ನುತ್ತಾ ಧ್ವನಿವರ್ಧಕವನ್ನು ಶಪಿಸಿದರು.

ನಾಟಕವನ್ನು ನಿಲ್ಲಿಸಿ, ಪರದೆ ಎಳೆದು, ಸಭಾಂಗಣದ ದೀಪಗಳನ್ನೆಲ್ಲ ಹೊತ್ತಿಸಿ, ಧ್ವನಿವರ್ಧಕದ ವ್ಯವಸ್ಥಾಪಕ ಅತ್ತಿಂದಿತ್ತ ಕಾತರದಿಂದ ಓಡಾಡಿದ. ಎಲ್ಲ ವಯರುಗಳನ್ನೂ ಜಗ್ಗಿಸಿ ಪರೀಕ್ಷೆ ಮಾಡಿದ. ಮೆಯಿನ್ ಕನೆಕ್ಷನ್‌ನ ಬಳಿ ಹೋಗಿ ಟಾರ್ಚ್ ಬೆಳಕು ಬಿಟ್ಟು ನೋಡಿದ. ಮತ್ತೆ ಮೈಕ್ ಹಿಡಿದು ''ಒನ್,ಟೂ,ತ್ರೀ – ಮೈಕ್ ಟೆಸ್ಟಿಂಗ್, ಮೈಕ್ ಟೆಸ್ಟಿಂಗ್ – ಒನ್,ಟೂ,ತ್ರೀ'' ಎಂದು ಒರಲಿದ. ಏನಾದರೂ ಕೊರ ಕೊರ ಶಬ್ದ ನಿಲ್ಲದು. ಏಕೆ ಹೀಗಾಗುತ್ತಿದೆ ಎಂದು ಯಾರಿಗೂ ತಿಳಿಯದು.

ವ್ಯವಸ್ಥಾಪಕರಲ್ಲೊಬ್ಬರು ಮೈಕಿನ ಬಳಿ ಬಂದು, ಕೊರ ಕೊರ ಶಬ್ದದ ಮಧ್ಯೆಯೇ ಕ್ಷಮಾಪಣೆ ಕೋರುವ ಧ್ವನಿಯಲ್ಲಿ ಏನೋ ಹೇಳಿದರು. ಯಾರಿಗೂ ಪೂರ್ತಿ ಅರ್ಥವಾಗಲಿಲ್ಲ. ಸಭಿಕರೆಲ್ಲರೂ ಧ್ವನಿವರ್ಧಕದ ವ್ಯವಸ್ಥಾಪಕನನ್ನು ಧಾರಾಳವಾಗಿ ಮನಸಾರೆ ಯಾವ ಮುಚ್ಚುಮರೆಯೂ ಇಲ್ಲದೆ ಶಪಿಸಿದರು. ಯುವಕರಲ್ಲನೇಕರು ತಾಳ್ಮೆಗೆಟ್ಟು ಹೊರಗೆದ್ದು ಹೋಗಲಾರಂಭಿಸಿದರು. ಅಂತೂ ಎಲ್ಲರಿಗೂ ರಸಭಂಗವಾಯಿತು.

ಸುಮಾರು ಹದಿನೈದು ನಿಮಿಷಗಳ ತರುವಾಯ ಸ್ವಲ್ಪ ಶಾಂತಿ ಸ್ಥಾಪನೆಯಾಯಿತೆನ್ನಬೇಕು. ಎದ್ದು ಹೊರಗೆ ಹೋಗಿದ್ದವರೆಲ್ಲರೂ ಒಳಗೆ ಬರಲಾರಂಭಿಸಿದರು. ವ್ಯವಸ್ಥಾಪಕರೊಬ್ಬರು ಮೈಕಿನ ಬಳಿ ಬಂದು ಮೈಕನ್ನು ಟೊಕ್-ಟೊಕ್ಕೆಂದು ಮಿಡಿದು ನೋಡಿದರು. ಕೊರ ಕೊರ ಶಬ್ದವಿಲ್ಲ. ಮತ್ತೊಮ್ಮೆ ಕ್ಷಮೆ ಯಾಚಿಸಿದರು.

ಅವರು ಹೇಳಿದ ಕಾರಣ ಹೀಗಿತ್ತು. ಮೈಕಿನಲ್ಲಿ ಯಾವ ಲೋಪವೂ ಇರಲಿಲ್ಲ. ಧ್ವನಿವರ್ಧಕದ ವ್ಯವಸ್ಥಾಪಕನ ಯಾವ ದೋಷವೂ ಇಲ್ಲ. ಅವನು ತಂದಿಟ್ಟಿದ್ದ ಉಪಕರಣಗಳೆಲ್ಲವೂ ಕ್ಷಮತೆಯಲ್ಲಿ ಸರಿಯಾಗಿಯೇ ಇವೆ. ಆದರೆ ಮುಂಭಾಗದ ಪಂಕ್ತಿಯಲ್ಲಿ ಕುಳಿತ ಗಣ್ಯರೊಬ್ಬರು ತಮ್ಮ ಸೆಲ್‌ಫೋನನ್ನು ಆಫ್ ಮಾಡಿರಲಿಲ್ಲ. ಅವರಿಗೆ ಕರೆಯೊಂದು ಬಂದಾಗ ಮೆಲ್ಲನೆ ಎದ್ದು ಹೋಗಿ, ತೆರೆ ಮರೆಯಲ್ಲಿ ನಿಂತು ಫೋನಿನಲ್ಲಿ ಮಾತನಾಡುತ್ತಿದ್ದರು. ಸೆಲ್‌ಫೋನಿನ ವಿದ್ಯುಚ್ಛಕ್ತಿ ಅಲೆಗಳು ಸುತ್ತಮುತ್ತಲಿನ, ವಿದ್ಯುಚ್ಛಕ್ತಿಯಿಂದ ಕೆಲಸ ಮಾಡುವ ಉಪಕರಣಗಳ ಕ್ಷಮತೆಯಲ್ಲಿ ಅಡ್ಡಿ ತಂದೊಡ್ಡುತ್ತವೆಯಂತೆ. ಹೀಗಾಗಿ ಮೈಕ್ ಸರಿಯಾಗಿ ಕೆಲಸ ಮಾಡಲಿಲ್ಲ. ತೆರೆ ಮರೆಯ ಕತ್ತಲಲ್ಲಿ ನಿಂತು ತಮ್ಮ ಸೆಲ್‌ಫೋನಿನಲ್ಲಿ ಇನ್ನೂ ಗಳಹುತ್ತಲೇ ಇದ್ದ ಮಹನೀಯರನ್ನು ಯಾರೋ ಒಬ್ಬರು ಗಮನಿಸಿ ಹೇಳಿದಾಗ ತಮಗೆ ಏನೂ ಸಂಬಂಧವೇ ಇಲ್ಲ ಎಂಬಂತೆ, ಮಾತು ಮುಗಿದ ನಂತರ ನಿಧಾನವಾಗಿ ತಮ್ಮ ಸ್ಥಾನಕ್ಕೆ ಹಿಂತಿರುಗಿದರಂತೆ. ಅವರ ಫೋನ್ ಸಂಭಾಷಣೆಯ ಭರದಲ್ಲಿ ಅವರಿಗೆ ಸಭಾಂಗಣದಲ್ಲಿ ಆದ ಯಾವತ್ತೂ ಗೊಂದಲವಾಗಲೀ, ತೊಂದರೆಯಾಗಲೀ ತಿಳಿದೇ ಇಲ್ಲ. ತಮ್ಮ ಫೋನಿನ ಸಂಭಾಷಣೆಯಾದ ನಂತರ ಏನೂ ತಿಳಿಯದಂತೆ ತಮ್ಮ ಸ್ಥಾನದಲ್ಲಿ ಕುಳಿತ ಅವರು 'ಎರಡು ಅಂಕಗಳ ನಡುವೆ ತೆರೆ ಮುಚ್ಚಿದ್ದಾರೆ'ಎಂದುಕೊಂಡರಂತೆ!! ನಾಟಕ ಆರಂಭವಾಗುವ ಮುನ್ನ ಹಲವಾರು ಬಾರಿ ಪ್ರೇಕ್ಷಕರಲ್ಲಿ ವ್ಯವಸ್ಥಾಪಕರು ಸೆಲ್ ಫೋನಿನ ಬಗ್ಗೆ ಮಾಡಿಕೊಂಡ ಪ್ರಾರ್ಥನೆ

ಡಿ. ಟಿ. ಲೋಹಿತ್

ಅವರ ಕಿವಿಯನ್ನೇ ಮುಟ್ಟರಲಿಲ್ಲ, ಅಥವಾ ಮುಟ್ಟಿದರೂ ಅಷ್ಟೊಂದು ಭವ್ಯ ಉದಾಸೀನ. ಅವರ ಸೆಲ್ ಫೋನೇ ಅವರಿಗೆ ಎಲ್ಲಕ್ಕಿಂತ ಮುಖ್ಯ !!

ಈ ಸೆಲ್‌ಫೋನು ಒಂದು ಮಹೇಂದ್ರಜಾಲವೇ ಸರಿ. ಮಾರುಕಟ್ಟೆಗೆ ಬಂದಾಗ, ಸುಮಾರು ಒಂಭತ್ತು ಅಂಗುಲ ಉದ್ದವಾಗಿಯೂ, ಸಾಕಷ್ಟು ಭಾರವಾಗಿಯೂ ಇದ್ದ ಇದು, ಚಿಕ್ಕದಾಗುತ್ತ ಚಿಕ್ಕದಾಗುತ್ತಾ ಬಂದು, ಅತಿ ಕಡಿಮೆ ಭಾರವಾಗಿಯೂ, ಮುಷ್ಟಿಯೊಳಗೆ ಸಂಪೂರ್ಣವಾಗಿ ಅಡಗುವಂಥದಾಗಿಯೂ, ಇತ್ತೀಚೆಗೆ ಪೂರ್ಣ ವರ್ಣರಂಜಿತ ಪರದೆಯುಳ್ಳದ್ದೂ ಆಗಿದೆ. ಚಿಕ್ಕದಾದಷ್ಟೂ, ಹಗುರವಾದಷ್ಟೂ ಬೆಲೆ ಹೆಚ್ಚು. ಆಯಾ ನಗರದಲ್ಲಿಯೇ ಆಗಲೀ, ಜಿಲ್ಲೆಯಲ್ಲಿಯೇ ಆಗಲೀ, ರಾಜ್ಯ ಅಥವಾ ದೇಶ ಹಾಗೂ ಪ್ರಪಂಚದ ಯಾವ ಮೂಲೆಯಿಂದಲೇ ಆಗಲೀ, ಇದರ ಮೂಲಕ ಸುಲಭ ಸಂಪರ್ಕ ಮಾಡಬಹುದು. ಇದು ಬರಿಯ ಫೋನು ಮಾತ್ರವಲ್ಲ. ಗಡಿಯಾರ, ಫೋನ್ ನಂಬರ್‌ಗಳ ಪುಸ್ತಕ, ಅಲಾರಂ, ವಾಯ್ಸ ಮೆಯಿಲ್, ಕ್ಯಾಲ್ಕ್ಯುಲೇಟರ್, ಒಂದು ರೀತಿಯ ವೃತ್ತಪತ್ರಿಕೆ, ರೇಡಿಯೋ, ಟೆಲಿವಿಷನ್, ಚಾಟ್(ಹರಟೆ)ಯಂತ್ರ, ಟೆಲಿಗ್ರಾಮ್ ಯಂತ್ರ(ಎಸ್ ಎಂ ಎಸ್), ಕ್ರಿಕೆಟ್ ಮಾಹಿತಿದಾರ, ಜ್ಯೋತಿಷ್ಯಕಾರ, ಮೊಬೈಲ್ ಬ್ಯಾಂಕ್, ಸ್ಟಾಕ್ ಮತ್ತು ಷೇರ್‌ಗಳ ಮಾಹಿತಿದಾರ, ಆಮದು ರಫ್ತು ಮಾಹಿತಿದಾರ ಇನ್ನೂ ಏನೇನೋ!! ನೂರಾರು ಸವಲತ್ತುಗಳಿರುವ ಇದರಲ್ಲಿ ಇರುವುದು ಸಾಲದೆಂಬಂತೆ ಇತ್ತೀಚೆಗೆ ನಿಘಂಟು, ತರ್ಜುಮೆ ಸೌಲಭ್ಯ ಇನ್ನೂ ಹತ್ತು ಹಲವು ಸೌಕರ್ಯಗಳನ್ನು ಅಳವಡಿಸಲಾಗಿದೆ. ತುರ್ತು ಪರಿಸ್ಥಿತಿಯಲ್ಲಿ ಇದರಷ್ಟು ಉಪಯೋಗವಾಗುವ, ಉಪಕಾರಿ ಉಪಕರಣ ಮತ್ತೊಂದಿಲ್ಲ. ತಂತ್ರಜ್ಞಾನವು ಮನುಕುಲಕ್ಕೆ ನೀಡಿದ ಇದೊಂದು ವರವೇ ಸರಿ.

ಆದರೆ ಈ ಸೆಲ್‌ಫೋನು ಒಂದು ರೀತಿಯ ಶಾಪವೂ ಹೌದು ಎಂಬುದರಲ್ಲಿ ಸಂಶಯವಿಲ್ಲ.

ಇತ್ತೀಚಿನ ಒಂದು ವೃತ್ತಪತ್ರಿಕೆಯ ಸಮಾಚಾರದ ಪ್ರಕಾರ ಬೆಂಗಳೂರಿನಲ್ಲಿ ಇರುವ ಸ್ಥಾಯೀ ದೂರವಾಣಿ(ಲ್ಯಾಂಡ್‌ಲೈನ್)ಗಳಿಗಿಂತ ಸೆಲ್‌ಫೋನ್‌ಗಳ ಸಂಖ್ಯೆಯೇ ಹೆಚ್ಚು. ಈ ಮಾಹಿತಿಯು ಉಳಿದೆಲ್ಲ ನಗರಗಳ ವಿಷಯದಲ್ಲೂ ನಿಜವೆ ಇರಬಹುದು. ಸುಮಾರು ಐದು ವರುಷಗಳ ಹಿಂದೆ ಜನಪ್ರಿಯವಾಗಲು ಆರಂಭಿಸಿದ ಈ ಸೆಲ್‌ಫೋನು ಈಗ ಎಲ್ಲರ ಕೈಯಲ್ಲೂ ರಾರಾಜಿಸುತ್ತಿದೆ. ಖ್ಯಾತ ಉದ್ಯಮಿ ದಿ.ಧೀರೂಭಾಯ್ ಅಂಬಾನಿಯವರ ಕನಸು ''ಮೇರಾ ಸಪ್ನಾ-ಸಬ್‌ಕಾ ಅಪ್ನಾ'' ಸಾಕಾರವಾಗಿದೆಯೆನ್ನಬಹುದು. ಮುಷ್ಟಿಯಲ್ಲೇ ಜಗತ್ತನ್ನು ತಂದಿಡುತ್ತೇವೆನ್ನುವ ಸೆಲ್‌ಫೋನ್ ಕಂಪನಿಗಳೆಲ್ಲಾ ಒಬ್ಬರ ಮೇಲೆ ಒಬ್ಬರು ಬಿದ್ದು, ಒಬ್ಬರಿಗಿಂತ ಒಬ್ಬರು ಹೆಚ್ಚು ಸೌಕರ್ಯಗಳ ಆಮಿಷಗಳನ್ನು ಒಡ್ಡಿ, ಗಿರಾಕಿಗಳನ್ನು ಬಲೆಗೆ ಹಾಕಿಕೊಳ್ಳುವ ತಂತ್ರದಲ್ಲಿ ವ್ಯಸ್ತರಾಗಿದ್ದಾರೆ. ಇದರೊಡನೆ ಸೆಲ್‌ಫೋನಿನಿಂದ ಮಾಡುವ ದೂರವಾಣಿ ಕರೆಗಳ ದರಗಳು ಏರುತ್ತಲೂ, ಇಳಿಯುತ್ತಲೂ, ಸ್ಥಾಯೀ ದೂರವಾಣಿಗಳ ದರಗಳೊಡನೆ ಪೈಪೋಟಿ ಮಾಡುತ್ತಲೂ, ಗ್ರಾಹಕರನ್ನು ಚೆನ್ನಾಗಿ ಕುಣಿಸುತ್ತಿವೆಯೆನ್ನಲಡ್ಡಿಯಿಲ್ಲ.

ಯಾವ ನಗರ, ಊರು, ಹಳ್ಳಿಯಲ್ಲೇ ಆಗಲಿ, ಈ ಸೆಲ್‌ಫೋನು ಕೈಯಲ್ಲಿ ಹಿಡಿದು ಓಡಾಡುವ ಗಣ್ಯರಲ್ಲಿ ಕೆಲವರನ್ನು ಗಮನಿಸಿದಾಗ ಅಳಬೇಕೋ, ನಗಬೇಕೋ, ಅವರ ಅವಸ್ಥೆಯನ್ನು ನೋಡಿ ಪರಿತಪಿಸಬೇಕೋ ತಿಳಿಯುವುದಿಲ್ಲ(ಇವರನ್ನು ಅನುಕೂಲಕ್ಕಾಗಿ ''ಮೊಬೈಲಿ''ಗಳೆಂದು ಕರೆಯುತ್ತೇನೆ.)

ಈ ''ಮೊಬೈಲಿ''ಗಳಲ್ಲಿ ಕೆಲವರಿಗೆ ಯಾರಲ್ಲಿಯಾಗಲೀ ಮಾತನಾಡಲು ಹತ್ತು ಸೆಕೆಂಡುಗಳಿಗಿಂತ ಹೆಚ್ಚು ವ್ಯವಧಾನವಿರುವುದಿಲ್ಲ. ಅಷ್ಟರಲ್ಲಿ ಅವರಿಗೆ ಒಂದು ಕರೆಯೋ, ಒಂದು ಎಸ್‌ಎಮ್‌ಎಸ್ಸೋ, ಏನೋ ಒಂದು ಬಂದಿರುತ್ತದೆ. ಮುಷ್ಟಿಯಲ್ಲಿರುವ ಈ ಸೆಲ್‌ಫೋನನ್ನು ನೋಡುತ್ತಾ, ಅದರ ಗುಂಡಿಗಳನ್ನು ಒತ್ತುತ್ತಾ, ಎದುರಿಗಿರುವ ಮನುಷ್ಯನನ್ನು ಮರೆತುಬಿಡುತ್ತಾರೆ. ಯಾವುದರ ಮೇಲೆಯೂ ಮನಸ್ಸನ್ನು ಕೇಂದ್ರೀಕರಿಸಲು ಇವರಿಗೆ ಸಾಧ್ಯವಾಗುವುದಿಲ್ಲ. ಯಾವಾಗಲೂ ಫೋನಿನ ಮೇಲೆಯೇ ಜ್ಞಾನ. ಎದುರಿನಲ್ಲಿರುವ ಮನುಷ್ಯನೊಡನೆ ಮಾತನಾಡುವುದಕ್ಕಿಂತ ಹೆಚ್ಚಾಗಿ ಫೋನಿನಲ್ಲಿಯೇ ಮಾತನಾಡುತ್ತಿರುತ್ತಾರೆ. ಇವರು ತಮ್ಮ ಒಂದು ಕೈಯಿಂದ ಯಾವ ಕೆಲಸವನ್ನೂ ಮಾಡಲಾರರು. ಏಕೆಂದರೆ ಆ ಕೈ ಸದಾಕಾಲ ಸಂಪೂರ್ಣವಾಗಿ ಸೆಲ್‌ಫೋನಿಗೆ ಮೀಸಲು.

ಎರಡನೆಯ ರೀತಿಯ ಮೊಬೈಲಿಗಳು ಒಂದು ಕ್ಷಣವೂ ಇದರ ಉಪಯೋಗ ಮಾಡದೆ ಇರಲಾರರು. ವಿಮಾನ, ಹಡಗು, ರೈಲು, ಕಾರು, ಆಟೋ, ಕಡೆಗೆ ಸ್ಕೂಟರ್ – ಯಾವುದರಲ್ಲಿ ಚಲಿಸುತ್ತಿರಲೀ, ಸೆಲ್‌ಫೋನಿನಲ್ಲಿ ಮಾತನಾಡುತ್ತಲೇ ಇರುತ್ತಾರೆ. ಸ್ಕೂಟರಿನ ಮೇಲೆ ಹೋಗುತ್ತಿರುವಾಗಲೂ ಕೊರಳನ್ನು ಓರೆಯಾಗಿಟ್ಟು ಕೊಂಡು, ತಮ್ಮ ಹೆಗಲು ಮತ್ತು ಕಿವಿಯ ಮಧ್ಯೆ ಸೆಲ್‌ಫೋನನ್ನು ಇಟ್ಟುಕೊಂಡು ಸರ್ಕಸ್ಸು ಮಾಡುತ್ತಲೇ ಮಾತನಾಡುತ್ತಿರುತ್ತಾರೆ. ವಾಹನವನ್ನು ರಸ್ತೆಯ ಪಕ್ಕಕ್ಕೆ ನಿಲ್ಲಿಸಿ ಫೋನಿನಲ್ಲಿ ಮಾತನಾಡುವುದು ತಮಗೂ, ರಸ್ತೆ ಉಪಯೋಗಿಸುವ ಇತರರಿಗೂ ಕ್ಷೇಮವೆಂಬುದು ಇವರಿಗೆ ಹೊಳೆಯುವುದೇ ಇಲ್ಲ. ದ್ವಿಚಕ್ರ ಅಥವಾ ಯಾವುದೇ ವಾಹನವನ್ನು ಚಾಲಿಸುತ್ತಿರುವಾಗ ಸೆಲ್ ಫೋನಿನ ಉಪಯೋಗ ಮಾಡಬಾರದೆಂಬ ಸರ್ಕಾರದ ಕಾಯಿದೆಯು ಸಿಗರೇಟು ಪ್ಯಾಕಿನ ಮೇಲೆ ಬರೆದಿರುವ ಎಚ್ಚರಿಕೆಯಷ್ಟೇ ಪ್ರಭಾವಶಾಲಿಯಾಗಿದೆಯೆಂಬುದು ಸರ್ಕಾರಕ್ಕೂ ಈ ವೇಳೆಗೆ ಸಂಪೂರ್ಣವಾಗಿ ಅರ್ಥವಾಗಿರಬೇಕು ! ಇದು ಸಾಲದೆಂಬಂತೆ ಮೊಬೈಲಿಗಳ ಅನುಕೂಲಕ್ಕಾಗಿ ಕಂಪನಿಗಳು ''ಹ್ಯಾಂಡ್ಸ್ ಫ್ರೀ'' ಎಂಬ ಅಟ್ಯಾಚ್‌ಮೆಂಟ್ ಒಂದನ್ನು ಒದಗಿಸಿದ್ದಾರೆ. ಕಿವಿಗೆ ಸಿಕ್ಕಿಸಿಕೊಂಡ ಒಂದು ವಯರಿನ ಸಹಾಯದಿಂದ ಸೆಲ್‌ಫೋನು ಜೇಬಿನಲ್ಲಿದ್ದಂತೆಯೇ ಮಾತನಾಡಬಹುದು. ಇದರಿಂದಾಗಿ ವಾಹನಗಳನ್ನು ಓಡಿಸುತ್ತಲೇ, ಯಾರಿಗೂ ತಿಳಿಯದಂತೆ ಸೆಲ್‌ಫೋನಿನಲ್ಲಿ ಮಾತನಾಡುತ್ತಾ, ಪೊಲೀಸರನ್ನು ಮೋಸಮಾಡಬಹುದು !



ಕೆಲವು ದಿನಗಳ ಹಿಂದೆ ಒಬ್ಬ ರಿಯಲ್ ಎಸ್ಟೇಟ್

ಮಹಾನುಭಾವರನ್ನು ಭೇಟಿ ಮಾಡಬೇಕಿತ್ತು. ಅವರು ನಿಗದಿಪಡಿಸಿದ ಸಮಯಕ್ಕೆ ನಾನು ಹೋದಾಗ, ಅಕಸ್ಮಾತ್ತಾಗಿ ಮುನ್ಸೂಚನೆಯಿಲ್ಲದೆ ಅವರ ಬಳಿಗೆ ಐದು ಜನ ಅವರ ವ್ಯಾಪಾರದಲ್ಲಿರುವವರೇ ಬಂದು ಕುಳಿತಿದ್ದರು. ಹೀಗಾಗಿ ಅನಿವಾರ್ಯವಾಗಿ ಅವರ ಮೀಟಿಂಗಿನಲ್ಲಿ ನಾನೂ ಒಬ್ಬನಂತೆ ಕುಳಿತುಕೊಳ್ಳಬೇಕಾಯಿತು. ಒಬ್ಬೊಬ್ಬರಲ್ಲಿಯೂ ಒಂದೊಂದು ಸೆಲ್‌ಫೋನು – ಇಬ್ಬರಲ್ಲಿಯಂತೂ ಎರಡೆರಡು ಇದ್ದವು. ಸುಮಾರು ಒಂದು ಘಂಟೆಯ ಮೀಟಿಂಗಿನಲ್ಲಿ ಎಲ್ಲರೂ ಸೇರಿ ಐದು ನಿಮಿಷ ವಿಚಾರ ವಿನಿಮಯ ಮಾಡಿರಬಹುದು. ಒಬ್ಬರು ಮಾತು ಆರಂಭಿಸಿ ಅರ್ಧವಾಕ್ಯ ಹೇಳುವಷ್ಟರಲ್ಲಿಯೇ ಯಾರಾದರೂ ಒಬ್ಬರೋ ಅಥವಾ ಇಬ್ಬರ ಸೆಲ್‌ಫೋನು ಗುಣುಗುಣಿಸುತ್ತಿತ್ತು, ಎಲ್ಲರ ಧ್ವನಿಯೂ ಎತ್ತರದ್ದೇ. ಅಂತೂ ಐದು ನಿಮಿಷದ ಮೀಟಿಂಗಿಗೆ ಒಂದು ಘಂಟೆ ಹಿಡಿಸಿತು. ಆರು ಜನ ಮೊಬೈಲಿಗಳು ಒಟ್ಟಿಗೇ ಸೇರಿದಾಗ ಏನಾಗಬಹುದೆಂಬ ಕಲ್ಪನೆ ಬಂದುದು ನನಗೆ ಆಗಲೇ!

ಸೆಲ್‌ಫೋನುಗಳ ಅಸ್ತಿತ್ವಕ್ಕೆ ಮುಂಚೆ ಈ ಮಹಾನುಭಾವರೆಲ್ಲರೂ ಹೇಗೆ ತಾನೇ ವ್ಯವಹಾರ ನಡೆಸುತ್ತಿದ್ದರೆಂಬುದೇ ಅರ್ಥವಾಗುವುದಿಲ್ಲ! ಪ್ರತಿ ನಿಮಿಷವೂ ಯಾರೊಡನೆಯಾದರೂ ವಿಚಾರ ವಿನಿಮಯ ಮಾಡಲೇಬೇಕಾದ ಅತ್ಯಂತ ಅಗತ್ಯವಿರುವ ಇಂತಹವರ ವ್ಯವಹಾರವು ಸೆಲ್‌ಫೋನಿನ ಗೈರುಹಾಜರಿಯಲ್ಲಿ ಇಷ್ಟು ಕಾಲವೂ ಯಶಸ್ವಿಯಾಗಿ ನಡೆದುದಾದರೂ ಹೇಗೆ?

ಕಛೇರಿಗಳಲ್ಲಿ, ಮನೆಗಳಲ್ಲಿ, ಸಿನಿಮಾ ಮಂದಿರಗಳಲ್ಲಿ, ಸಭಾಮಂಟಪಗಳಲ್ಲಿ, ಸಂಗೀತ ಕಛೇರಿಗಳಲ್ಲಿ, ನಾಟಕಮಂದಿರಗಳಲ್ಲಿ, ವಸ್ತುಪ್ರದರ್ಶನಗಳಲ್ಲಿ, ಅಂಗಡಿಗಳಲ್ಲಿ, ಹೋಟೆಲುಗಳಲ್ಲಿ, ಪೋಸ್ಟಾಫೀಸು - ಬ್ಯಾಂಕುಗಳಲ್ಲಿ, ಶಾಲಾ-ಕಾಲೇಜುಗಳಲ್ಲಿ, ಧ್ಯಾನ ಮಂದಿರಗಳಲ್ಲಿ, ಎಚ್ಚರವಿರುವಾಗ, ನಿದ್ರಿಸುತ್ತಿರುವಾಗ, ಅರೆ ನಿದ್ರೆಯಲ್ಲಿರುವಾಗ, ಸ್ವಪ್ನಾವಸ್ಥೆಯಲ್ಲಿ, ಎಲ್ಲಾ ರೀತಿಯ ವಾಹನಗಳಲ್ಲಿ, ನಡೆಯುತ್ತಿರುವಾಗ, ಕುಳಿತಿರುವಾಗ, ಸ್ನಾನ ಮಾಡುತ್ತಿರುವಾಗ–ಒಟ್ಟಿನಲ್ಲಿ ದಿನದ ಇಪ್ಪತ್ತನಾಲ್ಕು ಗಂಟೆಗಳಲ್ಲೂ ಮೊಬೈಲಿಗಳಿಗೆ ಈ ಸೆಲ್‌ಫೋನು ಜತೆಗಿರಬೇಕು. ಹೆಂಡತಿಯನ್ನಾದರೂ ಬಿಟ್ಟಾರು, ಇದಿಲ್ಲದೆ ಇವರ ಜೀವನ ಸಾಗದು.

ಸೆಲ್‌ಫೋನು ಬಹಳ ಸೂಕ್ಷ್ಮವಾದುದು. ಬಹುತೇಕ ಸಮಯ ತುಂಬ ಮೆಲ್ಲಗೆ ಮಾತನಾಡಿದರೂ ಮತ್ತೊಂದು ಕಡೆ ಇರುವವರಿಗೆ ಸ್ಪಷ್ಟವಾಗಿ ಕೇಳಿಸುತ್ತದೆ. ಆದರೆ ಕೆಲವರು ಮೊಬೈಲಿಗಳಿಗೆ ಮಾತ್ರ ತೀರ ಗಟ್ಟಿಯಾದ ಧ್ವನಿಯಲ್ಲಿಯೇ ಮಾತನಾಡುವ ಅಭ್ಯಾಸ. ಕೆಲವರಂತೂ ಬೆಳಗಿನ ಝಾವ ವಾಕಿಂಗಿನ ಸಮಯದಲ್ಲಿಯೂ ಸೆಲ್‌ಫೋನಿನಲ್ಲಿ ಗಟ್ಟಿಯಾಗಿ ಮಾತನಾಡುತ್ತಾ ರಸ್ತೆಯಲ್ಲಿರುವ ಎಲ್ಲ ಮನೆಯವರ ನಿದ್ರೆಯನ್ನೂ ಹಾಳುಗೆಡಹುತ್ತಾರೆ. ಆ ಫೋನನ್ನು ಕೆಳಗಿಟ್ಟು ಇನ್ನೂ ಸ್ವಲ್ಪ ಗಟ್ಟಿಯಾಗಿ ಅರಚಿದರೆ ಯಾರೊಡನೆ ಮಾತಾಡಬೇಕೋ ಅವರಿಗೆ ನೇರವಾಗಿಯೇ ಕೇಳಿಸೀತೇನೋ!! ಸಿನಿಮಾ ಮಂದಿರದಲ್ಲಾಗಲೀ, ಮತ್ಯಾವ ಸಭೆಯಲ್ಲಾಗಲೀ ಸೆಲ್‌ಫೋನನ್ನು ಆಫ್ ಮಾಡದೆ, ಕರೆ ಬಂದಾಗ ಹೊರಗೆ ಎದ್ದೂ ಹೋಗದೆ, ಪರಿಸರದ ಪರಿವೆಯೇ ಇಲ್ಲದೆ, ಕುಳಿತಲ್ಲೇ ಗಟ್ಟಿಯಾಗಿ ಮಾತನಾಡುತ್ತಾ ಎಲ್ಲರಿಗೂ ಮುಜುಗರ ತರುವ ಮಹಾನುಭಾವರ ಮೇಲೆ ವಿಪರೀತ ಕೋಪ ಬರುವುದು ಸಹಜವೇ!

ಪೆಟ್ರೋಲ್ ಪಂಪ್‌ಗಳಲ್ಲಿ, ವಿಮಾನ ನಿಲ್ದಾಣಗಳ ಕೆಲವು ಭಾಗಗಳಲ್ಲಿ, ಆಸ್ಪತ್ರೆಗಳಲ್ಲಿ, ಶಾಲಾ-ಕಾಲೇಜುಗಳಲ್ಲಿ, ಮತ್ತೆ ಕೆಲವು ಮುಖ್ಯ ಸ್ಥಳಗಳಲ್ಲಿ ಸೆಲ್‌ಫೋನನ್ನು ಆಫ್ ಮಾಡಿ ಒಳಗೆ ಬರಬೇಕೆಂಬ ಕಾಯಿದೆಯು ಕೆಲವು ಮೊಬೈಲಿಗಳ ಮೇಲೆ ಯಾವ ರೀತಿಯ ಪ್ರಭಾವವನ್ನೂ ಬೀರುವುದೇ ಇಲ್ಲ.

ಕಂಪ್ಯೂಟರ್ ಉಪಯೋಗಿಸುವ ಕೆಲವರಿಗೆ ದಿನವೆಲ್ಲಾ ''ಮೌಸ್''ಅನ್ನು (ಕಂಪ್ಯೂಟರ್ ಇಲಿ!)ಹಿಡಿದು ಹಿಡಿದು ಮೊಳಕೈ ಹಾಗೂ ಮಣಿಕಟ್ಟಿನ ಬಳಿ ಸತತ ನೋವು ಬರುವಂತೆ, ದಿನದಲ್ಲಿ ಸುಮಾರು ಹದಿನೆಂಟು ಗಂಟೆಗಳ ಕಾಲ ಸೆಲ್‌ಫೋನಿನ ಗುಂಡಿಗಳನ್ನು ಒತ್ತುತ್ತಲೇ ಕಾಲ ಕಳೆಯುವ ಕೆಲವು ಮೊಬೈಲಿಗಳ ಬೆರಳುಗಳಿಗೆ ಯಾವುದಾದರೂ ರೋಗ ಅಂಟಿಕೊಂಡರೂ ಆಶ್ಚರ್ಯವಿಲ್ಲ!!

ಕಂಪ್ಯೂಟರ್ ಪ್ರಪಂಚದಲ್ಲಿರುವಂತೆಯೇ ಸೆಲ್‌ಫೋನ್ ಜಗತ್ತಿನಲ್ಲಿಯೂ ವೈರಸ್‌ಗಳ ಹಾವಳಿ ಶುರುವಾಗಲಿದೆಯೆಂದು ಮಿತ್ರರೊಬ್ಬರು ಹೇಳಿದರು. ಈ ಕಂಪ್ಯೂಟರ್ ವೈರಸ್‌ಗಳ ನಿವಾರಣೆಗಾಗಿ ದೊರಕುವ ಆ್ಯಂಟಿವೈರಸ್ ವ್ಯಾಕ್ಸೀನುಗಳನ್ನು ತಯಾರಿಸುವ ಕಂಪನಿಗಳೇ ಈ ವೈರಸ್‌ಗಳನ್ನೂ ತಯಾರಿಸಿ ಆಗಾಗ್ಗೆ ನಿಯಮಿತ ಕಾಲಗಳಲ್ಲಿ ಹೊರಬಿಡುತ್ತಾರೆಂಬ ಸತ್ಯ ಅನೇಕರಿಗೆ ತಿಳಿದಿರಲಾರದು. ಈ ಆ್ಯಂಟಿವೈರಸ್ ವ್ಯಾಕ್ಸೀನುಗಳ ವ್ಯಾಪಾರವು ಕೋಟ್ಯಾಂತರ ಡಾಲರುಗಳ ವ್ಯವಹಾರ. ಇದರ ಬೇಡಿಕೆಯನ್ನುಂಟು ಮಾಡಲೆಂದೇ ಅವೇ ಕಂಪನಿಗಳು ವೈರಸ್‌ಗಳನ್ನು ತಯಾರು ಮಾಡುತ್ತಾರೆ. ಈ ಕಂಪನಿಗಳು ಈ ವಿಷಚಕ್ರವನ್ನು ತಮ್ಮ ಲಾಭಕ್ಕಾಗಿ ಬೇಕೆಂದೇ ಹುಟ್ಟುಹಾಕಿವೆ. ಇದರಂತೆಯೇ ಸೆಲ್‌ಫೋನಿನ ವೈರಸ್-ವ್ಯಾಕ್ಸೀನುಗಳ ವಿಷಚಕ್ರ ಆರಂಭವಾಗಲಿದೆಯೇನೋ!!

ಕೆಲವರಿಗಂತೂ ಈ ಸೆಲ್‌ಫೋನೆಂಬುದು ಒಂದು ರೀತಿಯ ''ಸ್ಟೇಟಸ್ ಸಿಂಬಲ್''. ಆಗಮಿಸಿದ ಕೂಡಲೆ ಎದುರಿನವರ ಮೇಜಿನ ಮೇಲೆ ತಮ್ಮ ಕಾರಿನ ಬೀಗದ ಕೈಯೊಡನೆ ಸೆಲ್‌ಫೋನನ್ನೂ ಇಡುವ ಪರಿಪಾಠವಿಟ್ಟುಕೊಂಡಿರುತ್ತಾರೆ. ಎಲ್ಲರೆದುರಿಗೂ ಒಂದೆರಡು ಕರೆಗಳನ್ನು ಮಾಡದಿದ್ದರೆ ಈ ಮೊಬೈಲಿಗಳ ಆಹಾರ ಜೀರ್ಣವಾಗದು. ಪೇಜರ್‌ಗಳ ಕಾಲ ಮುಗಿದ ಮೇಲೆ ಈಗ ಕೈಯಲ್ಲಿ ಸೆಲ್‌ಫೋನ್ ಹಿಡಿಯದವರಿಲ್ಲ. ಅಂತೂ ಸೆಲ್‌ಫೋನೆಂಬ ವರವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡು, ಬದುಕನ್ನು ಹಸನುಗೊಳಿಸಿಕೊಳ್ಳುವ ಪರಿಪಾಠ ಬಂದರೆ ಎಲ್ಲರಿಗೂ ಒಳಿತು.


**ಡಿ. ಟಿ. ಲೋಹಿತ್**

೩೩೯, ೩ನೇ ಮುಖ್ಯರಸ್ತೆ, ೩ನೇ ಫೇಸ್, ಜೆ.ಪಿ.ನಗರ

ಬೆಂಗಳೂರು - ೫೬೦ ೦೭೮



**'ಹೊಸತು' ಚಂದಾ ನೋಂದಣಿಗೆ ಮತ್ತು ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ**

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಾಮತ್ ಹೋಟೆಲ್ ಬಳಿ, ಹುಬ್ಬಳ್ಳಿ ರಸ್ತೆ ಸಿರ್ಸಿ - 581 401

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಲಾ ಭವನ ಆವರಣ, ಕಡಪಾ ಮೈದಾನ, ಧಾರವಾಡ - 580 001

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜೀಕೇ ಎಸ್ಟೇಟ್, ಬಸ್ ನಿಲ್ದಾಣದ ಎದುರು, ಹೊಸಪೇಟೆ - 583 201

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಾರ್ಡೋಜ್ ಲೈಬ್ರರಿ, ಗಾಂಧಿ ವೃತ್ತ, ಸ್ಟೇಷನ್ ರಸ್ತೆ, ಗದಗ - 582 101

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಪುರಭವನದ ಆವರಣ, ಚಾಮರಾಜ ಒಡೆಯರ್ ವೃತ್ತ, ಮೈಸೂರು - 570 001

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಸರ್ಕಾರಿ ಉರ್ದು ಪ್ರಾಥಮಿಕ ಶಾಲಾ ಆವರಣ, ಮುಖ್ಯರಸ್ತೆ, ಚಿತ್ರದುರ್ಗ-577501

**ನವಕರ್ನಾಟಕ ಪುಸ್ತಕ ಪ್ರದರ್ಶನ**
ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯ, ಮೊದಲನೆ ಮಹಡಿ, ಕಸ್ತೂರಬಾ ರಸ್ತೆ, ಬೆಂಗಳೂರು - 560 001

# ಕೂದಲಿನ ಮಹಿಮೆ



ಮನುಷ್ಯನ ದೈಹಿಕ ಜೀವನ ನಿರಂತರವಾಗಿ ನಡೆಯಲು ಪ್ರತಿಯೊಂದು ಅಂಗಗಳ ಕಾರ್ಯವೂ ಅತಿ ಮುಖ್ಯ. ಅವು ತಮ್ಮದೇ ಆದ ಕಾರ್ಯಗಳನ್ನು ನೆರವೇರಿಸಿಕೊಳ್ಳುತ್ತಾ ಆರೋಗ್ಯವನ್ನು ಸುಸ್ಥಿತಿಯಲ್ಲಿಡಲು ಪ್ರಯತ್ನಿಸುತ್ತವೆ. ಮನುಷ್ಯನಿಗೆ ವಯಸ್ಸಾದಂತೆಲ್ಲಾ ಅವನ ವಯಸ್ಸಿಗನುಗುಣವಾಗಿ ಅಂಗಗಳು ಕೂಡಾ ಬೆಳೆಯುತ್ತಿರುತ್ತವೆ. ಅಂಗಗಳ ಜೊತೆಗೆ ಅನಾವಶ್ಯಕ ಎಂದೇನೂ ಅನ್ನಿಸಲಾರದ, ಆದರೆ ನಿರ್ಜೀವವಾದ ಕೆಲವು ವಸ್ತುಗಳು ಕೂಡಾ ಬೆಳೆಯುತ್ತಿರುತ್ತವೆ. ಅವುಗಳಲ್ಲಿ ಕೂದಲು, ಉಗುರು ಮುಖ್ಯವಾದವುಗಳು. ಕೂದಲಿನ ಬಗ್ಗೆ ಸ್ವಲ್ಪ ಕೆದಕಿ ನೋಡಿದಾಗ ಕೆಲವೊಂದು ವಿಚಿತ್ರ ಸಂಗತಿಗಳು ನಮಗೆ ಗೋಚರಿಸುತ್ತವೆ.

ಕೂದಲು ಒಂದು ನಿರ್ಜೀವ ವಸ್ತು. ಅದು ಮಾನವನ ದೇಹದಲ್ಲೆಲ್ಲಾ ಬೆಳೆಯುತ್ತದೆ. ಅದು ವಯಸ್ಸಿಗನುಗುಣವಾಗಿ ಬದಲಾಗುತ್ತಿರುತ್ತದೆ ಎಂದು ವಿಜ್ಞಾನವು ತನ್ನದೇ ಆದ ನಿಯಮವನ್ನು ತಿಳಿಸುತ್ತದೆ. ಅವುಗಳ ಬಣ್ಣ, ಗುಣ, ಸ್ವಭಾವ, ಉಪಯೋಗ, ಆಕಾರ ಮೊದಲಾದವುಗಳ ಬಗ್ಗೆ ಕುತೂಹಲಕಾರಿ ಸಂಗತಿಗಳು ಕಾಣಸಿಗುತ್ತವೆ.

ಕೂದಲಿನ ಬಣ್ಣಗಳಲ್ಲಿ ಅನೇಕ ವಿಧಗಳಿವೆ. ಕಪ್ಪು ಕೂದಲು, ಬಿಳಿ ಕೂದಲು, ಕೆಂಪನೆಯ ಕೂದಲು, ತಿಳಿಗೆಂಪು, ತಾಮ್ರದ ಬಣ್ಣದವು. ಭಾರತೀಯರೆಲ್ಲರಿಗೂ ಕಪ್ಪು ಕೂದಲುಗಳಿದ್ದರೆ, ಅಮೇರಿಕಾ, ಇಂಗ್ಲೆಂಡ್‌ದಂತಹ ದೇಶದವರಿಗೆ ಕೆಂಪು ಕೂದಲುಗಳಿರುತ್ತವೆ. ಕೂದಲು ಯಾವಾಗಲೂ ವಾತಾವರಣ ಹಾಗೂ ಭೌಗೋಳಿಕ ಹಿನ್ನೆಲೆಯಿಂದ ಬರಬಹುದೆಂದು ನಂಬಲಾಗಿದೆ.

ಕೂದಲು ತಾನು ಬೆಳೆಯುವ ಸ್ಥಳಕ್ಕನುಗುಣವಾಗಿ ಕೆಲವು ಹೆಸರನ್ನು ಪಡೆದುಕೊಂಡಿದೆ. ತಲೆಯ ಮೇಲೆ ಕೂದಲು ಬೆಳೆದರೆ ಅವಕ್ಕೆ ತಲೆಗೂದಲು ಎಂದು ಕರೆಯುತ್ತೇವೆ. ಕಣ್ಣಿನ ಮೇಲ್ಭಾಗದಲ್ಲಿ ಹುಬ್ಬುಗಳೆಂದು ಕರೆದರೆ ಕಣ್ಣಿನ ಕವಚದ ತುದಿಗೆ ಬೆಳೆಯುವ ಕೂದಲಿಗೆ ಕಣ್ಣು ರೆಪ್ಪೆ ಎಂದು ಕರೆಯುತ್ತೇವೆ. ಮೂಗಿನ ಕೆಳಭಾಗದಲ್ಲಿ ಬೆಳೆದರೆ ಅವುಗಳನ್ನು ಮೀಸೆ, ಗಲ್ಲ, ಕುತ್ತಿಗೆಯ ಮುಂಭಾಗದಲ್ಲಿ ಬೆಳೆಯುವುದಕ್ಕೆ ಗಡ್ಡವೆಂದು ಕರೆಯುತ್ತೇವೆ. ದೇವನೊಬ್ಬ ನಾಮ ಹಲವು ಎಂದು ಹೇಳುವುದಿಲ್ಲವೇ? ಹಾಗೆಯೇ ಕೂದಲು ಮೂಲತಃ ಒಂದೇ ಆದರೂ ಅದರ ಉಗಮ ಸ್ಥಾನಕ್ಕನುಗುಣವಾಗಿ ಬೇರೆ ಬೇರೆ ಹೆಸರಿನಿಂದ ಕರೆಯುತ್ತಿದ್ದೇವೆ. ಒಟ್ಟಿನಲ್ಲಿ ಇದು ಸರ್ವವ್ಯಾಪಿ. ಇದಕ್ಕೆ ನಿಶ್ಚಿತವಾದ ಗಡಿ ಪ್ರದೇಶಗಳಿಲ್ಲ. ಇದು ಬೆಳೆಯಲ್ಲ. ಇದಕ್ಕೆ ಬೀಜವಿಲ್ಲ. ಬೆಳೆಸಲು ನೀರು, ಗೊಬ್ಬರ ಬೇಕಾಗಿಲ್ಲ. ಕೀಟನಾಶಕವನ್ನು ಸಿಂಪಡಿಸಿ ಸಲಹಬೇಕಾದುದೂ ಇಲ್ಲ. ಏನೂ ಇಲ್ಲದಿದ್ದರೂ ಇದು ಬೆಳೆಯುತ್ತದೆ. ದಿನಾಲೂ ಬೆಳೆಯುತ್ತಿರುತ್ತದೆ.



ಕೂದಲಿನ ಬಣ್ಣದ ಬಗ್ಗೆ ವಿಚಾರಿಸಿದ್ದಾಯ್ತು, ಅವುಗಳ ಸ್ವಭಾವದ ಬಗ್ಗೆ ಒಂದಿಷ್ಟು ನೋಡೋಣ. ಈ ಕೂದಲು ಕೆಲವರಲ್ಲಿ ಒರಟುತನದ್ದಾಗಿದ್ದರೆ ಇನ್ನೂ ಕೆಲವರಲ್ಲಿ ಮೃದುತನವನ್ನು ಹೊಂದಿರುತ್ತದೆ. ಒಬ್ಬರಲ್ಲಿ ಗುಂಗುರು ಕೂದಲುಗಳಿದ್ದರೆ, ಮತ್ತೊಬ್ಬರಲ್ಲಿ ಯಾವುದೇ ಸಂದರ್ಭಕ್ಕೂ ಒಗ್ಗಿಕೊಳ್ಳುವಂತಹ ಜಾಣ ಕೂದಲುಗಳಿರುತ್ತವೆ. ತಲೆಯ ಒರಟು ಕೂದಲುಗಳನ್ನು ಎಷ್ಟು ಸಲ ಬಾಚಿಕೊಂಡರೂ ನಾವು ಅಪೇಕ್ಷಿಸಿದಂತೆ ಕುಳಿತುಕೊಳ್ಳಲಾರವೇನೋ. ಮೃದು ಕೂದಲು ವಿಧೇಯತೆಯನ್ನು ತೋರುವ ಮಕ್ಕಳಂತೆ.



ಕೂದಲು ಕೆಲವು ಜನರಿಗೆ ಅಂದವನ್ನು ಹೆಚ್ಚಿಸುತ್ತದೆ. ಇದೊಂದು ಸ್ವಾಭಾವಿಕ ಸೌಂದರ್ಯವರ್ಧಕವಿದ್ದಂತೆ. ಮನುಷ್ಯನ ಕಾಂತಿಯನ್ನು ಹೆಚ್ಚಿಸುತ್ತದೆ. ಇನ್ನೂ ಕೆಲವರಿಗೆ ಅಸಹ್ಯವಾಗಿ ಕಾಣಿಸುತ್ತದೆ. ಅವನ ವಿಕಾರ ರೂಪದಲ್ಲಿ ಕೂದಲಿನ ಪಾತ್ರವೇ ಹಿರಿದಾಗಿರುತ್ತದೆ. ಅಂದರೆ ಕೂದಲು ಕೆಲವರಿಗೆ ವರದಾನವಾದರೆ ಕೆಲವರಿಗೆ ಶಾಪವೂ ಆಗಬಹುದು.

ಮಗು ಹುಟ್ಟಿದಂದಿನಿಂದಲೇ ಕೂದಲು ಬೆಳೆಯಲು ಪ್ರಾರಂಭಿಸುತ್ತದೆ. ಮಗುವಿಗೆ ಮೊದಲು ಕ್ಷೌರಿಕನಿಂದ ಕೂದಲು ಕಟ್ ಮಾಡಿಸುವುದಿಲ್ಲ. ತಮ್ಮ ಇಷ್ಟ ದೇವತೆಗೋ, ಮನೆಯ ದೇವರಿಗೋ ಹೋಗುತ್ತಾರೆ. ಅಲ್ಲಿ ಮಗುವಿನ ನಾಲ್ಕೈದು ಕೂದಲು ಕಿತ್ತು ಆ ದೇವರ ಹೆಸರಿನಲ್ಲಿ 'ಜವಳ' ಕಾರ್ಯಕ್ರಮ ನಡೆಸುತ್ತಾರೆ. ಹಾಗಾದರೆ ಈ ಜವಳ ಎಂಬ ಪದ್ಧತಿಯು ಕೂದಲಿದ್ದುದರಿಂದಲೇ ಹುಟ್ಟಿಬಂದಿತು. ಹಿಂದೆ ಯಾರೋ ಒಬ್ಬರು ಕಾಶಿಗೆ ಹೋಗಿ ಸಿಟ್ಟು ಬಿಟ್ಟು ಬಂದರು ಎಂಬ ಕಥೆಯನ್ನು ನಾವು ಕೇಳಿದ್ದೇವೆ. ಸಿಟ್ಟನ್ನು ಬಿಟ್ಟು ಬಂದರೋ ಇಲ್ಲವೋ ಗೊತ್ತಾಗೋಲ್ಲ. ಏಕೆಂದರೆ ಸಿಟ್ಟು ಎನ್ನುವುದು ಕಾಣುವುದಿಲ್ಲ. ಆದರೆ ಯಾರಾದರೂ, ''ನೀವು ತಿರುಪತಿಗೆ ಹೋಗಿ ಏನು ಬಿಟ್ಟು ಬಂದಿರಿ'', ಎಂದರೆ ನಿರ್ಭಯವಿಲ್ಲದೇ ಕೂದಲನ್ನು ಬಿಟ್ಟು ಬಂದೆವು ಎಂದು ಹೇಳಬಹುದು. ಇದು ಕಣ್ಣಿಗೆ ಕಾಣುವುದು.

ಮನುಷ್ಯನಿಗೆ ಕೂದಲುಗಳಿದ್ದುದರಿಂದ ವಿಜ್ಞಾನ ರಂಗದಲ್ಲಿ ಏನೆಲ್ಲಾ ಆವಿಷ್ಕಾರಗಳಾದವು ಗೊತ್ತೇ? ಅಬ್ಬಬ್ಬಾ! ಅವುಗಳನ್ನು ಪಟ್ಟಿ ಮಾಡಲು ಸಾಧ್ಯವೇ ಇರುತ್ತಿರಲಿಲ್ಲ. ಅನೇಕ ರೀತಿಯ ಶಾಂಪೂಗಳು, ಕೂದಲಿಗಾಗಿಯೇ ಸೋಪುಗಳು, ಎಣ್ಣೆಗಳು, ತೈಲಗಳು, ಕ್ಲಿಪ್ಸ್, ರಿಬ್ಬನ್ಸ್, ರಬ್ಬರ್, ಬಾಚಣಿಕೆ, ಕೂದಲಿಗೆ ಕಪ್ಪು ಬಣ್ಣ ಮೊದಲಾದವುಗಳು ಇಷ್ಟೆಲ್ಲಾ ಕೂದಲಿರುವುದರಿಂದಲೇ ಹುಟ್ಟಿಕೊಂಡವು. ಎಷ್ಟೋ ದೊಡ್ಡ ದೊಡ್ಡ ಕಂಪನಿಗಳಲ್ಲಿ ಇಂದು ಸ್ಪರ್ಧಾತ್ಮಕ ರೀತಿಯಲ್ಲಿ ಉತ್ಪಾದನಾ ಮಟ್ಟವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತಿವೆ. ಇವುಗಳಿಗೆಲ್ಲಾ ಮುಖ್ಯ ಬಂಡವಾಳವೆಂದರೆ ಕೂದಲು ಎಂದೇ ಹೇಳಬಹುದು. ಇಂದು ಪ್ರತಿ ನಗರಗಳಲ್ಲಿ ಹೇರ್ ಕಟಿಂಗ್ ಸೆಲೂನ್‌ಗಳು ನಾಯಿಕೊಡೆಗಳಂತೆ ಹುಟ್ಟಿಕೊಳ್ಳುತ್ತಲಿವೆ. ಎಷ್ಟೋ ಜನ ಕ್ಷೌರಿಕರಿಗೆ ನಿರುದ್ಯೋಗ ಸಮಸ್ಯೆ ಕಾಡುತ್ತಿಲ್ಲ. ಸೋಲುತ್ತೇನೆಂಬ, ನಷ್ಟ ಅನುಭವಿಸುತ್ತೇನೆಂಬ ಭಯ ಈ ದಂಧೆಯಲ್ಲಿಲ್ಲ. ಪರಿಶ್ರಮಕ್ಕೆ ತಕ್ಕ ಪ್ರತಿಫಲ. ಈ ಜನ ನೆಮ್ಮದಿಯಿಂದ ಉಸಿರು ಹಾಕುತ್ತಿರುವುದಕ್ಕೆ ಕಾರಣ ಮನುಷ್ಯನಿಗಿರುವ ಕೂದಲಿನಿಂದಲೇ.

**ಭೋಜರಾಜ ಸೊಪ್ಪಿಮಠ**

ದೇಹದ ಯಾವುದೇ ಅಂಗಕ್ಕೆ ಏನಾದರೂ ಊನವಾದರೆ ನಾವು ಕೂಡಲೇ ಡಾಕ್ಟರರ ಕಡೆ ಹೋಗುತ್ತೇವೆ. ಅದೂ ಸ್ಪೆಶಲಿಸ್ಟ್ ಡಾಕ್ಟರರ ಕಡೆ. ಹಾಗೆಯೇ ಕೂದಲಿಗೆ ಏನಾದರೂ ರೋಗ ಬರುವಂತಿದ್ದರೆ....? ಆಗಲೂ ಡಾಕ್ಟರರ ಕಡೆ ಹೋಗಬಹುದಾಗಿತ್ತು, ಅದಕ್ಕೂ ಸ್ಪೆಶಲಿಸ್ಟ್ ಡಾಕ್ಟರರು ಹುಟ್ಟಿಕೊಳ್ಳುತ್ತಿದ್ದರು. ಡಾ॥ ರೋಮರಾಜ್, ಕೂದಲು ತಜ್ಞರು ಎಂದೋ; ಡಾ॥ ಬಾಲರಾಜ್, ಹೇರ್ ಸ್ಪೆಶಲಿಸ್ಟ್ ಎಂದೋ ದೊಡ್ಡದಾಗಿ ಬೋರ್ಡ್ ಬರೆಸುತ್ತಿದ್ದರು. 'ಕೂದಲಿಗೆ ಬರುವ ಹೊಸ ರೋಗಗಳು ಹಾಗೂ ಅವುಗಳಿಗೆ ಪರಿಹಾರ' ಎಂಬ ವಿಷಯದ ಮೇಲೆ ಅಂತರರಾಷ್ಟ್ರೀಯ ಮಟ್ಟದಲ್ಲಿ ವಿಚಾರ ಸಂಕಿರಣ, ಪ್ರಬಂಧ ಮಂಡನೆ, ಚರ್ಚಾಕೂಟ, ಭಾಷಣಗಳು



ನಡೆಯುತ್ತಿದ್ದವು. ಅನೇಕ ಸ್ವಯಂಸೇವಾ ಸಂಘಟನೆಗಳು ಕೂಡಾ ಕೂದಲಿನ ಆಸ್ಪತ್ರೆ ತೆರೆಯುತ್ತಿದ್ದವು. ಇಲ್ಲವೇ ಉಚಿತ ಕೂದಲು ಶಿಬಿರವನ್ನು ನಡೆಸಿಕೊಡುತ್ತಿದ್ದವು. ಸರ್ಕಾರ ವರ್ಷದ ಯಾವುದೋ ಕೆಲವು ದಿನಗಳಲ್ಲಿ 'ಕೂದಲು ಸುರಕ್ಷತಾ ಸಪ್ತಾಹ' ಎಂದು ಆಚರಣೆಗಳು ನಡೆಯುವಂತೆ ಮಾಡಬಹುದಿತ್ತು. ಇಂಟರ್‌ವ್ಯೂನಲ್ಲಿ, ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಕೂದಲು ಸುರಕ್ಷತಾ ಸಪ್ತಾಹ ಎಂದು? ಎಂದು ಪ್ರಶ್ನೆ ಕೇಳಬಹುದಿತ್ತು. ಇದೆಲ್ಲಾ ಕೂದಲಿಗೆ ರೋಗ ಬರುವಂತಿದ್ದರೆ ಮಾತ್ರ. ಮುಖ್ಯವಾಗಿ ಕೂದಲಿಗೆ ರೋಗವೇ ಬರುವುದಿಲ್ಲವಲ್ಲ.

ಹಾಗಾದರೆ ಕೂದಲಿನಿಂದ ನಮಗೆ ಉಪಯೋಗವಾದರೂ ಏನು? ಎಂದು ಯಾರಾದರೂ ಕೇಳಿದರೆ ಉಪಯೋಗವನ್ನು ಹೇಳುವುದು ತುಸು ಕಷ್ಟವೇ. ಕುರಿಯ ಉಣ್ಣೆ ಅಂದರೆ ಕೂದಲಿನಿಂದ, ಮೊಲದ ಕೂದಲಿನಿಂದ ಏನೆಲ್ಲಾ ಮಾಡಲು ಕಂಡುಹಿಡಿದ ಈ ಮಾನವ ಮನುಷ್ಯನ ಕೂದಲಿನಿಂದ ಬೇರೆ ಏನನ್ನಾದರೂ ತಯಾರಿಸಬಹುದೇ ಎಂದು ಯೋಚಿಸಿದನೋ ಇಲ್ಲವೋ ಗೊತ್ತಿಲ್ಲ. ಕಸದಿಂದ ರಸ ತೆಗೆಯುವ ಕುಶಾಗ್ರಮತಿಗಳು ಈ ವಿಷಯದಲ್ಲಿ ಹಿಂದೆ ಬಿದ್ದಿದ್ದು ಕೂದಲಿನ ದೌರ್ಭಾಗ್ಯವೆಂದೇ ಹೇಳಬಹುದು. ಆದರೂ ಕೂದಲಿನಿಂದ ಕೆಲವು ಬೆರಳೆಣಿಕೆಯಷ್ಟು ಉಪಯೋಗಗಳು ಇವೆ. ಕೃತಕ ಜಡೆಗಳನ್ನು ಹೆಣ್ಣಿನ ಉದುರಿದ ಕೂದಲಿನಲ್ಲಿ ಉದ್ದನೆ ಇರುವವುಗಳನ್ನು ಆರಿಸಿ ಹೆಣೆದಿರುತ್ತಾರೆ. ಇವುಗಳನ್ನು ತಲೆಗೂದಲಿನೊಂದಿಗೆ ಕೂಡಿಸಿ ಹೆಣೆದುಕೊಂಡಾಗ ಯಾವುದೇ ರೀತಿಯ ವ್ಯತ್ಯಾಸ ಕಾಣುವುದಿಲ್ಲ. ಇವನ್ನು ಗ್ರಾಮ್ಯ ಭಾಷೆಯಲ್ಲಿ ಚೌರಿ ಕೂದಲು ಎಂದು ಕರೆಯುತ್ತಾರೆ. ಇದಲ್ಲದೇ ನಾಟಕ, ಸಿನಿಮಾಗಳಲ್ಲಿ ತಲೆಗೂದಲಿಗಾಗಿ ವಿಗ್, ಕೃತಕ ಗಡ್ಡ, ಮೀಸೆಗಳನ್ನು ತಯಾರಿಸಲು ಉಪಯೋಗಿಸುತ್ತಾರೆ. ಕೂದಲು ತಲೆಯನ್ನು ತಂಪಾಗಿಡುತ್ತದೆ ಎಂದು ಹೇಳುತ್ತಾರೆ. ಇದರಿಂದ ಬೇರೆ ಯಾರಿಗಾದರೂ ಉಪಯೋಗವಿದೆಯೇ? ಖಂಡಿತ ಇದೆ. ಹೇನು, ಶೀರುಗಳಿಗೆ ತಲೆಗೂದಲೇ ಆಶ್ರಯ ತಾಣ. ಹೇನು ತಲೆಗೂದಲಿನಲ್ಲಿ ಅಡಗಿ ಕುಳಿತಿರುತ್ತವೆ. ಅವನ್ನು ನಿವಾರಿಸಲು ಪರಿಣಾಮಕಾರಿ ಔಷಧಿಗಳಿವೆಯೆಂಬ ಜಾಹಿರಾತುಗಳು ಟಿ.ವಿ.ಗಳಲ್ಲಿ ಕಾಣಿಸಿಕೊಳ್ಳುತ್ತವೆ. ಕೂದಲಿದ್ದುದರಿಂದ ಇದೊಂದು ಸಮಸ್ಯೆ.



ಧಾರ್ಮಿಕವಾಗಿ ಕೂದಲಿನ ಬಗ್ಗೆ ಜಾತಿಯಿಂದ ಜಾತಿಗೆ ತನ್ನದೇ ಆದ ವಿಶಿಷ್ಟತೆ ಇದೆ. ಹಿಂದೂ ಜನಾಂಗದಲ್ಲಿ ಅದರಲ್ಲೂ ಜಂಗಮರಲ್ಲಿ ಉಪನಯನ ಎಂಬ ಕಾರ್ಯದಲ್ಲಿ ತಲೆಯನ್ನು ಪೂರ್ಣವಾಗಿ ಬೋಳಿಸಿ ಹಿಂದೆ ಜುಟ್ಟು ಬಿಡುತ್ತಾರೆ. ಅದರಂತೆ ಬ್ರಾಹ್ಮಣರಲ್ಲಿ ನಡೆಯುವ ದೀಕ್ಷಾ ಇಂಥದೇ ಕಾರ್ಯಕ್ರಮದಲ್ಲಿ ಇದೇ ರೀತಿಯ ಜುಟ್ಟು ಬಿಡಲಾಗುತ್ತದೆ. ಮುಸ್ಲಿಮರಂತೂ ಗಡ್ಡ ಪ್ರಿಯರು. ಉದ್ದನೆಯ ಗಡ್ಡವನ್ನು ನೋಡಿದರೆ ಇವರು ಮುಸ್ಲಿಮರೆಂದು ಗುರುತಿಸಬಹುದು. ಸಿಖ್ ಜನಾಂಗ ತಲೆಯ ಮೇಲೆ ಜಡೆ ಕಟ್ಟುವುದರೊಂದಿಗೆ ತಮ್ಮ ಧಾರ್ಮಿಕತೆಯನ್ನು ಎತ್ತಿ ತೋರಿಸುತ್ತಾರೆ. ಬ್ರಾಹ್ಮಣ ಸಮಾಜದಲ್ಲಿ ಮತ್ತೊಂದು ಸಂಸ್ಕೃತಿ ಇದೆ. ಅದೆಂದರೆ ಗಂಡ ಸತ್ತ ಹೆಣ್ಣಿಗೆ ಕೇಶಮುಂಡನ ಮಾಡಿಸುತ್ತಾರೆ. ತಂದೆ ಸತ್ತಾಗ ಮಗ ಕೂಡಾ ತಲೆ ಬೋಳಿಸಿಕೊಂಡು ತಂದೆಯ ಅಂತ್ಯ ಸಂಸ್ಕಾರ ನೆರವೇರಿಸುತ್ತಾನೆ.

ಒಂದು ವೇಳೆ ಮನುಷ್ಯನಿಗೆ ಕೂದಲು ಇಲ್ಲದೇ ಹೋಗಿದ್ದರೆ ಏನಾಗುತ್ತಿತ್ತು? ಎಂದು ವಿಚಾರಿಸುವುದಕ್ಕೂ ಕೂಡಾ ಭಯವಾಗುತ್ತದೆ. ಕೂದಲುಗಳಿಲ್ಲದೇ ಹೋಗಿದ್ದರೆ ಈ ಮೊದಲೇ ಹೇಳಿದಂತೆ ವಿವಿಧ ರೀತಿಯ ಶಾಂಪುಗಳು, ಸೋಪುಗಳು, ಎಣ್ಣೆಗಳು, ತೈಲಗಳು, ಹೇನು ನಿವಾರಕ ಔಷಧಿಗಳು, ವಿಗ್, ಹೇರ್‌ಪಿನ್, ಬಾಚಣಿಗೆ, ರಬ್ಬರ್, ಕ್ಲಿಪ್ಸ್, ಕೂದಲಿಗೆ ಕಪ್ಪು ಬಣ್ಣ, ರಿಬ್ಬನ್ ಹುಟ್ಟಿಕೊಳ್ಳುತ್ತಿರಲಿಲ್ಲ. ಹೆಣ್ಣುಮಕ್ಕಳಿಗೆ ಹೂಗಳೆಂದರೆ ಎಲ್ಲಿಲ್ಲದ ಇಷ್ಟ. ಕೂದಲಿಲ್ಲದಿದ್ದರೆ ಇಂತಹ ಸಂತೋಷಕ್ಕೆ ಕಲ್ಲು ಬೀಳುತ್ತಿತ್ತು. ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವು ಎಂಬ ಮಾತಿನಲ್ಲಿ ಜುಟ್ಟಿಗೆ ಮಲ್ಲಿಗೆ ಹೂವು ಎಷ್ಟೊಂದು ಅವಶ್ಯ ಎಂಬುದನ್ನು ತೋರಿಸಿಕೊಡುತ್ತದೆ.

ಹೆಣ್ಣುಮಕ್ಕಳಿಗೆ ಕೂದಲು ಎಂದರೆ ತುಂಬಾ ಇಷ್ಟ. ಉದ್ದನೆಯ ಕೂದಲು ಇದ್ದರೆ ಅಂತಹವರಿಗೆ ತುಸು ಗರ್ವವೂ ಜಾಸ್ತಿ. ಅವುಗಳನ್ನು ಹೆಣೆದುಕೊಳ್ಳುವುದು, ಹೊಸ ಹೊಸ ರೀತಿಗಳಲ್ಲಿ ಕಟ್ಟಿಕೊಳ್ಳುವುದು, ಅವುಗಳಿಗೆ ಕೇದಿಗೆ, ಸೇವಂತಿಗೆ ಇಲ್ಲವೇ ಚಂಡು ಹೂಗಳನ್ನು ಹೆಣೆದುಕೊಳ್ಳುವುದನ್ನು ಹಳ್ಳಿಗಳಲ್ಲಿ ಮಾತ್ರ ಕಾಣುತ್ತೇವೆ. ನೀಳವಾದ ಕೇಶರಾಶಿ ಎಂದು ಹಿರೋಯಿನ್‌ನನ್ನು ವರ್ಣನೆ ಮಾಡದ ಕನ್ನಡ ಕಾದಂಬರಿಗಾರ್ತಿಯರೇ ಇಲ್ಲ. ಅವರ ಕಾದಂಬರಿಯಲ್ಲಿ ಆ ಶಬ್ದ ಒಮ್ಮೆಯಾದರೂ ಬಂದು ಹೋಗಲೇಬೇಕು. ಆದರೆ ಇತ್ತೀಚೆಗೆ ಮಹಿಳೆಯರಿಗೂ ಕೂದಲಿನ ಮೇಲಿನ ವ್ಯಾಮೋಹ ಕಡಿಮೆಯಾಗಹತ್ತಿದೆ. ಬಾಬ್ ಕಟ್, ಬೇಬಿ ಕಟ್ ಎಂದೆಲ್ಲಾ ಕಟ್ ಮಾಡಿಸುತ್ತಾ ನವಜೀವನಕ್ಕೆ ಕಾಲಿಡುತ್ತಿದ್ದಾರೆ. ಅವರನ್ನು ನೀಳ ಜಡೆಯವಳೇ ಎಂದು ವರ್ಣಿಸುವ ಬದಲು ಗಿಡ್ಡ ಜಡೆಯವಳೇ, ಮೋಟು ಕೂದಲಿನವಳೇ, ಬಾಬ್ ಕಟ್‌ನವಳೇ, ಇಲಿ ಬಾಲದವಳೇ ಎಂದೆಲ್ಲಾ ವರ್ಣಿಸಬೇಕಾಗಿ ಬಂದಿದೆ.

ಕೂದಲನ್ನು ಉಪಯೋಗಿಸಿಕೊಂಡು ಅನೇಕ ಗಾದೆ ಮಾತುಗಳು, ಉದಾಹರಣೆಗಳು ಇವೆ. ಯಾವುದಾದರೊಂದು ಅವಕಾಶದಿಂದ ವಂಚಿತರಾಗಿದ್ದಲ್ಲಿ ನಾವು ಕೂದಲೆಳೆಯಷ್ಟರಲ್ಲಿ ತಪ್ಪಿಹೋಯಿತು ಎಂದು ಉದಾಹರಿಸುತ್ತೇವೆ. ಹಾಗೆಯೇ ಸಿಟ್ಟು ಬಂದಾಗ ಯಾರಿಗಾದರೂ 'ನೀನು ನನ್ನ ಕೂದಲು ಕೊಂಕಿಸಲಾರೆ' ಎಂದು ಬೆದರಿಸುತ್ತೇವೆ. ಮೀಸೆ ಇಲ್ಲದವ ಗಂಡಸಲ್ಲ, ಮೀಸೆ ಇದ್ದರೇನೇ ಅದು ಗಂಡಸಿನ ಪ್ರತೀಕ ಎಂಬಷ್ಟರ ಮಟ್ಟಿಗೆ ಮೀಸೆ ಅವಶ್ಯವೆನಿಸಿದೆ. ಪೌರುಷದಿಂದ ಮಾತನಾಡುವಾಗ ಮೀಸೆಯ ಮೇಲೆ ಕೈಹಾಕಿ ಮಾತನಾಡಿದರೆ ಅದು ಧೀರ, ಧೈರ್ಯವಂತರ ಲಕ್ಷಣ. ಸ್ಥಿತಿವಂತರು ಹೇಗೆ ಮಾಡಿದರೂ ಚೆನ್ನ ಅಲ್ಲವೇ? ಅದನ್ನೇ ನಾವು ಈ ರೀತಿ ಹೇಳುತ್ತೇವೆ. ಕೂದಲಿದ್ದಾಕೆ ಯಾವ ರೀತಿ ತುರುಬು ಕಟ್ಟಿದರೂ ಚೆಂದ ಎಂದು.

ಪೌರಾಣಿಕವಾಗಿ ಒಂದಷ್ಟು ಕೂದಲಿಗೆ ಸ್ಥಾನವಿದೆ ಎಂದೆನ್ನಬಹುದು. ಜಗತ್ತನ್ನು ಕಾಯುವ ಪರಶಿವ ತನ್ನ ಕೂದಲನ್ನು ಜಡೆ ಕಟ್ಟಿ ಅಲ್ಲಿ ತನ್ನ ಗಂಗೆಯನ್ನಿರಿಸಿಕೊಂಡಿದ್ದನೆಂಬುದು ಹಳೆಯ ಕಥೆ. ಈ ಜಡೆಯನ್ನೇ ಒಮ್ಮೆ ಸಿಟ್ಟಿನಿಂದ ಕಿತ್ತೊಗೆದಾಗ ಅದರಿಂದ ವೀರಭದ್ರ ದೇವರು ಹುಟ್ಟಿಬಂದನೆಂದು ಪುರಾಣಗಳು ಹೇಳುತ್ತವೆ. ಋಷಿಮುನಿಗಳು ಗಡ್ಡಬಿಟ್ಟು ಉದ್ದನೆಯ ಜಡೆಗಳನ್ನು ತಲೆಯ ಮೇಲೆ ಕಟ್ಟಿಕೊಳ್ಳುತ್ತಿದ್ದರೆಂದು ಕಲ್ಪನೆಯ ಚಿತ್ರದಲ್ಲಿ ಕಾಣುತ್ತೇವೆ. ದುಶ್ಶಾಸನ ದ್ರೌಪತಿಯ ಸೀರೆಯನ್ನು ಸೆಳೆದು ಅವಮಾನ ಮಾಡಿದಾಗ ದ್ರೌಪತಿಯು ತನ್ನ ಜಡೆಯನ್ನು ಹರವಿಕೊಂಡು ದುಶ್ಶಾಸನನನ್ನು ಕೊಂದು ಅವನ ರಕ್ತವನ್ನು ಕೂದಲಿಗೆ ಹಚ್ಚಿಕೊಂಡ ನಂತರವೇ ಬಾಚಿಕೊಳ್ಳುವೆನೆಂದು ಪ್ರತಿಜ್ಞೆಗೈದದ್ದು, ಭೀಮ, ದುಶ್ಶಾಸನನನ್ನು ಕೊಂದು ಅವಳ ಜಡೆ ಹೆಣೆದ ಮಹಾಭಾರತದ ಕಥೆ ಕೂಡಾ ಎಲ್ಲರಿಗೂ ತಿಳಿದಿರುವುದೇ ಆಗಿದೆ. ಹನ್ನೆರಡನೇ ಶತಮಾನದ ವಚನಕಾರರಲ್ಲಿ ಮುಖ್ಯರಾದ ಅಕ್ಕಮಹಾದೇವಿಯು ಮಲ್ಲಿಕಾರ್ಜುನನೇ ತನ್ನ ಗಂಡನೆಂದು ಹುಟ್ಟುಡುಗೆಯಲ್ಲಿದ್ದುದು, ಅವಳಿಗೆ ಕೇಶರಾಶಿಯೇ ಮಾನ ರಕ್ಷಕವಾಗಿದ್ದಿತು ಎಂಬುದನ್ನೂ ಕೇಳಿದ್ದೇವೆ.

ಕೂದಲಿದ್ದುದರಿಂದಲೇ ಹೇರ್ ಕಟಿಂಗ್ ಸೆಲೂನ್‌ಗಳು ಹುಟ್ಟಿಕೊಂಡವು ಎಂಬುದನ್ನು ನೋಡಿದ್ದೇವೆ. ಕೂದಲಿನಿಂದಲೇ ಅನೇಕ ರೀತಿಯ ಕಟಿಂಗ್‌ಗಳಿಗೆ ನಾಂದಿ ಹಾಡಿತು. ಹಿಪ್ಪಿ ಕಟಿಂಗ್, ಹಾಫ್ ಕಟಿಂಗ್, ಪಂಖ್ ಕಟಿಂಗ್, ಬೇಬಿ ಕಟಿಂಗ್, ಬಾಬ್ ಕಟಿಂಗ್, ಪೊಲೀಸ್ ಕಟಿಂಗ್, ಎನ್‌ಸಿಸಿ ಕಟಿಂಗ್, ಗಾಂಧಿ ಕಟಿಂಗ್ ಇನ್ನೂ ಅನೇಕ.

ಒಟ್ಟಿನಲ್ಲಿ ಕೂದಲು ಅನುಪಯುಕ್ತವೇನೂ ಅಲ್ಲ. ಅದು ಅವಶ್ಯ. ಅದು ಬಾಳ ಸಂಗಾತಿ. ನಮ್ಮ ಜೀವನ ಚಕ್ರದಲ್ಲಿ ಅದು ಕೆಲವೊಮ್ಮೆ ಪ್ರಮುಖ ಪಾತ್ರ ವಹಿಸುತ್ತದೆ. ಕೂದಲಿನ ಬಗ್ಗೆ ಚಿಂತನ ಮಂಥನ ನಡೆಸಿ ತಲೆಗೂದಲನ್ನೇ ಕಿತ್ತುಕೊಂಡ ಮಹನೀಯರುಗಳಿಗೆ ಈ ಸಂದರ್ಭದಲ್ಲಿ ಕೂದಲಿನ ಪರವಾಗಿ ಗೌರವವನ್ನು ಸೂಚಿಸಲಾಗಿದೆ. ಕೂದಲಿನ ಬಗ್ಗೆ ಆವಿಷ್ಕಾರಗಳು ಹುಟ್ಟಿಬರಲೆಂದು ಹಾರೈಸೋಣ.




**ಭೋಜರಾಜ ಸೊಪ್ಪಿಮಠ**

ಕಿರಿಯ ತರಬೇತಿ ಅಧಿಕಾರಿ, ಶ್ರೀ ಜಗದ್ಗುರು ತೋಂಟದಾರ್ಯ ಕೈಗಾರಿಕಾ ತರಬೇತಿ ಸಂಸ್ಥೆ, ಮಂಡಲಗಿರಿ, ಯಲಬುರ್ಗಾ ತಾಲೂಕು, ಕೊಪ್ಪಳ ಜಿಲ್ಲೆ - ೫೮೩ ೨೩೩




**ಜೈ**ಲು ಎಂದಾಕ್ಷಣ ಅಪರಾಧಿಗಳು, ನಾಲ್ಕುಗೋಡೆ ಮಧ್ಯೆ ಬದುಕಿನ ಕ್ಷಣಗಣನೆ ಮಾಡುವ ಕೈದಿಗಳ ಹತಾಶೆ, ನಿರಾಶೆ ಮತ್ತು ಚಿಂತೆಯ ಗೆರೆಗಳುಳ್ಳ ಮುಖಗಳು ಕಣ್ಣೆದುರು ನಿಲ್ಲುತ್ತವೆ. ಅವರ ಸಶ್ರಮಶಿಕ್ಷೆ, ಶಕ್ತಿಯ ಮಜೂರಿ, ಬೇಡಿಗಳ ಬಂಧಿಸ್ತ ಕೈಗಳು ಪ್ರತ್ಯಕ್ಷವಾಗತೊಡಗುತ್ತವೆ. ಅಪರಾಧ ಜಗತ್ತಿನ ದೊರೆಗಳೋ, ದಾಸರೋ ಆದ (?) ಅವರ ಹಣೆಯ ಮೇಲೆ ಒಮ್ಮೆ 'ಕೈದಿ' ಎಂಬ ಮುದ್ರೆ ಬಿತ್ತೋ ಸಮಾಜ ಅಂಥವರನ್ನು ಅಪರಾಧಿಯೆಂಬ ಹಳದಿ ಕಣ್ಣಿಂದಲೇ ನೋಡುತ್ತದೆ. ಶಿಕ್ಷೆ ಅನುಭವಿಸಿ ಹೊರಬಂದು ಸಹಜರಾದರೂ ಅಸ್ಪೃಶ್ಯರಂತೆ ನಾವು ಅವರನ್ನು ಗಮನಿಸುತ್ತೇವೆ. ಯಾವತ್ತೂ 'ಗುನ್ಹೆಗಾರ' ಅಂತಲೇ ಕಾಣುತ್ತೇವೆ. ಕೆಲವರು ಗುನ್ಹೆ ಮಾಡಿದ್ದವರಿದ್ದರೆ, ಇನ್ನು ಹಲವರು ಸಮಾಜದ ಕುತಂತ್ರ ಶಕ್ತಿಯ ತಾಕತ್ತಿನಿಂದ ಗುನ್ಹೆ ಹಣೆಪಟ್ಟಿ ಹಚ್ಚಿಕೊಂಡು ಒಳಕೋಣೆಗಳಲ್ಲಿ ಕೊಳೆಯುತ್ತಿರುತ್ತಾರೆ. ಇಂಥವರು ಪಡುವ ಕಷ್ಟ, ನೋವಿನ ಪ್ರಾಮಾಣಿಕ ಯತ್ನ ಇಲ್ಲಿಯ ಕೆಲ 'ಮರಾಠಿ ಕೈದಿಗಳ ಕವಿತೆಗಳು' ಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಮರಾಠಿಯ ಈ ಸಾಮಾನ್ಯ ಕೈದಿಗಳ ಕವನಸಂಕಲನ 'ಗಜಾ ಆಡಚ್ಯಾ ಕವಿತಾ' (ಸರಳುಗಳ ಮರೆಯ ಕವಿತೆಗಳು) ಅನ್ನು ದಲಿತ ಕವಿ ಉತ್ತಮ ಕಾಂಬಳೆ ಸಂಪಾದಿಸಿದ್ದಾರೆ.

ಈ ಕೈದಿಗಳಲ್ಲಿ ಹುದುಗಿದ ಕಾವ್ಯ ಶಕ್ತಿಯ ಬೆಳಕನ್ನು ಕಂಡು ಕಾವ್ಯಾಸಕ್ತರೆದುರು ಅವು ಬರಲು ಕಾರಣಕರ್ತರಾದವರು ಮರಾಠಿಯ ಜ್ಞಾನಪೀಠ ಪುರಸ್ಕಾರದ ಕುಸುಮಾಗ್ರಜ ಅವರು. ನಾಸಿಕದ ಕೇಂದ್ರ ಕಾರಾಗೃಹಕ್ಕೆ ಅವರು ಭೇಟಿ ಕೊಡುತ್ತಿದ್ದರು. ಕುಸುಮಾಗ್ರರ ಜತೆ ಖ್ಯಾತ ದಲಿತ ಕವಿ ಮತ್ತು 'ಸಕಾಳ' ಮರಾಠಿ ಪತ್ರಿಕೆಯ ಸ್ಥಾನಿಕ ಸಂಪಾದಕ ಉತ್ತಮ ಕಾಂಬಳೆ ಸಹ ಇರುತ್ತಿದ್ದರು. ಕುಸುಮಾಗ್ರಜರು ಬರುತ್ತಾರೆಂದರೆ ಅಲ್ಲಿಯ ಕೈದಿಗಳಿಗೆ ಎಲ್ಲಿಲ್ಲದ ಆನಂದ. ಆ ಸಂತೋಷವು ಕವಿಗೋಷ್ಠಿಗಳಲ್ಲಿ ಪರಿವರ್ತನೆಯಾಗುತ್ತಿತ್ತು. ಜೈಲಿನ ಅನುಭವಗಳು ಕಾವ್ಯರೂಪದಲ್ಲಿ ಪ್ರಸ್ತುತವಾಗಹತ್ತಿದವು. ಕುಸುಮಾಗ್ರಜರಿಗೆ ಜನರು ಪ್ರೀತಿಯಿಂದ ತಾತ್ಯಾಸಾಹೇಬ ಎಂದು ಸಂಬೋಧಿಸುತ್ತಿದ್ದರು. ಹಾಗೆಯೆ ಕೈದಿಗಳು ತಾತ್ಯಾಸಾಹೇಬರ ವಾತ್ಸಲ್ಯದ ಕೈ ಸ್ಪರ್ಶ ತಮಗಾಗಲಿ ಎಂದು ಆಶಿಸುತ್ತಿದ್ದರು. ಕುಸುಮಾಗ್ರಜರು ಅವರ ಬೆನ್ನು ಸವರಿ, ತಲೆ ಮೇಲೆ ಕೈಯಿಟ್ಟಾಗ ಪುಳಕಗೊಳ್ಳುತ್ತಿದ್ದರು. ಆ ಹುರುಪಿನಲ್ಲಿ ಕಾವ್ಯ ಸ್ಫುರಣೆಗೊಂಡು ಹೊರಹೊಮ್ಮತೊಡಗಿತು.

ಕವಿ ಕುಸುಮಾಗ್ರಜ ಮತ್ತು ಉತ್ತಮ ಕಾಂಬಳೆಯವರಿಗೆ ಕೈದಿಗಳ ಕಾವ್ಯ ಸಂಗ್ರಹವನ್ನು ಹೊರತಂದರೆ ಹೇಗೆ ಎಂಬ ಆಲೋಚನೆ ಕಾಡತೊಡಗಿತು. ಆಗಲೇ ನಾಸಿಕದ ಕೈದಿಗಳ ಕವಿತೆಗಳು ಕೈಯಲ್ಲಿದ್ದವು. ಉತ್ತಮ ಕಾಂಬಳೆ ತಮ್ಮ 'ಸಕಾಳ' ಪತ್ರಿಕೆಯಲ್ಲಿ ಒಂದು ಲೇಖನ ಬರೆದು ಕವಿತೆಗಳನ್ನು ಪ್ರಕಟಿಸಿದರು. ಅದಕ್ಕೆ ಅದ್ಭುತ ಪ್ರತಿಕ್ರಿಯೆ ಬಂದುದನ್ನು ಕಂಡು ಸಂಕಲನ ತರಲು ಮುಂದಾದರು. ಮಹಾರಾಷ್ಟ್ರ ರಾಜ್ಯ ಸಾಹಿತ್ಯ ಮತ್ತು ಸಂಸ್ಕೃತಿ ಮಂಡಳ(ಮುಂಬೈ)ದ ಅಧ್ಯಕ್ಷ ರಾ. ರಂ. ಬೋರಾಡೆ ಪ್ರಕಾಶನದ ಹೊಣೆ ಹೊತ್ತರು. ಅವರೇ ಉತ್ತಮ ಕಾಂಬಳೆಯವರಿಗೆ ಸಂಪಾದನೆ ಹೊಣೆ ಒಪ್ಪಿಸಿದರು. ಮಹಾರಾಷ್ಟ್ರದ ಎಲ್ಲ ಜೈಲುಗಳಿಗೆ ಪತ್ರ ಬರೆಯಲಾಯಿತು. ಅತ್ಯಂತ ಪ್ರೋತ್ಸಾಹದಾಯಕ ಪ್ರತಿಕ್ರಿಯೆ ಬಂತು. ಮುಖ್ಯವಾಗಿ ಔರಂಗಬಾದ, ನಾಸಿಕ, ಹರ್ಸೂಲ, ಪೈಠಣಗಳ ಜೈಲಿನ ಕೈದಿಗಳ ಕವಿತೆಗಳು ಆ ಸಂಕಲನದಲ್ಲಿವೆ. ಇನ್ನು ಕೆಲ ಕೈದಿಗಳು, ಕತೆ, ಕಾದಂಬರಿಗಳನ್ನು ಕಳಿಸಿದರು.

ಆ ಕತ್ತಲು ಕೋಣೆಯಲ್ಲಿ ಇಣುಕಿದಾಗ ಆ ಭಾವ ಜಗತ್ತು ಗೋಚರವಾಗುತ್ತದೆ. ಮಾನವೀಯ ಸಂವೇದನೆ ಜಾಗೃತಗೊಳ್ಳುತ್ತದೆ. ಮನುಷ್ಯ ಪ್ರೀತಿಯ ಹಸ್ತವನ್ನು ಅವರತ್ತ ಚಾಚಬಹುದು. 'ಮರಾಠಿ ಕೈದಿಗಳ ಕವಿತೆಗಳು' ಶೀರ್ಷಿಕೆ ಅಡಿಯಲ್ಲಿ ಕೆಲ ಕವಿತೆಗಳನ್ನು ಇಲ್ಲಿ ಕೊಡಲಾಗಿದೆ.

## ಮರಾಠಿ ಕೈದಿಗಳ ಕವಿತೆಗಳು

### ನಾವಿಲ್ಲಿ

**ಕ**ತ್ತಲೆಸಂಗ ಗೆಳೆತನ ನಮ್ಮದು ಇಲ್ಲಿ
ಮತ್ತೆ ಕತ್ತಲೆಯ ತಡೆಗೋಡೆಗಳಿರುತಾವೆ!
ಜೈಲು ಕೋಣೆಯ ಬೆಳಕಿಂಡಿಯಿಂದ
ಒಮ್ಮೊಮ್ಮೆ ಇಲ್ಲಿ ಬೆಳಕಿನ ಮರಿಗಳು ಆಡುತ್ತವೆ!
ನಮ್ಮ ವೇದನೆ ಜರತಾರಿ
ವ್ಯಥೆಗಳು ಜಬರದಸ್ತಾಗಿರುತಾವೆ!

ಕಣ್ಣಿಂದ ಹರಿದ ಬಿಸಿ ನೀರೂ ಸಹ
ನಮ್ಮ ರೆಪ್ಪೆಗಳ ಮರೆಯಲ್ಲಿ ಕೂತು ನಗುತ್ತದೆ!
ಕಾಲದ ಕ್ರೂರ ಪ್ರಹಾರ ತಾಳಲು
ಮನಸ್ಸು ಇಲ್ಲಿ ಹದಗೊಳ್ಳುತ್ತದೆ!
ಯಾರದೋ ನವಿರಾದ ನೆನಪಿಂದ
ಹೃದಯ ಮೊಲದಂತೆ ಮುದುಡಿ ಕಂಪಿಸುತ್ತದೆ!

ನಾವೆಂಥ ದರಿದ್ರರೆಂದರೆ, ಬೀದಿಯೊಳಗೆ ಮರ್ಯಾದೆಯಿಲ್ಲ
ಪಾಲಿಗೆ ಬಂದದ್ದು ಸೋಲೆ, ಗೆಲ್ಲುವ ಹರವಿಲ್ಲ!
ಚಂದಿರ ಕಳುವಾಗದ ರಾತ್ರಿಗಳೇ ಇಲ್ಲಿಲ್ಲ





ಚುಕ್ಕಿಗಳದೇನು ಬಿಡು ಚಂದಿರನಿಗೂ ಉಳಿಗಾಲವಿಲ್ಲ!
ಇದೆಂಥ ಕ್ಷುದ್ರ ಆಯುಷ್ಯವೆಂದರೆ, ಅಸ್ಮಿತೆಯ ಮಾತೇ ಇಲ್ಲ
ಯಾರ ಮೇಲಾದರು ಸೆಟಗೊಳ್ಳಬೇಕೆಂದರೆ, ಅಂಥ ಸಂಗಾತೀನೆ ಇಲ್ಲ!
ಕಲಮು ಮಾಡಿದ ದೇಹದಿಂದ ಅಂಕುರಗೊಳ್ಳುವ ಜೀವವಿಲ್ಲ
ಎಂದಾದರು ಕೈಯಾಡಿಸುವಂಥ ಭಾವಾವೇಶ ಈಗಿಲ್ಲ!
ಇಂಥ ಕೈಫಿಯತ್ತಿನ ಅನಾಥ ಗೆಳೆಯನೆ, ಇದು ರುಜುವಾತು ಅಲ್ಲ
ಕತ್ತಲೆಯನು ಭೇದಿಸುವಂಥ ಮಾತೀಗ ಇಲ್ಲವೇ ಇಲ್ಲ!

ಈಗಲೂ ಎಲ್ಲೋ ಅನಿಸುತಿದೆ, ಇದು ನಿನ್ನ ಮೋಸವಲ್ಲ
ಇಂದು ಮನದುಂಬಿ ಬದುಕಿಬಿಡು, ನಾಳೆಯ ಭರವಸೆಯಿಲ್ಲ!

■ **ಶಿವಾಜಿ ಸಾಲುಂಕೆ**, ಕೇಂದ್ರ ಕಾರಾಗೃಹ, ಔರಂಗಾಬಾದ

## ಹೇಳು ದೇವರೆ ಹೇಳು



ನಿರಂತರ ಬಂಧನದಲಿ
ಇಡೀ ಬದುಕನ್ನು ಕಳೆಯುವುದು
ಕಣ್ಣೊಳಗಿನ ನೀರು
ಧಾರಾಕಾರ ಹರಿಯುವುದು
ಹನಿ ಹನಿ ಇಂಗಿ
ಬದುಕು ಗದ್ಗದಿತವಾಗುವುದು
ಕರುಳ ಬಳ್ಳಿ ಸಂಬಂಧ ಎಲ್ಲವನ್ನೂ
ಇಲ್ಲಿಯೇ ಮರೆತು ಹೋಗುವುದು
ಕೇವಲ ಬರೀ ಕೇವಲ
ಬಾನನ್ನೇ ದಿಟ್ಟಿಸುವುದು
ನಿಸ್ಸೀಮ ದುಃಖದ ಬೆಟ್ಟವೇ
ಹೇಳು, ಅದ್ಹೇಗೆ ಗೆಲ್ಲೋದು ?
ಬದುಕಿನ ಹೊಂಡಗಳನ್ನೇನು
ಕಲ್ಲು ಮಣ್ಣಿಂದ ತುಂಬೋದೆ ?
ಕೇವಲ ಬರೀ ಕೇವಲ
ಬಾನನ್ನೇ ದಿಟ್ಟಿಸುವುದು
ಅಪರಾಧಿ ನಿರಪರಾಧಿ
ಹೇಗೆಂದು ನಿನಗೆ ಹೇಳೋದು ?
ಕೇಳಿಯೂ ಕೇಳಿಸದಂತೆಯೆ
ಅದೆಷ್ಟು ಬಾರಿ ಹೇಳೋದು
ಇರುಳ ಗಸ್ತು
ಹಗಲ ಹಿಂಸೆ
ಹೇಳು ದೇವರೆ ಹೇಳು
ಎಷ್ಟು ದಿನಾಂತ ಭೋಗಿಸೋದು ?
ಕೇವಲ ಬರೀ ಕೇವಲ
ಬಾನನ್ನೇ ದಿಟ್ಟಿಸುವುದು !

■ **ರಮೇಶ ಬಾಬುರಾವ ಖಾಡೆ**
ಕೇಂದ್ರ ಕಾರಾಗೃಹ, ಔರಂಗಾಬಾದ

## ಇಲ್ಲಿ



ಇಲ್ಲಿ,
ವಿದ್ರಾವಕ ಹೃದಯ
ಶೂನ್ಯ ದೃಷ್ಟಿ
ಮಿದು ಮನವು
ಆರ್ತ ಸ್ವರದ ಕರೆಗೆ ಹಸಿದಿದೆ.

ಇಲ್ಲಿ,
ಬಾಡಿದ ಚಹರೆ
ಒಣಗಿದ ದೇಹ
ಜಡಗೊಂಡ ಸ್ಪಂದನ
ಮಮತೆಯ ಸ್ಪರ್ಶಕ್ಕೆ ಹಾತೊರೆದಿವೆ.

ಇಲ್ಲಿ,
ಉಸುರುಗಟ್ಟಿದ ಮಾನಸಿಕತೆ
ಭಾವನೆಗಳ ದಾಹ
ಕಳಕೊಂಡ ಸಂಕಲ್ಪ
ನಿಜ ಅಸ್ತಿತ್ವವನ್ನು ಹುಡುಕುತ್ತಿದೆ.

ಇಲ್ಲಿ,
ಬಂಧಿಸ್ತ ಬದುಕು
ಮಬ್ಬಾದ ನಗು
ಬತ್ತಿದ ಅಳು
ಸ್ವಾತಂತ್ರ್ಯಕ್ಕೆಂದು ಯಾಚಿಸುತ್ತಿದೆ.

■ **ಫಿಲೀಪ್ ಭೀಮರಾವ ಶಿರಸಾಠ**, ಖುಲೆ ಜಿಲ್ಲಾ ಕಾರಾಗೃಹ, ಪೈಠಣ



## ಇತಿಹಾಸ

ನಾನ್ಯಾವಾಗ ಈ ಜಗತ್ತಿನ ಇತಿಹಾಸ ಬರೆಯುವೆನೋ
ಅಂದು ನನ್ನ ಮೇಲಾದ ಘೋರ ಅನ್ಯಾಯ ದಾಖಲಿಸುವೆನು !
ನಿರ್ದೋಷಿಗಳನ್ನು ದೋಷಿಗಳೆಂದು ಠರಾಯಿಸೋ
ವ್ಯವಸ್ಥೆಯ ಇತಿಹಾಸ ಬರೆಯುವೆನು !

ಸಮಾಜಗೈದ ಅತ್ಯಾಚಾರಗಳ ಪಟ್ಟಿಮಾಡಿ
ಗಾಥಾ ಹೇಳಿಯೇನು !
ಗೀತಾ, ಕುರಾನಗಳ ಖರೇ ಅರ್ಥ ಬರೆಯುವೆನು
ಪ್ರತಿಯೊಂದು ಗುನ್ಹೆ ಹಿಂದಿನ ಉದ್ದೇಶ ಬರೆದೇನು !

ಸೀತೆಯ ಮೇಲಾದ ಅನ್ಯಾಯ
ಸಕೀನಾಳ ಮೇಲಿನ ದೌರ್ಜನ್ಯ ಬರೆವೆನು
ಗುಡಿಯೊಳಗಿನ ಪ್ರಾರ್ಥನೆ
ಕುರಾನದೊಳಗಿನ ಆಯಾತ ಹೇಳುವೆನು !

ನಾನ್ಯಾವಾಗ ಈ ಜಗತ್ತಿನ ಇತಿಹಾಸ ಬರೆಯುವೆನೋ
ಆಗ ನನ್ನ ಮೇಲಾದ ಘೋರ ಅನ್ಯಾಯ ದಾಖಲಿಸುವೆನು !

■ ರಿಯಾಝು ಬಾದಶಹಾ ಮುಲ್ಲಾ, ಕೇಂದ್ರ ಕಾರಾಗೃಹ, ಔರಂಗಾಬಾದ

# ಹೊಸ ದಿಕ್ಕಿನ ಹುಡುಕಾಟದತ್ತ ಯುವ ಕವಿಗಳ ತಹತಹ

ವರ್ತಮಾನ ಕಾವ್ಯ ಜಗತ್ತಿನ ಜರೂರಿಯೆಂದರೆ ಜನರ ಪ್ರೀತಿ ಮತ್ತು ವಿಶ್ವಾಸವನ್ನು ಗಳಿಸಬಲ್ಲ ಕಾವ್ಯ. ವರ್ತಮಾನವನ್ನು ಎಚ್ಚರದಿಂದ ನೋಡುವ ಕಾವ್ಯ. ಒಂದು ಅಖಂಡ ಮಾನವೀಯ ದೃಷ್ಟಿ ಕಾವ್ಯದ ಧೋರಣೆಯಾಗಬೇಕಿದೆ. ಸಮಕಾಲೀನ ಸಮುದಾಯದ ತಲ್ಲಣಗಳಿಗೆ ಕವಿಯ ಆಂತರಿಕ ತಲ್ಲಣಗಳು ಸ್ಪಂದಿಸಬೇಕು. ಅಂಥ ಕಾವ್ಯ ಖಂಡಿತ ಸಾಮಾನ್ಯ ಓದುಗನನ್ನು ತಲುಪುತ್ತದೆ. ಹೊಸ ಪೀಳಿಗೆಯ ಕವಿಗಳಲ್ಲಿ ಅಪಾರ ಮಾನವೀಯ ಕಳಕಳಿಯಿಂದ ಬರೆಯುವವರ ಸಂಖ್ಯೆಗೇನು ಕೊರತೆಯಿಲ್ಲ. ಕಾಲದ ಒತ್ತಡಗಳು ಕಾವ್ಯಕ್ಕೆ ರೂಪ ಕೊಡಬೇಕು. ಕೈಗೆ ಸಿಗದ ವರ್ತಮಾನವನ್ನು ಹಿಡಿದಿಡುವುದೇ ಕಾವ್ಯದ ಉದ್ಯೋಗವಾಗಬೇಕು.

ವಿಚಾರ

'ಮಾಧ್ಯಮಗಳ ಅಬ್ಬರ, ಅವಸರದ ಜಗತ್ತು, ಅಶಾಂತಿ ತುಂಬಿದ ಬದುಕು, ಧರ್ಮ-ಮತಗಳ ಕೈಗೊಂಬೆಯಾದ ಸಮಾಜ ... ಹೀಗೆ ಎಲ್ಲ ಗಮನಿಸುತ್ತ ಹೋದರೆ ಆಧುನಿಕ ಯುಗದಲ್ಲಿ ಕಾವ್ಯ ತನ್ನ ಛಾಪನ್ನು ಉಳಿಸಿಕೊಂಡಿದೆಯೆ ? ಕಾವ್ಯ ಬದುಕಿದೆಯೆ ? ಎಂಬ ವಿಷಾದವೊಂದು ಪ್ರಶ್ನೆಯಾಗಿ ಕಾಡುತ್ತದೆ' ಎಂದು ಹಳಹಳಿಸುವವರ ಸಂಖ್ಯೆ ಈಗಿನ ದಿನಗಳಲ್ಲಿ ಹೆಚ್ಚಾಗಿದೆ. ಉದಾತ್ತ ಪ್ರೇರಣೆ ಹಾಗೂ ಕಾವ್ಯ ಕಲೆಯ ಪರಿಚಯ ಇಲ್ಲದೆ ಕಾವ್ಯ ರಚನೆಗೆ ತೊಡಗಿದವರಿಂದ ಕಾವ್ಯಕ್ಕೆ ಅನ್ಯಾಯವೇ ಆಗುತ್ತ ಬಂದಿದೆ, ಆಗುತ್ತಿದೆ. ಇದೆಲ್ಲದರಾಚೆ ಕಾವ್ಯದ ಸಹಜ ಗುಣಗಳನ್ನೆಲ್ಲ ಮೈಗೂಡಿಸಿಕೊಂಡು ಮೌನವಾಗಿ ಕಾವ್ಯ ರಚನೆಯಲ್ಲಿ ತೊಡಗಿದವರ ಸಂಖ್ಯೆ ಕನ್ನಡ ಕಾವ್ಯಲೋಕದಲ್ಲಿ ಕಡಿಮೆಯೇನಿಲ್ಲ. ಕಾವ್ಯ ಬೆಳವಣಿಗೆಯ ಹಲವಾರು ಘಟ್ಟಗಳಲ್ಲಿ ಕಾಲ ಮಹತ್ವದ ಪಾತ್ರ ವಹಿಸುತ್ತದೆ. ಹೊಸಗನ್ನಡ ಕಾವ್ಯವನ್ನು ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ-ದಲಿತ ಇತ್ಯಾದಿಯಾಗಿ ವಿಂಗಡಿಸಿದ್ದೇವಷ್ಟೆ. ಒಂದು ಕಾಲಕ್ಕೆ ಅತ್ಯಂತ ಜನಪ್ರಿಯ ಮಾಧ್ಯಮವಾದ ಕಾವ್ಯ ಬರ-ಬರುತ್ತ ಸಾಮಾನ್ಯ ಜನರ ಬದುಕಿನಿಂದ ದೂರ ಸರಿದದ್ದಕ್ಕೆ ಕಾರಣಗಳೇನೇ ಇರಬಹುದು; ಆದರೆ ಜನಸಮುದಾಯ ಹಾಗೂ ಕಾವ್ಯದ ನಡುವೆ ಅಂತರ ಸೃಷ್ಟಿಯಾದದ್ದು ಸತ್ಯವಾದ ಮಾತು. ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ನವೋದಯ ಕಾಲಘಟ್ಟದವರೆಗೆ ವ್ಯಾಪಕವಾಗಿ ಪ್ರಚಾರದಲ್ಲಿದ್ದ ಕಾವ್ಯ ಮಾಧ್ಯಮ ಕ್ರಮೇಣ ಜನಪ್ರೀತಿಯನ್ನು ಉಳಿಸಿಕೊಳ್ಳಲು ಅಸಮರ್ಥವಾದದ್ದು ಕಾವ್ಯಲೋಕದ ದುರಂತವೇ ಸರಿ.

ನವೋದಯ ಕಾವ್ಯ ಒಂದು ಹಂತವನ್ನು ತಲುಪಿದ್ದನ್ನು ಗಮನಿಸಿ ಡಾ॥ ವಿ. ಕೆ. ಗೋಕಾಕರು 'ಒಂದು ಪರಂಪರೆಯು ಪೂರ್ಣವಾದಾಗ ಇನ್ನೊಂದು ಹೊಳಹನ್ನು ಹಾಕದೆ ಉಕ್ತಿಗೆ ಸಮಗ್ರತೆಯೂ, ಕಾಂತಿಯೂ ಬರುವುದು ಕಠಿಣ' ಎನ್ನುವ ಮಾತನ್ನು ಹೇಳಿ ಹೊಸ ಕಾವ್ಯ ಪರಂಪರೆಯನ್ನು ಮುಕ್ತವಾಗಿ ಸ್ವಾಗತಿಸಿದ್ದರು. ನವ್ಯಕಾವ್ಯ ಮುಕ್ತಛಂದದ ಮಾದರಿಯಲ್ಲಿ ಹೊಸ ತೆರನಾದ ಕಾವ್ಯ ಕಟ್ಟಿಕೊಡುತ್ತ, ಮಣ್ಣಿನ ವಾಸನೆಯನ್ನು, ಆಡುಮಾತಿನ ಲಯವನ್ನು ಕಾವ್ಯಕ್ಕೆ ತರಬೇಕೆಂಬ ಧೋರಣೆಯನ್ನು ಪ್ರತಿ ಪಾದಿಸುತ್ತಲೇ 'ಬುದ್ಧಿ ಭಾಷೆಗಳ ವಿದ್ಯುದಾಲಿಂಗನ'ದಲ್ಲಿ ಲೀನವಾಗಿ, ರೂಪಕ, ಸಂಕೇತ, ಪ್ರತಿಮೆಗಳಲ್ಲಿ ಒಂದಾಗಿ, ರಚನೆ ಕ್ಲಿಷ್ಟವಾಗಿ ಕಾವ್ಯ ಕೆಲವೇ ಬುದ್ಧಿಜೀವಿಗಳ ಸೊತ್ತಾಗಿಬಿಟ್ಟಿತು. ಕವಿಯ ಆಂತರಿಕ ಹಳಹಳಿಕೆಗಳು ದಟ್ಟವಾದ ಸಂಕೇತ-ಪ್ರತಿಮೆಗಳ ಮೂಲಕ, ಕ್ಲಿಷ್ಟ ಭಾಷೆಯ ಮೂಲಕ ಹೊರಬಂದು ಕವಿತೆಗಳು ಹೆಚ್ಚು ಸಂಕೀರ್ಣ ವಾಗುತ್ತ ಸಾಮಾನ್ಯ ಜನರಿಂದ ದೂರವಾಗತೊಡಗಿದವು. ನವ್ಯಕಾವ್ಯದ ಹರಿಕಾರರಾದ ಗೋಪಾಲಕೃಷ್ಣ ಅಡಿಗರ ಕಾವ್ಯದ ಧೋರಣೆ ಹಾಗೂ ಪ್ರಾಮಾಣಿಕತೆಯನ್ನು ಅವರ ಹಿಂಬಾಲಕರೇ ಪ್ರಶ್ನಿಸತೊಡಗಿದರು. ಅಡಿಗರಿಂದ ಭಿನ್ನವಾಗಿ ಬರೆಯಬೇಕೆಂಬ ಛಲ ಹುಟ್ಟಿಕೊಂಡಿತು. ನವ್ಯರ ಕಾವ್ಯ ಹೆಚ್ಚು ಅಂತರ್ಮುಖಿಯಾಗತೊಡಗಿತ್ತು. ಅವರ ಬಚ್ಚಿಟ್ಟ ಭಾವನೆಗಳಿಗೆ ಅಭಿವ್ಯಕ್ತಿ ಕೊಡಲು ಪ್ರಯತ್ನಿಸಿದರು. ಹೀಗಾಗಿ ಕಾವ್ಯ ಜಟಿಲವಾಗತೊಡಗಿತು. ಇಂಥ ಸಂದರ್ಭದಲ್ಲಿ ನವ್ಯಕಾವ್ಯದ ವಿರುದ್ಧ 'ಬಂಡಾಯ' ಹುಟ್ಟಿಕೊಂಡಿತು. ಸಾಮಾಜಿಕ, ಸಮಕಾಲೀನ ರಾಜಕೀಯ ಸ್ಥಿತಿ-ಗತಿಗಳ ಪ್ರಭಾವದ ಅಡಿಯಲ್ಲಿ, 'ಕಾವ್ಯ ಸಾಮಾಜಿಕ ಅಗತ್ಯ ಎಂಬ ಧೋರಣೆ' ಬೆಳೆದು ಕಾವ್ಯ ಹೊಸಹಾದಿ ಕಂಡುಕೊಂಡಿತು. ಬೌದ್ಧಿಕ ಆಟಾಟೋಪಗಳಿಗಿಂತ ಸಾಮಾನ್ಯರ 'ಆಡುಮಾತು' ಕಾವ್ಯವಾಗಬೇಕೆಂಬುದು ಬಂಡಾಯದ ಆಶಯವಾಯಿತು. ಚಂದ್ರಶೇಖರ ಪಾಟೀಲ, ಸಿದ್ಧಲಿಂಗ ಪಟ್ಟಣಶೆಟ್ಟಿ, ಇಮ್ರಾಪುರ, ನಾಡಿಗ, ಚೆನ್ನಣ್ಣ ವಾಲೀಕಾರ, ಸರಜೂ ಕಾಟ್ಕರ್, ಅಲ್ಲಮಪ್ರಭು ಬೆಟ್ಟದೂರು, ಸತೀಶ ಕುಲಕರ್ಣಿ, ಶಂಕರ ಕಟಗಿ ಮುಂತಾದವರು ಈ ನಿಟ್ಟಿನಲ್ಲಿ ಮಹತ್ವದ ಕವಿತೆಗಳನ್ನು ನೀಡುತ್ತಲೇ ಬಂದಿದ್ದಾರೆ.

ಆದರೆ ಕೆಲವೊಮ್ಮೆ ಬಂಡಾಯ ಕಾವ್ಯ ಹೋರಾಟ, ಘೋಷಣೆಗಳ ಅಬ್ಬರದಲ್ಲಿ ಕಾವ್ಯಾಂಶ ಕಳೆದುಕೊಂಡು ವಾಚಾಳಿಯಾದಂತೆ ಭಾಸವಾಗುತ್ತದೆ. ಕಾವ್ಯದ ಅನುಭವಗಳ ತುರ್ತು ಸಾಂದರ್ಭಿಕ ಅನ್ನಿಸಿ, ಸಂದರ್ಭ ಮುಗಿದು ಹೋದ ಮೇಲೆ ಕಾವ್ಯ ತನ್ನ ಪರಿಣಾಮವನ್ನು ಕಳೆದುಕೊಂಡುಬಿಡುವ ಆತಂಕ ಈ ಕವಿತೆಗಳನ್ನು ಕಾಡತೊಡಗಿತು. 'ಖಡ್ಗವಾಗಲಿ ಕಾವ್ಯ, ಜನರ ನೋವಿಗೆ ಮಿಡಿವ ಪ್ರಾಣ ಮಿತ್ರ' ಇತ್ಯಾದಿ ಘೋಷಣೆಗಳ ಮೂಲಕ ಸಾಮಾನ್ಯ ಜನತೆಯನ್ನು ಸಮೀಪಿಸಲು ಯತ್ನಿಸುವ ಮೂಲಕ, ಈ ಪರಂಪರೆಯಲ್ಲಿ ಹುಟ್ಟಿಕೊಂಡ ಹಲವಾರು ಹೋರಾಟದ ಹಾಡುಗಳು ವ್ಯಾಪಕ ಪ್ರಚಾರ ಗಿಟ್ಟಿಸಿ ಕೊಂಡಿವೆ. ಇಂಥ ಕವಿತೆಗಳು ವ್ಯಂಗ್ಯ-ವಿಡಂಬನೆಗಳಲ್ಲಿ ಮೊನಚಾಗಿದ್ದು ಆಡುಮಾತಿನ ಲಯವನ್ನು ಕಾಪಾಡಿಕೊಂಡು ಬಂದಿವೆ.

ಬಂಡಾಯ ಕಾವ್ಯದ ಜೊತೆ-ಜೊತೆಗೆ ಹುಟ್ಟಿಕೊಂಡ 'ದಲಿತ ಕಾವ್ಯ' ಆ ಬದುಕಿನ ಕ್ರೂರ ಸತ್ಯಗಳನ್ನು ಯಥಾವತ್ತಾಗಿ ಚಿತ್ರಿಸುವ ಮೂಲಕ ಅಕ್ಷರ ಲೋಕದಲ್ಲಿ ಹೊಸ ಅಲೆ ಎಬ್ಬಿಸಿದ್ದು ಸತ್ಯ. ಡಾ॥ ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಮೊಗಳ್ಳಿ ಗಣೇಶ ಮುಂತಾದವರಿಂದ ಹಿಡಿದು ಎಲ್. ಹನುಮಂತಯ್ಯ ನವರವರೆಗೆ ದಲಿತ ಬದುಕಿನ ದಾರುಣತೆಗಳನ್ನು ಕಾವ್ಯದಲ್ಲಿ ಹಿಡಿದಿಡುವ ಕೆಲಸ ಮುಂದುವರಿದಿದೆ. ದಲಿತ - ಬಂಡಾಯ ಕಾವ್ಯ ಹಲವಾರು ಸಲ 'ತನ್ನ ಆಕ್ರೋಶ, ಅಬ್ಬರಗಳಿಂದ ಮುಕ್ತವಾಗಬೇಕಾದ ಅಗತ್ಯ ಇದೆ' ಎಂಬ ಸಲಹೆಯನ್ನು ಪಡೆಯುತ್ತಲೇ ಬಂದಿದೆ.

ಈ ನಡುವೆ ಭಿನ್ನ ವಿಚಾರಧಾರೆಗಾಗಿ ಹಾತೊರೆವ ಗುಂಪು, ಇಂಗ್ಲಿಷ್ ಕಾವ್ಯ ಪ್ರಭಾವದಿಂದ ಮುಕ್ತವಾಗಿ, ನೀಗ್ರೋ, ಆಫ್ರಿಕನ್, ರಶಿಯನ್ ಕವಿತೆಗಳತ್ತ ಗಮನ ಹರಿಸಿ, ಆ ತೆರನಾದ ಕವಿತೆಗಳನ್ನು ಕಟ್ಟಿಕೊಡುವ ಪ್ರಯತ್ನವೂ ನಡೆದಿದೆ. ಶರಣರ ಬೆಡಗಿನ ವಚನಗಳು, ಮೌಖಿಕ ಕಾವ್ಯ ಪರಂಪರೆ, ಸೂಫಿ-ಸಂತರ ಕವಿತೆಗಳ ಅಧ್ಯಯನ ನಡೆಸಿ ಪರಂಪರೆಯನ್ನು ಸ್ವೀಕರಿಸುತ್ತ, ಹೊಸ ಹಾದಿಗಾಗಿ ತುಡಿಯುತ್ತ ಪಾರಲೌಕಿಕ ಸತ್ಯಗಳನ್ನು ಕಾವ್ಯದಲ್ಲಿ ಮೂಡಿಸುವ ಹಂಬಲದಿಂದ ಬರೆಯುತ್ತಿರುವ ಎಚ್. ಎಸ್. ಶಿವಪ್ರಕಾಶ್‌ರಂಥವರೂ ಇದ್ದಾರೆ.

ಈ ಎಲ್ಲ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುತ್ತಿರುವ, ಹುಟ್ಟಿಕೊಳ್ಳಬೇಕಾದ ಹೊಸ ಕನ್ನಡ ಕಾವ್ಯ ಓದುಗ ಹಾಗೂ ಕಾವ್ಯದ ನಡುವೆ ಸೃಷ್ಟಿಯಾಗಿರುವ ಅಂತರವನ್ನು ಕಡಿಮೆ ಮಾಡಬೇಕಾದ ಬಹು ಮಹತ್ವದ ಜವಾಬ್ದಾರಿಯನ್ನು ಹೊರಲು ಸಿದ್ಧಗೊಳ್ಳಬೇಕಿದೆ. ಕನ್ನಡ ಕಾವ್ಯ;ಹೊಸದಿಕ್ಕು ಈ ನಿಟ್ಟಿನಲ್ಲಿ ಒಂದು ಸಣ್ಣ ವಿವೇಚನೆ.

ವರ್ತಮಾನ ಕಾವ್ಯ ಜಗತ್ತಿನ ಜರೂರಿಯೆಂದರೆ ಜನರ ಪ್ರೀತಿ ಮತ್ತು ವಿಶ್ವಾಸವನ್ನು ಗಳಿಸಬಲ್ಲ ಕಾವ್ಯ. ವರ್ತಮಾನವನ್ನು ಎಚ್ಚರದಿಂದ ನೋಡುವ ಕಾವ್ಯ. ಒಂದು ಅಖಂಡ ಮಾನವೀಯ ದೃಷ್ಟಿ ಕಾವ್ಯದ ಧೋರಣೆಯಾಗಬೇಕಿದೆ. ಸಮಕಾಲೀನ ಸಮುದಾಯದ ತಲ್ಲಣಗಳಿಗೆ ಕವಿಯ ಆಂತರಿಕ ತಲ್ಲಣಗಳು ಸ್ಪಂದಿಸಬೇಕು. ಅಂಥ ಕಾವ್ಯ ಖಂಡಿತ ಸಾಮಾನ್ಯ

ಓದುಗನನ್ನು ತಲುಪುತ್ತದೆ. ಹೊಸ ಪೀಳಿಗೆಯ ಕವಿಗಳಲ್ಲಿ ಅಪಾರ ಮಾನವೀಯ ಕಳಕಳಿಯಿಂದ ಬರೆಯುವವರ ಸಂಖ್ಯೆಗೇನು ಕೊರತೆಯಿಲ್ಲ. ಕಾಲದ ಒತ್ತಡಗಳು ಕಾವ್ಯಕ್ಕೆ ರೂಪ ಕೊಡಬೇಕು. ಕೈಗೆ ಸಿಗದ ವರ್ತಮಾನವನ್ನು ಹಿಡಿದಿಡುವುದೇ ಕಾವ್ಯದ ಉದ್ಯೋಗವಾಗಬೇಕು. ನವೋದಯ, ನವ್ಯ, ನವ್ಯೋತ್ತರ ಸಂದರ್ಭಗಳಲ್ಲಿ ಸೃಷ್ಟಿಯಾಗುತ್ತ ಬಂದ ಕಾವ್ಯವನ್ನು ಕಂಡು, ಕಾವ್ಯ ಧೋರಣೆ, ದೃಷ್ಟಿ ಬದಲಾದಂತೆ, ತಮ್ಮ ಕಾವ್ಯ ಮಾರ್ಗವನ್ನು ಬದಲಿಸಿಕೊಳ್ಳುತ್ತ ಬಂದಿರುವ ಹಿರಿಯ ಕವಿಗಳಾದ ಡಾ|| ಜಿ. ಎಸ್. ಶಿವರುದ್ರಪ್ಪ ಹಾಗೂ ಚೆನ್ನವೀರ ಕಣವಿಯವರ ಕವಿತೆಗಳನ್ನು ಗಮನಿಸಿದಾಗ 'ಆಯಾ ಕಾಲಕ್ಕೆ ತಕ್ಕಂತೆ ಕಾವ್ಯ ತನ್ನ ದಿಕ್ಕನ್ನು ತಾನೇ ಕಂಡುಕೊಳ್ಳುತ್ತದೆ' ಎಂಬ ಮಾತೂ ಸತ್ಯವೆನ್ನಿಸುತ್ತದೆ. ಇತ್ತೀಚೆಗೆ ಲಂಕೇಶ್ ಪತ್ರಿಕೆಯಲ್ಲಿ ಪ್ರಕಟವಾದ ನವೋದಯ ಹಿನ್ನೆಲೆಯಲ್ಲಿ ಭಾವಗೀತೆಗಳ ರಚನೆಯಲ್ಲಿ ತಮ್ಮನ್ನು ತಾವು ಆಳವಾಗಿ ತೊಡಗಿಸಿಕೊಂಡಿದ್ದ ಕವಿ ಸಿದ್ಧರಾಜ ಪೂಜಾರಿಯವರ 'ಗುಲ್‌ಮೊಹರ್ ಸುರಿಯುತ್ತಲೇ ಇವೆ' ಎಂಬ ಕವಿತೆ ಇದಕ್ಕೆ ಮಹತ್ವದ ಉದಾಹರಣೆಯಾಗಿದೆ. ಈ ಕವಿತೆ ತನ್ನ ಮಾನವೀಯ ಹವಣಿಕೆಗಳಲ್ಲಿ ಒಂದು ರೂಪಕವೇ ಆಗಿದೆ. ಹೀಗೆ, ಕಾಲದ ಒತ್ತಡ, ಸಮಕಾಲೀನ ತುಡಿತಗಳು ಕವಿತೆಯೊಂದನ್ನು ರೂಪಿಸುವುದರಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಅಂಥ ಸಂವೇದನಾಶೀಲ ಹೃದಯಗಳ ಅಗತ್ಯ ಕನ್ನಡ ಕಾವ್ಯಲೋಕಕ್ಕಿದೆ.

*'ಸಾವ ಬೆಳೆಯನು ದಾಟಿ*
*ಹರಿದು ಬಂದ*
*ಗಾಳಿಯೇ... ನನ್ನನ್ನು ಆಳಲು ಬಿಡು*
*ಮನುಷ್ಯತ್ವದ ಗೋರಿಯ ಮುಂದೆ*
*ನಾನು ಮನುಷ್ಯನಂತೆ ಅಳಬೇಕು'*

ಮಾನವೀಯತೆ ಸಮಾಧಿಯಾದ ಬಗ್ಗೆ ವಿಷಾದಪಟ್ಟುಕೊಳ್ಳುವ ಕವಿ ಬಿ. ಪೀರಬಾಷ ಮನುಷ್ಯನಂತೆ ಅಳಬೇಕು, ಮನುಷ್ಯನಾಗಿ ಬದುಕಬೇಕು ಎಂಬ ತಹತಹವನ್ನು ತಮ್ಮ 'ಜಾಲಿಹೂಗಳ ನಡುವೆ' ಸಂಕಲನದುದ್ದಕ್ಕೂ ಬಿಚ್ಚಿಡುತ್ತಾರೆ.

*'ನಿರಾಕಾರಿ ಹುಡುಕಾಟಗಳ ಧೇನಿಸುತ್ತ*
*ಸರಿದು ಹೋಗಲೇ ಬರಿದೇ ?*
*ಬಯಲ ಬಾಯಾರಿಕೆಗೊಂದು*
*ಹರಿವ ತೊರೆಯೂ ಆಗದೇ...'*

ಎನ್ನುವ ಕವಿ ಡಾ|| ವಿನಯಾ ಮಹಾದೇವಿ ಅಕ್ಕನ ಧೋರಣೆ ಹಾಗೂ ಬದುಕನ್ನು ಪ್ರಶ್ನಿಸುತ್ತ, ಬದುಕಿನ ಕುರಿತಾದ ಅದಮ್ಯ ಹಂಬಲ ಹಾಗೂ ಪ್ರೀತಿಯನ್ನು ವ್ಯಕ್ತಪಡಿಸುತ್ತಾರೆ. ಹೀಗೆ, ವರ್ತಮಾನವನ್ನು ಕಟ್ಟಿಕೊಡುತ್ತ ಸಾರ್ವತ್ರಿಕವಾಗುವ ಕಾವ್ಯ ಹೆಚ್ಚು ಅರ್ಥಪೂರ್ಣ ಅನ್ನಿಸುತ್ತದೆ.

ಐತಿಹಾಸಿಕ ಹಾಗೂ ಪೌರಾಣಿಕ ಪಾತ್ರಗಳು ಮತ್ತು ಘಟನೆಗಳ ಮೂಲಕ ವರ್ತಮಾನವನ್ನು ಅರ್ಥೈಸಲು ಯತ್ನಿಸುವ ಕವಿತೆಗಳನ್ನು ಕಟ್ಟಿಕೊಟ್ಟ ಕವಿ ವಿಕ್ರಮ ವಿಸಾಜಿಯವರ 'ತಮಾಷಾ', 'ಯಾರ ಕನಸುಗಳಲ್ಲಾರೂ ಸೋಯದಿರಲಿ ತಂದೆ' ಎಂಬಂಥ ಉದಾತ್ತ ಕಲ್ಪನೆಗಳನ್ನು ಕಾವ್ಯಕ್ಕೆ ತಂದ ವೆಂಕಟ್ರಮಣಗೌಡ ಅವರ 'ಪಾಂಗು',

*'ಹೊಸ ಬದುಕಿಗಾಗಿ ತುಡಿವ*
*ನನ್ನವರ ಎದೆ ಎದೆಗಳಲಿ*
*ಜೀವಂತ ಹಾಡುಗಳಿವೆ'* ಎಂದು ಹಾಡುತ್ತ ತನ್ನ ಸುತ್ತಮುತ್ತಲಿನ ಬದುಕಿನ ನೋವುಗಳಿಗೆ ತೆರೆದುಕೊಳ್ಳುತ್ತ – 'ಕಣ್ಣ ಮುಂದಿನ ಬೆಳಕು' ದಂಥ ಕವನ ಸಂಕಲನ ಕೊಟ್ಟ ಕವಿ ದಸ್ತಗೀರ ದಿನ್ನಿ,

*'ಒಂದಿಷ್ಟೇ ಇಷ್ಟು*
*ಹಸಿಮಣ್ಣು ನೀಡು ಗೆಳೆಯ*
*ನನ್ನದೇ ಕಲ್ಪನೆ ಬೆರೆಸಿ*
*ಸುಂದರ ಮನೆಯಾಗುತ್ತೇನೆ*
*ಚಿತ್ರವಿಚಿತ್ರ ಕಲಾಕೃತಿಯಾಗುತ್ತೇನೆ*
*ಮಡಿಕೆ, ಕುಡಿಕೆ ಕುಂಡವಾಗುತ್ತೇನೆ*
*ಎಲ್ಲಾ ಒಂದಿಷ್ಟೇ ಇಷ್ಟು*
*ಹಸಿ ಮಣ್ಣಿನಿಂದ !'*

ಎಂದು ಹೃದಯದ ತಲ್ಲಣಗಳಿಗೆ ಹಾಡಿನ ರೂಪ ಕೊಟ್ಟ ರೂಪ ಹಾಸನ ಇತ್ಯಾದಿ ಅನೇಕ ಮಹತ್ವದ ಕವಿಗಳು ಕನ್ನಡ ಕಾವ್ಯ ಲೋಕದಲ್ಲಿ ದೃಢ ಹೆಜ್ಜೆ ಇಟ್ಟು ವಿಶಿಷ್ಟ ಮಾದರಿಯ ಕವಿತೆಗಳನ್ನು ಕಟ್ಟಿಕೊಡಲು ಯತ್ನಿಸುತ್ತಿದ್ದಾರೆ. ಆದರೆ, ಕಾವ್ಯದ ಹೊಸ ಅಪೇಕ್ಷೆಗಳೇನು ಎಂಬುದು ಎಲ್ಲಿಯೂ ಸ್ಪಷ್ಟ ರೂಪ ಪಡೆಯುತ್ತಿಲ್ಲ. ಕನ್ನಡ ಕಾವ್ಯ ಸ್ಥಿತ್ಯಂತರಗೊಳ್ಳುತ್ತಿರುವ ಈ ಸಂಧಿಕಾಲದಲ್ಲಿ, ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ಪರಂಪರೆಗಳ ಅಸ್ಪಷ್ಟ ಹೊದಿಕೆಯಲ್ಲಿ ಹುಟ್ಟಿಕೊಳ್ಳುತ್ತಿರುವ ಯುವ ಪೀಳಿಗೆಯ ಕವಿಗಳ ಕಾವ್ಯ ನಿಶ್ಚಿತವಾಗಿಯೂ ಹೊಸದೊಂದು ನೆಲೆಯನ್ನು ಹುಡುಕಿಕೊಳ್ಳಬೇಕಿದೆ. ಭಾಷೆಯ ಹೊಸ ಹೊಸ ಸಾಧ್ಯತೆಗಳನ್ನು ಮೈಗೂಡಿಸಿಕೊಳ್ಳುವುದರ ಮೂಲಕ ಹೊಸ ಕಾವ್ಯ ರೂಪಗೊಳ್ಳಬೇಕಿದೆ.

ಭಾಷೆಯ ಕುರಿತಾದ ಎಚ್ಚರ ಯುವ ಕವಿಗಳ ಮಹತ್ವದ ಜವಾಬ್ದಾರಿಯಾಗಿದೆ. ಭಾಷೆಯ ಕೃತಕತೆ ಅಥವಾ ಅಸಹಜತೆ ಕಾವ್ಯವನ್ನು ಅಂದಗೆಡಿಸುವುದಲ್ಲದೇ ಕೆಲವೊಮ್ಮೆ ಕಾವ್ಯದ ಆಶಯಕ್ಕೆ ಧಕ್ಕೆ ತರುವ ಸಾಧ್ಯತೆಗಳೂ ಇರುತ್ತವೆ. ಸಮಕಾಲೀನ ಹಿರಿಯ ಕವಿಗಳ ಧಾಟಿಯನ್ನು ಅನುಸರಿಸಿ ಬರೆಯುವ ಆತಂಕದಿಂದಲೂ ನಾವು ಹೊರಬರಬೇಕಿದೆ. ಧ್ಯಾನ, ಅಧ್ಯಯನ, ಮನನ, ವ್ಯವಧಾನಗಳು ಪ್ರತಿಭೆಗೆ ಹೊಸ ಶಕ್ತಿ ನೀಡಬಲ್ಲವು.

*'ಈ ಸಂಜೆ, ಗೆದ್ದಲು ಕಟ್ಟಿದ ಕಟ್ಟಡವ ತಿಳಿಯಬೇಕಿದೆ*
*ಕಿಸೆ ತುಂಬ ಮಕ್ಕಳ ನಗುವಿರಿಸಿಕೊಂಡು*
*ಹೊಸ್ತಿಲಾಚೆ ಬೇಲಿ ಮೇಲಣ ಹೂ ಕಾಣಬೇಕಿದೆ*
*ನಾಳೆ ಬೆಳಗಾದರೆ ಕೈ ತುಂಬ ನಾಳೆಯಿದೆ'*

(ಕಮಲಾಕರ ಕಡವೆ - 'ನಾಳೆ ಬೆಳಗಾದರೆ')

*ಕಾಯದ ಪೂರ ಗಾಯಗಳಿರುವ*
*ಸಂತರು ಮಾತ್ರ ಕೊಟ್ಟರು*
*ಈ ತನಕ ಬೆಳಕ !*

(ಸಂದೀಪ ನಾಯಕ - 'ಮಾಯದ ಗಾಯಗಳ ಗುರುತ ಅರಸಿ')

*ಇದೆಂಥ ಊರು*
*ಎಲ್ಲಿಯೋ ಉದಿಸಿ, ಎಲ್ಲಿಯೋ*
*ಬೆಳಗಿ, ಮತ್ತೆಲ್ಲಿಯೋ ಮುಳುಗುವ*
*ಸೂರ್ಯ ಕೂಡ ಇಲ್ಲಿಯವನೇ*
*ಆಗಿಬಿಡುತ್ತಾನಲ್ಲ!*

(ವೀಣಾ ತಿರಕಪಡಿ - 'ಸೃಷ್ಟಿ')

ಹೀಗೆ, ಭಾಷೆ ಮತ್ತು ಸಂವೇದನೆಗಳ ಸಂಯೋಗ ಕವಿತೆಯ ಪ್ರಾಮಾಣಿಕ ಆಶಯಗಳನ್ನು ಸಮರ್ಥವಾಗಿ ಅಭಿವ್ಯಕ್ತಿಸಲು ಅವಕಾಶ ಮಾಡಿಕೊಡುತ್ತದೆ. ಭಾಷೆ ಓದುಗನೊಂದಿಗೆ ಆಪ್ತತೆ ಬೆಳೆಸಿಕೊಂಡು ಕವಿತೆ ಓದುಗನ ಹೃದಯದಾಳಕ್ಕೆ ಇಳಿಯುತ್ತದೆ. ಮುಕ್ತ ಛಂದದ ಮಾದರಿಯನ್ನೇ ಅನುಸರಿಸುತ್ತ ಬರೆಯುತ್ತಿರುವ ನಾವುಗಳು ಭಾಷೆಯ ಲಯದ ಬಗ್ಗೆ ಸಾಕಷ್ಟು ಎಚ್ಚರ ವಹಿಸಬೇಕಿದೆ. ಆಡುವ ಮಾತಿಗೂ ಒಂದು ಲಯವಿದೆ. ಹೀಗಾಗಿ ಸಂಕೇತ, ಪ್ರತಿಮೆ, ರೂಪಕಗಳು ಕಾವ್ಯವನ್ನು ವ್ಯಾಪಿಸಿಕೊಂಡಿದ್ದರೂ ಅದು ಲಯವನ್ನು ಕಳೆದುಕೊಳ್ಳದ ಹಾಗೆ ಬರೆಯುವುದು ಕವಿಯ ಜವಾಬ್ದಾರಿ. ಹೊಸ ಪ್ರತಿಮೆಗಳು ಕಾವ್ಯಕ್ಕೆ ಜೀವ ತುಂಬಬೇಕು. ಭಾಷೆಯ ಪ್ರಾಮಾಣಿಕ ಸಾಂಗತ್ಯ ಇಂಥ ಸಾಧ್ಯತೆಗಳನ್ನು ಆಗುಮಾಡಬಲ್ಲದು.

'ಪ್ರಾಮಾಣಿಕತೆ' ಹೊಸಬರ ಕಾವ್ಯದ ಮುಖ್ಯ ಅಂಶವಾಗಬೇಕಿದೆ. ತೀರ ಕೃತಕವಾದ ಜಗತ್ತಿನಲ್ಲಿ ಯಾಂತ್ರಿಕವಾಗಿ ಬದುಕುತ್ತಿರುವ ಜಡಜೀವಗಳಲ್ಲಿ ಹೊಸ ಚೇತನ ಮೂಡಬೇಕಾದರೆ ಕಾವ್ಯ 'ಪ್ರಾಮಾಣಿಕ' ವಾಗಿರಬೇಕು. ತುಂಬ ಹಿಂದೆಯೇ ಇ. ಪಿ. ರೈಸ್ ಎಂಬ ವಿಮರ್ಶಕ ಕನ್ನಡ ಕಾವ್ಯದ ಕುರಿತು ಹೇಳಿದ ಮಾತೊಂದು ನೆನಪಿಗೆ ಬರುತ್ತಿದೆ: 'ಮನುಷ್ಯನಿಗೆ ಯಾವಾಗಲೂ ಪ್ರಿಯವಾಗುವ ವಿಷಯಗಳ ಬಗ್ಗೆ ಕನ್ನಡ ಕವಿಗಳಲ್ಲಿ ಸ್ವತಂತ್ರವಾದ ಮತ್ತು ಅಮರವಾದ ವಿಚಾರವಿಲ್ಲ... ಜೀವನವೆಂದರೆ ಒಂದು ಮುಗಿಯದ ಜನ್ಮಯಾತ್ರೆ, ನಿರ್ವಾಣದ ಶೋಧನೆ ಎಂದು ತಿಳಿದ ಕಾರಣ ಆಸೆಯನ್ನು ಹುಟ್ಟಿಸುವ ಹಿರಿಯ ಸಾಹಸಕ್ಕೆ ಸ್ಫೂರ್ತಿಯನ್ನು ಕೊಡುವ ಸಾಹಿತ್ಯವು ಅವರಿಂದ ನಿರ್ಮಾಣವಾಗಿಲ್ಲ.' ಈ ಮಾತಿನ ಸತ್ಯಾಸತ್ಯತೆಯ ಬಗ್ಗೆ ಹಲವಾರು ಆಕ್ಷೇಪಣೆಗಳು ಹುಟ್ಟಿಕೊಂಡಿವೆ. ಆದಿಕವಿ ಪಂಪನಿಂದ ಹಿಡಿದು, ಹೊಸಗನ್ನಡ ಕಾವ್ಯ ಪರಂಪರೆಗಳವರೆಗೆ ಕನ್ನಡ ಸಾಹಿತ್ಯ ಬೆಳೆದು ಬಂದ ದಾರಿಯನ್ನು ಗಮನಿಸಿದರೆ, ಸಾಕಷ್ಟು ವೈವಿಧ್ಯತೆ, ಜೀವನ ಪ್ರೀತಿ, ಸವಾಲಾಗಬಲ್ಲ ವಿಷಯಗಳ ಚರ್ಚೆ, ಸಾಹಸ ಇತ್ಯಾದಿ ಬದುಕಿನ ಎಲ್ಲ ಮುಖಗಳನ್ನು ಪರಿಚಯಿಸುವ ಕಾವ್ಯ ಕನ್ನಡದಲ್ಲಿ ಹುಟ್ಟಿಕೊಂಡಿದೆ. ಆದರೂ ರೈಸ್‌ನ ಮಾತುಗಳನ್ನು ಗಮನದಲ್ಲಿಟ್ಟುಕೊಂಡು ಅಭಿವ್ಯಕ್ತಿಗೆ ಸವಾಲಾಗಿರುವ ವಿಷಯ ವಸ್ತುಗಳನ್ನಾಯ್ದುಕೊಂಡು ಪ್ರಾಮಾಣಿಕ ಕಾವ್ಯ ರಚನೆಯತ್ತ ಯುವ ಪೀಳಿಗೆ ಲಕ್ಷ್ಯ ವಹಿಸಬೇಕಿದೆ. ನಮ್ಮೊಳಗಿನ ದುರ್ಬಲತೆಗಳನ್ನು ಕಂಡುಕೊಳ್ಳುತ್ತ, ಅವುಗಳ ಮೇಲೆ ಜಯ ಸಾಧಿಸುತ್ತ, ವ್ಯವಸ್ಥೆಯನ್ನು ಶೋಧಿಸುತ್ತ - ಕಾವ್ಯದ ಮೂಲಕ ಹೊಸ ಹೋರಾಟಕ್ಕೆ ನಾವು ಸಿದ್ಧಗೊಳ್ಳಬೇಕಿದೆ.


ವಿಭಾ
ಕಛೇರಿ ಸಹಾಯಕಿ, ವಿಭಾಗೀಯ ಅಂಚೆ ಕಛೇರಿ
ಬಾಗಲಕೋಟೆ - ೫೮೭ ೧೦೧


(ಶ್ರೀಮತಿ ವಿಭಾ ಅವರು ಮಾರ್ಚ್ ಮೂರನೆಯ ವಾರದಲ್ಲಿ ಗತಿಸಿದರೆಂದು ತಿಳಿಸಲು ವಿಷಾದಿಸುತ್ತೇವೆ. – ಸಂ)

# ರೈತ ಬೆಂಡೇಕಾಯಿ ಮಾರುಕಟ್ಟೆ ಫಜೀತಿ





**ಮಂ**ಡ್ಯದ ಹಳ್ಳಿಯ ರೈತರ ಬಗ್ಗೆ ಇತರರು ಒಂದು ರೀತಿಯಲ್ಲಿ ಬೆರಗುಗೊಳ್ಳುವುದುಂಟು. ಅವರಿಗೇನು, ವಿಶ್ವೇಶ್ವರಯ್ಯ ನಾಲೆ, ಕನ್ನಂಬಾಡಿ ನೀರು, ಸಮೃದ್ಧ ಬೆಳೆ – ಅವರೇ ರಾಜರು! ಇದು ಉತ್ಪ್ರೇಕ್ಷಿತ ಬೆರಗು. ಕಳೆದ ಒಂದೆರಡು ವರ್ಷಗಳಿಂದ ಮಳೆರಾಯ ಕೈಕೊಟ್ಟು, ನಾಲೆಗಳು ಬತ್ತಿಹೋಗಿ, ಕಬ್ಬು ನಿಂತಲ್ಲೇ ಒಣಗಿ ಬೆಂಡಾಗಿ ಅಲ್ಲಿನ ರೈತರ ಬವಣೆ ಇತರ ಭಾಗಗಳ ರೈತರ ಬವಣೆಗಿಂತ ಭಿನ್ನವಾಗೇನಿಲ್ಲ ಎಂಬುದು ವಾಸ್ತವ ಪರಿಸ್ಥಿತಿ.

ಹಿಂದೆ ರಾಗಿ, ಭತ್ತ, ಜೋಳ, ದ್ವಿದಳ ಧಾನ್ಯಗಳು, ನೆಲಗಡಲೆ, ಕಬ್ಬು ಇತ್ಯಾದಿ ಬೆಳೆಯುತ್ತಿದ್ದರು. ಹಿತ್ತಲ ಕೈತೋಟದಲ್ಲಿ ವರ್ಷಪೂರ್ತಿ ಮನೆಗಾಗುವಷ್ಟು ತರಕಾರಿ ಸೊಪ್ಪು ಬೆಳೆಯುತ್ತಿದ್ದರು. ಈಗ ಪ್ರಾಯಶಃ ಜಾಗತೀಕರಣದ ಪ್ರಭಾವದಿಂದಾಗಿ ಬೆಳೆ ವೈವಿಧ್ಯತೆಯಂಥ ಹೊಸ ಪ್ರಯೋಗಗಳನ್ನು ಮಾಡುತ್ತಿದ್ದಾರೆ. ಹಿಂದೆ ಆಹಾರಧಾನ್ಯಗಳನ್ನು ಬೆಳೆಸುತ್ತಿದ್ದ ಕಡೆ ಈಗ ಎಕರೆ ಗಟ್ಟಲೆ ಪ್ರದೇಶದಲ್ಲಿ ಮುಸುಕಿನ ಜೋಳ, ಟೊಮ್ಯಾಟೋ, ಈರುಳ್ಳಿ, ಶುಂಠಿ, ಅರಿಸಿನ, ಬೆಂಡೇಕಾಯಿ, ಹುರುಳಿ ಕಾಯಿ – ಮುಂತಾದವನ್ನು ಬೆಳೆಸುತ್ತಾರೆ. ರೈತರ ಕೈಗೆ ಒಂದಿಷ್ಟು ಹಣ ಬರಬೇಕಾದರೆ ಇಂಥ ಬೆಳೆಗಳಿಂದಲೇ. ಸರಕಾರದ ಕೃಷಿ ಇಲಾಖೆ ಮತ್ತು ತೋಟಗಾರಿಕಾ ಇಲಾಖೆಯವರ ಪ್ರಚಾರ ಸಹ ಇವರ ಮೇಲೆ ಪ್ರಭಾವ ಬೀರುತ್ತದೆ. ಸಾಮಾನ್ಯವಾಗಿ ಇಂಥ ಹೊಸ ಪ್ರಯೋಗಗಳಿಗೆ ಕೈಹಾಕುವವರು ಬೋರ್‌ವೆಲ್ ಸೌಲಭ್ಯ ಇರುವವರು. ಯಾವ ಬೆಳೆಗೆ ಎಷ್ಟು ನೀರು ಬೇಕು ಎಂಬ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಪಂಪ್ ಒಮ್ಮೆ ಚಾಲೂ ಮಾಡಿದರೆ ಒಂದೆರಡು ಗಂಟೆ ಗಡಗಡ ಸದ್ದು ಮಾಡುತ್ತಿರಬೇಕು. ಭೂಮಿ ಚೆನ್ನಾಗಿ ನೀರು ಕುಡಿಯಬೇಕು! ಒಂದಿಷ್ಟು ಹೊರಗೂ ಹರಿಯಬೇಕು, ಆಗಷ್ಟೆ ಪಂಪಿಗೆ ಬಿಡುವು! ಅಂತರ್ಜಲದ ಮಟ್ಟ ಕುಸಿಯುತ್ತಿರುವ ಬಗ್ಗೆ ರೈತರಿಗೆ ಮನವರಿಕೆ ಮಾಡಿಕೊಡುವುದು ಕಷ್ಟದ ಕೆಲಸ.

ಬರಗಾಲಕ್ಕೆಂದು ಸರಕಾರ ನೀಡುವ ಸಬ್ಸಿಡಿಗಳ ಗುಂಗಿನಲ್ಲಿ ರೈತರು ಮುಳುಗಿ ಹೋಗಿದ್ದಾರೆ. ಕೊಕ್ಕರೆಗಳನ್ನಾಗಲಿ, ಕೆಸರಿನಲ್ಲಿ ಮುಳುಗಿ ಸವಿಗನಸು ಕಾಣುತ್ತಿರುವ ಎಮ್ಮೆಗಳನ್ನಾಗಲಿ ಫೋಟೋ ತೆಗೆಯಲೆಂದು ಚೀಲದಿಂದ ಕ್ಯಾಮರಾ ಹೊರಗೆ ತೆಗೆದರೆ, ದಾರಿಯಲ್ಲಿ ಸಿಕ್ಕುವ ರೈತರು ಕುತೂಹಲದಿಂದ ನೋಡುತ್ತ ನಿಲ್ಲುತ್ತಾರೆ. ''ಯಾವ್ ಡಿಪಾರ್ಟ್‌ಮೆಂಟು ಸಾರ್!'' ಎಂದು ಸ್ನೇಹದಿಂದ ವಿಚಾರಿಸುತ್ತಾರೆ. ಪೇಪರಿನವರು ಎಂದರೆ, ''ಸಬ್ಸಿಡಿಯವರು ಅನ್ಕಂಡೆ!'' ಎಂದು ನಿಟ್ಟುಸಿರಿಡುತ್ತಾರೆ. ರೈತರ ಬವಣೆ ಸಬ್ಸಿಡಿಯ ಮಂಪರಿಗೆ ಅವರನ್ನು ಸರಿಸುತ್ತಿದೆ!

ಹೀಗೆ ತಿರುಗಾಟದ ಸಂದರ್ಭದಲ್ಲಿ ಸಿಕ್ಕಿದವರು ರಾಮಂದೂರು ಗ್ರಾಮದ ಕಾಳಮ್ಮನ ಗುಡ್ಡ ಅಲುಮೇಗೌಡರ ಮಗ ಚಿಕ್ಕದೇವಯ್ಯ. ಸುಮಾರು ೩೦ ಗುಂಟೆ ಜಮೀನಿನಲ್ಲಿ ಬೆಂಡೆ ಬೆಳೆಸಿದ್ದಾರೆ. ಅವರ ಅಭಿಪ್ರಾಯದಂತೆ ಇಂಥ ತರಕಾರಿ ಬೆಳೆಯುವುದರಿಂದ ಹೆಚ್ಚು ಪ್ರಯೋಜನ ನಿರೀಕ್ಷಿಸಲಾಗದು. ಅದರಲ್ಲೂ ಬೆಂಡೆ ಬೆಳೆಯುವುದು ಬುದ್ಧಿವಂತಿಕೆಯಲ್ಲ!

''ಯಾಕೆ ಹಾಗಂತೀರಿ? ಬೆಂಡೆಗೆ ಯಾವಾಗ್ಲೂ ಒಳ್ಳೆ ಬೆಲೆ ಇರುತ್ತೆ. ನನಗೆ ತಿಳಿದ ಮಟ್ಟಿಗೆ ಕೆ.ಜಿ.ಗೆ ೧೨ – ೧೬ರಿಂದ ಕೆಳಗಿಳಿದದ್ದೇ ಇಲ್ಲ.'' – ಎಂದಾಗ,

''ನಿಮ್ಮೂರ್ನಲ್ಲಿ ಬೆಲೆ ಇರ್ತದೆ ಸರಿ. ಇಲ್ಲೂ ಅದೇ ಬೆಲೆ ಎಲ್ಲಿಂದ ಬರುತ್ತೆ? ನಮ್ಗೆ ಬೆಂಗ್ಳೂರ್ ಬೆಲೇನೇ ಸಿಕ್ಬೇಕೂಂತ ಇಲ್ಲ. ಯಾರಾದ್ರೂ ಬಂದು ಹೊಲ್ದಲ್ಲೇ ಕೊಳ್ಳುವಂಗಿದ್ರೆ ತಾಪತ್ರಯ ಇಲ್ಲ...'' ಎಂದರು ಚಿಕ್ಕದೇವಯ್ಯ.

ಅದು ಸಾಮಾನ್ಯವಾಗಿ ಎರಡು-ಮೂರು ಕಿ.ಮೀ. ದೂರಕ್ಕೆ ಒಂದೊಂದು ಹಳ್ಳಿ ಇರುವ ಪ್ರದೇಶ. ಸೈಕಲಿನಲ್ಲಿ ಒಯ್ದು ಮಾರಾಟ ಮಾಡಿದರೂ ಹೆಚ್ಚಿನ ಪ್ರಯೋಜನ ನಿರೀಕ್ಷಿಸುವಂತಿಲ್ಲ. ಹಳ್ಳಿಯವರು ಇದನ್ನೊಂದು ತರಕಾರಿಯಾಗಿ ಹೆಚ್ಚು ಇಷ್ಟಪಡುವುದಿಲ್ಲ.

ಪ್ರತಿ ಎರಡು ದಿನಕ್ಕೊಮ್ಮೆ ೪೦-೧೦೦ ಕೆ.ಜಿ. ಇಳುವರಿ ಬಂದಾಗ ಚಿಕ್ಕದೇವಯ್ಯ ಸ್ವಲ್ಪ ಫಜೀತಿ ಪಡಬೇಕಾಯಿತು. ಅವರ ಅನುಭವ ಕೇಳಿ :

''ಒಂದ್ ಕೈ ನೋಡೇಬುಡವ ಅಂತ ನಾನೂ ಮೂರ್ಸಲ ಬೆಂಗ್ಳೂರ್ಗೂ ಹೋಗ್ಬಂದೆ. ನನಗೆ ಸಿಕ್ಕಿದ್ದು ಕೆ.ಜಿ.ಗೆ ನಾಲ್ಕರಿಂದ ಎಂಟು ರೂಪಾಯಿ. ಇದೇ' ಹೆಚ್ಚು ಅನ್ಕಳಿ. ಆದ್ರೂ ನಿಮ್ ಬೆಂಗ್ಳೂರ್ ವ್ಯಾಪಾರಿಗಳಿದ್ದಾರಲ್ಲ, ಅದೇನ್ ಚಮತ್ಕಾರಾ ಮಾಡ್ತಾರೋ ದೇವ್ರೆ ಬಲ್ಲ! ಏನಿಲ್ಲಾಂದ್ರೂ ಒಂದೊಂದ್ ಮೂಟೆಗೆ ನಾಲ್ಕೈದು ಕೆ.ಜಿ. ಮಾಯಾ ಮಾಡ್ತಾರೆ. ಎಲ್ಲ ಒಂದ್ ಥರಾ ರೌಡಿಗಳಂಗೆ ಗೇರಾಯಿಸ್ತಾರೆ. ಅವ್ರೊಂದ್ಗೆ ತಕ್ರಾರ್ ಮಾಡುವಂಗೂ ಇಲ್ಲ. ಇಲ್ಲಿನ್ ಕೂಲಿ, ಬಸ್ ಚಾರ್ಜ್, ಅಲ್ಲಿನ್ ಕೂಲಿ ಎಲ್ಲಾನೂ ಕಳದ್ರೆ ಥೂ ಸಾಕಪ್ಪ ಇದರ್ ಸಾವಾಸ ಅನ್ನಿಸ್‌ಬಿಡುತ್ತೆ. ಹೊಟ್ಟೆ ಉರಿಯತ್ತೆ! ಏನ್ ಮಾಡಾನ ಬೆಳೆ ಹಾಕಿದ್ದಾಯ್ತು, ಅಂಗೈ ಬುಡಾಕಾಯ್ತದೆ? ಒಟ್ನಲ್ಲಿ ಬೆಂಡೆ ಬೆಳ್ಯೋನು ಬುದ್ವಂತ ಅಲ್ಲ ಅನ್ಕಳಿ!''

ಯಾವುದೇ ತರಕಾರಿ ಬೆಳೆಯಂತೆ ಬೆಂಡೆ ಸಹ ಹೆಚ್ಚು ಜಾಗರೂಕತೆ ಬಯಸುವ ಬೆಳೆ. ಸಕಾಲಕ್ಕೆ ನೀರು, ಗೊಬ್ಬರ ನೀಡುವುದೂ ಮುಖ್ಯ. ಫಸಲಿಗೆ ಬಂದಮೇಲೆ ಎರಡು ದಿನಕ್ಕೊಮ್ಮೆ ಕಾಯಿ ಬಿಡಿಸುತ್ತ ಹೋಗಬೇಕು. ತಡವಾದರೆ ಕಾಯಿ ಗಿಡದಲ್ಲೇ ಬಲಿತು ಹೋಗುತ್ತವೆ. ಕಾಯಿ ಬಿಡಿಸಲು ಪ್ರಾರಂಭಿಸಿದ ಮೇಲೆ ೩೦-೪೦ ದಿನಗಳಲ್ಲಿ ಇಳುವರಿಯ ಅವಧಿ ಮುಗಿಯುತ್ತದೆ.

ಬೆಳೆದ ತರಕಾರಿಯನ್ನು ಆತನ ಹೊಲದಲ್ಲಿಯೇ ವಿಲೇವಾರಿ ಮಾಡುವ ವ್ಯವಸ್ಥೆ ಇಲ್ಲದಿರುವುದು ದೊಡ್ಡ ಕೊರತೆ. ಸಮೀಪದ ಊರುಗಳಲ್ಲಿ ನಡೆಯುವ ಸಂತೆಗಳಲ್ಲಿ ದೊಡ್ಡ ಪ್ರಮಾಣದಲ್ಲಿ ತರಕಾರಿಗಳು ಮಾರಾಟವಾಗುತ್ತವೆಂದು ನಿರೀಕ್ಷಿಸಲಾಗದು. ರೈತರೇ ಸಹಕಾರಿ ಸಂಘ ಸ್ಥಾಪಿಸಿಕೊಂಡು ಬೆಳೆಗಾರರಿಂದ ನೇರ ಖರೀದಿಸಿದಾಗ ಮಾತ್ರ ರೈತರ ಶ್ರಮಕ್ಕೆ ಫಲ ದೊರಕುತ್ತದೆ.

ರೈತರು ತಮ್ಮ 'ಅತಿ'ಯಿಂದಾಗಿ ಸಂಕಷ್ಟಕ್ಕೆ ಸಿಕ್ಕಿಕೊಳ್ಳುವುದು ಹೊಸ ವಿಷಯವಲ್ಲ. ಅಲ್ಲಿಂದ ಸ್ವಲ್ಪ ಮುಂದೆ ನಡೆದಾಗ ಸುಮಾರು ಮೂರು ಎಕರೆಯಷ್ಟು ಪ್ರದೇಶದಲ್ಲಿ ಟೊಮ್ಯಾಟೊ ಸಸಿ ನೆಟ್ಟಿರುವುದನ್ನು ಗಮನಿಸಿದೆ. ಒಂದು ಗ್ರಾಮದಲ್ಲಿ ಯಾರಾದರೊಬ್ಬ ರೈತ ಏನಾದರೂ ಹೊಸ ಬೆಳೆ ಬೆಳೆದು ನೂರೋ ಇನ್ನೂರೋ ಲಾಭ ಬಂದರೆ ಅದೊಂದು ದೊಡ್ಡ ಸುದ್ದಿಯಾಗುತ್ತದೆ. ಇನ್ನೂರು ಎರಡು ಸಾವಿರವಾಗಿ ಕಿವಿಯಿಂದ ಕಿವಿಗೆ ಹಬ್ಬಿದರೂ ಆಶ್ಚರ್ಯವಿಲ್ಲ. ಮುಂದಿನ ವರ್ಷ ಹತ್ತು ಮಂದಿ ಟೊಮ್ಯಾಟೊ ಬೆಳೆಸಲು ಮುಂದಾಗುತ್ತಾರೆ. ಒಳ್ಳೆ ಫಸಲು ಬರುತ್ತದೆ. ರೈತರ ಹೊಲದಲ್ಲೇ ಬಂದು ಅವನ್ನು ಕೊಳ್ಳುವ ವ್ಯವಸ್ಥೆಯಿಲ್ಲ. ಬೆಳೆದವರೆಲ್ಲರೂ ಬೆಂಗಳೂರು ಮಾರುಕಟ್ಟೆಗೆ ಅಲೆಯಲು ಸಾಧ್ಯವಿಲ್ಲ. ಸಹಜವಾಗಿಯೇ ಬೆಲೆ ಇಳಿಯುತ್ತದೆ. ರೈತರ ಸವಿಗನಸು ನುಚ್ಚುನೂರಾಗುತ್ತದೆ. ಅವರ ಸಹನೆಯ ಕಟ್ಟೆ ಒಡೆಯುತ್ತದೆ. ತಮ್ಮ ಫಸಲನ್ನು ರಸ್ತೆಯಲ್ಲಿ ಸುರಿದು ಪ್ರತಿಭಟಿಸುತ್ತಾರೆ. ಇದರ ಬಗ್ಗೆ ರೈತರಿಗೆ ಸಬ್ಸಿಡಿ ಕೊಡಿಸುವ ಪುಢಾರಿಗಳು ಹುಟ್ಟಿಕೊಳ್ಳುತ್ತಾರೆ. ಇದೊಂದು ವಿಷಚಕ್ರ.

ಚಿಕ್ಕದೇವಯ್ಯ ಸುಮಾರು ಎರಡು ಕೆ.ಜಿ.ಯಷ್ಟು ತಾಜಾ ಬೆಂಡೇಕಾಯಿ ಪುಕ್ಕಟೆ ಕೊಡಲು ಬಂದರು. ಅವರಿಂದ ಪುಕ್ಕಟೆ ತೆಗೆದುಕೊಳ್ಳಲು ಮನಸ್ಸಾಗಲಿಲ್ಲ.

■ ಕೆ.ಪಿ.ಸ್ವಾಮಿ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು-೫೬೦ ೦೫೮

# ಕೊಂಡು ತಂದ ಹೆಂಡತಿಯರು

**ಎಸ್. ಬಿ. ಜೋಗುರ**

> *ಕೇವಲ ಹಣ ಕೊಟ್ಟು ಅವರನ್ನು ಕರೆತಂದು ತಮ್ಮ ವಿಷಯ ವಾಸನೆಗಾಗಿ ಬಳಸಿಕೊಳ್ಳುವಂತಿದ್ದರೆ ಅದು ಬೇರೆ ತಿರುವನ್ನೇ ಪಡೆಯುತ್ತಿತ್ತು, ಆದರೆ ಹಾಗಿಲ್ಲ. ಅವರನ್ನು ಕೊಂಡು ತಂದ ನಂತರ ಆತ ಮದುವೆಯಾಗುತ್ತಾನೆ. ಹೀಗಾಗಿ ಇಲ್ಲಿ ಅನೈತಿಕ ಸಂಬಂಧದ ಮಾತೇ ಇಲ್ಲ.*

ಗಂಡು – ಹೆಣ್ಣಿನ ಲಿಂಗಪ್ರಮಾಣದಲ್ಲಿ ಅಂತರಗಳು ಹೆಚ್ಚಾದಂತೆ ಸಾಂಪ್ರದಾಯಿಕ ವಿವಾಹ ಸ್ವರೂಪದಲ್ಲಿ ಗಣನೀಯ ಬದಲಾವಣೆಗಳು ನಿರೀಕ್ಷಿತವೇ. ಇನ್ನೂ ಈ ನಿರೀಕ್ಷೆ ಮೊದಮೊದಲು ಒಂದು ಬಗೆಯ ಅಲರ್ಜಿಯಂತೆ ಕಂಡುಬಂದರೂ ಕ್ರಮೇಣವಾಗಿ ಅದೇ ಒಂದು ಸ್ವಾಭಾವಿಕ ಕ್ರಮವಾಗಿ ಗುರುತಿಸಲ್ಪಡುವುದು. ಇತಿಹಾಸ ಪುನರಾವರ್ತನೆ ಯಾಗುತ್ತದೆ ಎಂಬ ಮಾತಿಗೆ ಸಾಕ್ಷಿಯಂತೆಯೂ ಅದು ಬಿಂಬಿತವಾಗಬಹುದು.

ಇಂದು ಇಡೀ ದೇಶದಾದ್ಯಂತ ಹೆಣ್ಣು ಸಂತಾನದ ಪ್ರಮಾಣ ಕಡಿಮೆಯಾಗುತ್ತಿದೆ. ಹರಿಯಾಣದಂತಹ ರಾಜ್ಯಗಳಲ್ಲಿ ಅದು ವೈವಾಹಿಕ ಮಾರ್ಪಾಡುಗಳಿಗೆ ಕಾರಣವಾಗು ವಷ್ಟರ ಮಟ್ಟಿಗೆ ಕಡಿಮೆಯಾಗುತ್ತಿದೆ. ಇಂದು ಅಲ್ಲಿ ಒಂದು ಸಾವಿರ ಪುರುಷರಿಗೆ ಕೇವಲ ೮೫೦ ಸ್ತ್ರೀಯರು ಇರುವುದಾಗಿ ತಿಳಿದುಬಂದಿದೆ. ಪರಿಣಾಮವಾಗಿ ಸಮುದಾಯದ ಕೆಳವರ್ಗಗಳಿಗೆ ಕನ್ಯೆಯನ್ನು ಅರಸುವುದು ತುಂಬಾ ದುಸ್ತರವಾಗುತ್ತಿದೆ. ರೈತನೊಬ್ಬ ಸಂತೆಯಲ್ಲಿ ದನ-ಕರುಗಳನ್ನು ಕೊಳ್ಳಲು ಕಿಸೆಯಲ್ಲಿ ಹಣ ತುಂಬಿಕೊಂಡು ತೆರಳುವಂತೆ ಮದುವೆ ಯಾಗಲು ಕನ್ಯಾನ್ವೇಷಣೆಗಾಗಿ ತೆರಳುವವರು ಕಿಸೆಯಲ್ಲಿ ಕಾಸಿಟ್ಟು ಅಲೆಯಬೇಕಿದೆ.

ಹರಿಯಾಣದ ಸುತ್ತ-ಮುತ್ತಲಿನ ಹಳ್ಳಿಗಳಲ್ಲಿ ಈಗೀಗ ಕೊಂಡು ತಂದ ಹೆಂಡತಿಯರೇ ಹೆಚ್ಚಾಗುತ್ತಿದ್ದಾರೆ. ಒಂದು ಆಂಗ್ಲ ಪತ್ರಿಕೆಯ ವರದಿಯಂತೆ ಮೇವಾರ್ ಒಂದರಲ್ಲಿಯೇ ಸುಮಾರು ಇಂಥ ೧೫ ಸಾವಿರ ಕೊಂಡು ತಂದ ಹೆಂಡತಿಯರಿದ್ದಾರೆ. ವಿವಾಹವನ್ನು ಒಂದು ಪವಿತ್ರ ಸಂಬಂಧ, ಒಪ್ಪಂದ, ಏಳು ಜನ್ಮಗಳ ಸಂಬಂಧಗಳೆಂಬ ಕಲ್ಪನೆಗಳ ವೈಭವೀಕರಣದ ಸುತ್ತಲೂ ಜರುಗುವ ಸಂಬಂಧವೊಂದು ಇಂದು ಹಿಡಿಕಾಸು ಕೊಟ್ಟು ಕುದುರಿಸುವ ಒಂದು ಕರಾರಾಗಿ ಪರಿಣಮಿಸಿದೆ.

ವರದಕ್ಷಿಣೆಯೆಂಬುದು, ವಧುದಕ್ಷಿಣೆಯಾಗಿ ಪರಿವರ್ತನೆಯಾಗುವ ದಿನಗಳು ದೂರವಿಲ್ಲವೆಂದೆನಿಸುತ್ತದೆ. ಹೆಣ್ಣು ಸಂತಾನವೆಂದೊಡನೆ ಸಿಡಿಮಿಡಿಗೊಳ್ಳುವ ಪಾಲಕರು ಇನ್ನು ಮುಂದೆ ವಿವಾಹ ಸಂಬಂಧದ ವಿಷಯದಲ್ಲಿ ಖಡಾಮುಡಿಯಾಗಿ ಮಾತನಾಡ ಬಹುದಾಗಿದೆ. ಅದಾಗಲೇ ಹರಿಯಾಣಾದಲ್ಲಿ ಕನ್ಯೆಯನ್ನು ಹುಡುಕಿ ಕೊಂಡು ತರುವುದು ಒಂದು ಪ್ರಮುಖ ದಂಧೆಯಾಗಿದೆ. ಈ ಕಾರ್ಯದಲ್ಲಿ ತೊಡಗಿಸಿಕೊಂಡ ದಲ್ಲಾಳಿಗಳಿಗೆ ಆದಾಯ ಚೆನ್ನಾಗಿಯೇ ಇದೆ. ಹಿಂದಿನ ಕಾಲದಲ್ಲಿ ತೆರ ನೀಡುವ ಪದ್ಧತಿಯಿತ್ತು. ಹುಡುಗನಾದವನು, ಮದುವೆಯಾಗುವ ಕನ್ಯೆಗೆ ತೆರ ಕೊಟ್ಟು ಮದುವೆಯಾಗಬೇಕಿತ್ತು ಎಂಬ ಮಾತುಗಳನ್ನು ಕೇಳಿ ಅಚ್ಚರಿಪಡುತ್ತಿದ್ದ ಪೀಳಿಗೆಗೆ ಮತ್ತೆ ಆ ಸಂಸ್ಕೃತಿಯ ಪರಿಚಯವಾಗಲಿದೆ ಎಂದೆನಿಸುತ್ತದೆ.

ಹೆಣ್ಣು ಹುಟ್ಟಿದರೆ ಹುಣ್ಣು ವರದಕ್ಷಿಣೆಯ ಕಿರಿಕಿರಿ ಮುಂತಾದವುಗಳ ಹಿನ್ನೆಲೆಯಲ್ಲಿ, ಹುಟ್ಟುವ ಮುಂಚೆಯೇ ಭ್ರೂಣವನ್ನು ಸೆನ್ಸಾರ್ ಮಾಡುವ ನಾರಿಮಣಿಗಳಿಗೆ ಇದೀಗ ತುಸು ಧೈರ್ಯ ಬರುವಂತಾಗಿದೆ. ಯಾಕೆಂದರೆ ಭವಿಷ್ಯದ ನಿಧಿ ತಮ್ಮ ಪಾಲಿಗೆ ಬರಬಹುದು ಎಂಬ ಲೆಕ್ಕಾಚಾರ ಕೆಲವೆಡೆ ನಿಜವಾಗತೊಡಗಿದೆ.

ಹರಿಯಾಣದ ಸುತ್ತ-ಮುತ್ತಲಿನ ಹಳ್ಳಿಗಳಲ್ಲಿ ಹೆಣ್ಣಿಗಾಗಿ ಒಂದು ಬಗೆಯ ಪರದಾಟ ಶುರುವಾಗತೊಡಗಿದೆ. ನೆರೆಯ ರಾಜ್ಯಗಳಾದ ಪಶ್ಚಿಮ ಬಂಗಾಲ, ಬಿಹಾರ, ಅಸ್ಸಾಂ ಮುಂತಾದ ಕಡೆಗಳಿಂದ ಕನ್ಯೆಯರನ್ನು ಕೊಂಡು ತರಲಾಗುತ್ತಿದೆ. ನಾವು ಆ ಬಗೆಯ ಸನ್ನಿವೇಶ ಹಾಗೂ ಪರಿಸರದಿಂದ ಕೊಂಚ ದೂರ ಇರುವದರಿಂದ ನಮ್ಮಲ್ಲಿ ಹೀಗೆ ಹೆಂಡತಿಯರನ್ನು ಕೊಂಡು ತರುವುದು ಬೆರಗು ಹುಟ್ಟಿಸಬಹುದು. ಈ ಪ್ರಕ್ರಿಯೆ ಸರ್ವ ವ್ಯಾಪಕವಾಗಿ ಹರಡುವ ದಿನಗಳು ದೂರವಿಲ್ಲ.

ಕೇವಲ ಹಣ ಕೊಟ್ಟು ಅವರನ್ನು ಕರೆತಂದು ತಮ್ಮ ವಿಷಯ ವಾಸನೆಗಾಗಿ ಬಳಸಿ ಕೊಳ್ಳುವಂತಿದ್ದರೆ ಅದು ಬೇರೆಯದೇ ತಿರುವನ್ನು ಪಡೆಯುತ್ತಿತ್ತು, ಆದರೆ ಹಾಗಿಲ್ಲ. ಅವರನ್ನು ಕೊಂಡು ತಂದ ನಂತರ ಆತ ಮದುವೆಯಾಗುತ್ತಾನೆ. ಹೀಗಾಗಿ ಇಲ್ಲಿ ಅನೈತಿಕ ಸಂಬಂಧದ ಮಾತೇ ಇಲ್ಲ. ಆದರೆ ಒಂದಿದೆ, ಹೇಗೆ ವರದಕ್ಷಿಣೆಯಲ್ಲಿ ವರನ ವಿದ್ಯಾರ್ಹತೆ, ಉದ್ಯೋಗ, ಆಸ್ತಿ ಮುಖ್ಯವಾದ ನಿರ್ಣಾಯಕ ಸಂಗತಿಗಳಾಗಿರುತ್ತವೆಯೋ ಅದೇ ರೀತಿ ಇಲ್ಲಿಯೂ ಆ ವಧುವಿನ ಹಿನ್ನೆಲೆ ವಯೋಮಿತಿಗಳು ತುಂಬಾ ಪ್ರಮುಖವಾಗಿ ಕೆಲಸ ಮಾಡುತ್ತವೆ. ಕೇವಲ ೧೦೦೦೦ ರೂಪಾಯಿ ತೆತ್ತು ಕರೆತರಲಾಗುವ ಮಹಿಳೆ ಅದಾಗಲೇ ಮದುವೆಯಾಗಿ ವಿಚ್ಛೇದನ ಪಡೆದವಳು, ಇಲ್ಲವೇ ಪತಿಯಿಂದ ತುಚ್ಛೀಕರಿಸಲ್ಪಟ್ಟವಳು, ಗಂಡನನ್ನು ಕಳೆದುಕೊಂಡವಳು. ಅದೇ ಒಂದೊಮ್ಮೆ ೧೫ ಸಾವಿರ ರೂಪಾಯಿಯನ್ನು ತೆತ್ತರೆ ಅದೇ ತಾನೇ ದೊಡ್ಡವಳಾದ ಹಾಗೂ ಪ್ರಾಯದ ಹುಡುಗಿಯನ್ನು ಕರೆತಂದು ಮದುವೆಯಾಗಬಹುದು.

ಇನ್ನು ಕೆಲ ಜೋಡಿಗಳು ತೀರಾ ಅಸಮಂಜಸ ಹಾಗೂ ಅಸಮರ್ಪಕವಾಗಿ ಕಂಡರೂ ಅನಿವಾರ್ಯವಾಗಿ ಆ ಯುವತಿಯರು ಅವರ ಪತ್ನಿಯರಾಗಿ ಬದುಕಬೇಕು. ಹರಿಯಾಣ ದಲ್ಲಿ ಹೆಣ್ಣಿನ ಕೊರತೆಯಿರುವುದರಿಂದ ಹೀಗೆ ಹಣ ಕೊಡಬೇಕಾಗಿ ಬಂದರೆ ಪಶ್ಚಿಮ ಬಂಗಾಲ, ಬಿಹಾರ, ಅಸ್ಸಾಂಗಳಲ್ಲಿ ಹೆಣ್ಣು ಮಕ್ಕಳನ್ನು ಮಾರುವುದೇ ಅನಿವಾರ್ಯವಾಗಬಹುದು. ಯಾಕೆಂದರೆ ವರದಕ್ಷಿಣೆ ಕೊಟ್ಟು ಮದುವೆ ಮಾಡುವುದು ಅವರ ಪಾಲಕರಿಗೆ ಸಾಧ್ಯವಾಗದೆ ಹೀಗೆ ತಮ್ಮ ಹೆಣ್ಣು ಮಕ್ಕಳನ್ನು ಮಾರಬಯಸುತ್ತಾರೆ.

ಕೆಲವರಂತೂ ಅದಾಗಲೇ ಒಂದು ಮದುವೆಯಾಗಿ ಅವಳಿಂದ ೨-೩ ಮಕ್ಕಳನ್ನು ಪಡೆದು ಆಮೇಲೆ ಮತ್ತೊಂದು ಮದುವೆಯಾಗುವವರಿದ್ದಾರೆ. ಆ ಕೊಂಡು ತಂದ ಹೆಂಡತಿ ಮದುವೆಯಾದದ್ದೇ ಮೂವರು ಮಕ್ಕಳ ಮಹಾ ತಾಯಿಯಾಗಿ ಬದುಕು ಸಾಗಿಸುವುದಕ್ಕಾಗಿ. ಕೆಲಬಾರಿಯಂತೂ ಆತನಿಗೆ ಮದುವೆಯಾಗಲು ಹುಡುಗಿ ಬೇಕು, ಆದರೆ ಆತನಿಗೆ ಹಣಕೊಡಲು ಆಗುವದಿಲ್ಲ. ಇಂಥಾ ಒಬ್ಬ ವ್ಯಕ್ತಿ ತನ್ನಲ್ಲಿರುವ ಒಂದು ಎಮ್ಮೆಯನ್ನು ಹುಡುಗಿಯ ತಂದೆಗೆ ಕೊಟ್ಟು ಆ ಹುಡುಗಿಯನ್ನು ಕರೆತಂದು ಮದುವೆಯಾದನಂತೆ !

ಪಶ್ಚಿಮ ಬಂಗಾಲ, ಅಸ್ಸಾಂ, ಬಿಹಾರಗಳಲ್ಲಿ ಹೀಗೆ ಹೆಣ್ಣು ಮಕ್ಕಳನ್ನು ಮಾರಾಟ ಮಾಡುವುದು ಒಂದು ದಂಧೆಯಾಗಿ ಪರಿಣಮಿಸುತ್ತಿದೆ. ಅದೂ ಅಲ್ಲದೇ ಸಾಮಾಜಿಕ ಸ್ತರಗಳಲ್ಲಿ ಕೆಳಗಿರುವವರು ಈ ಬಗೆಯ ನಿರ್ಣಯಗಳನ್ನು ಮಾಡುತ್ತಾರೆ.

ದನಕರುಗಳನ್ನು, ಮನೆಯಲ್ಲಿಯ ವಸ್ತು ಒಡವೆಗಳನ್ನು ಮಾರುವಷ್ಟೇ ಭಾವನಿರಪೇಕ್ಷರಾಗಿ ತಮ್ಮ ಕರುಳು ಕುಡಿಯನ್ನು ಮಾರುತ್ತಾರೆ. ಜೋಡಿಯ ವಿಷಯದಲ್ಲಿ ಅಜಗಜಾಂತರ ವ್ಯತ್ಯಾಸಗಳಿದ್ದರೂ ಹಣದ ಹಿನ್ನೆಲೆಯಲ್ಲಿ ಸಹಿಸಲಾಗುತ್ತದೆ. ಮದುವೆ ಯಾವುದೇ ಪ್ರಕಾರದ್ದಿರಲಿ, ಅದು ವರದಕ್ಷಿಣೆಯನ್ನು ಕೊಟ್ಟು ಆಗುವುದಿರಲಿ ಇಲ್ಲವೇ ತೆರ ಪಡೆದು ಆಗುವುದಿರಲಿ, ಅಂತೂ ಹೆಣ್ಣಿನ ಆಯ್ಕೆಯ ಸ್ವಾತಂತ್ರ್ಯಕ್ಕೆ ಮಾತ್ರ ನಮ್ಮಲ್ಲಿ ಅವಕಾಶವಿಲ್ಲ. ಆಕೆ ಹರಕೆಯ ಕುರಿಯಾಗಿಯೇ ನಿಲ್ಲಬೇಕು.

ಇನ್ನು ಮುಂದೆಯೂ ಹೀಗೆಯೇ ಲಿಂಗಪ್ರಮಾಣದಲ್ಲಿ ಒಂದು ಅನಾರೋಗ್ಯಕರವಾದ ದಿಶೆಯಲ್ಲಿ ಅಂತರಗಳು ಹೆಚ್ಚಾಗುತ್ತಾ ನಡೆದರೆ ಲೈಂಗಿಕ ಅಪರಾಧಗಳು ಹೆಚ್ಚಾಗುವ ಜೊತೆಯಲ್ಲಿ ಹೀಗೆ ಎಲ್ಲಾ ಕಡೆಗಳಲ್ಲಿಯೂ ಹೆಂಡತಿಯರನ್ನು ಕೊಂಡು ತರುವವರ ಹಾವಳಿಯೇ ಹೆಚ್ಚಾಗಬಹುದು. ಮಾನವ ತಾನು ತೀರಾ ನಾಗರಿಕ-ಸಮಾಜದ ಸಂದರ್ಭ ದಲ್ಲಿರುವೆ ಎಂದು ಬೀಗುವಾಗಲೇ ಇಂತಹ ಅಸಹಜ ಸ್ಥಿತಿಯನ್ನು ಅನುಭವಿಸಬೇಕಾಗಿ ಬಂದಿದೆ. ಮುಂದಾದರೂ ಹೆಣ್ಣನ್ನು ಎರಡನೆಯ ದರ್ಜೆಯ ಲಿಂಗ ಎನ್ನುವಂತೆ ಬಿಂಬಿಸುವುದು, ಮಾತನಾಡುವುದು ಮಾನವ ವಿರೋಧಿ ಎಂದು ಗುರುತಿಸಬೇಕು. ಅದೇ ವೇಳೆಗೆ, ಹೆಣ್ಣಿರಲಿ, ಗಂಡಿರಲಿ ಮಕ್ಕಳು ಮಕ್ಕಳೇ ಎಂಬ ಭಾವನೆಯಿಂದ ನೋಡುವಂತಾಗಬೇಕು.

ಎಸ್. ಬಿ. ಜೋಗುರ
ಸಮಾಜಶಾಸ್ತ್ರ ಉಪನ್ಯಾಸಕರು, ಸರಕಾರಿ ಪ್ರಥಮದರ್ಜೆ ಕಾಲೇಜು
ಹಿರೇಕೆರೂರ, ಹಾವೇರಿ ಜಿಲ್ಲೆ

# ಬದುಕಿನಲ್ಲಿ ಧರ್ಮದ ಪಾತ್ರ

**ಉಳಿದ ಪ್ರಮುಖ ಧರ್ಮಗಳಂತೆ ಹಿಂದೂಧರ್ಮ ಏಕದೇವೋಪಾಸನೆಯ ಧರ್ಮವಾಗಿರದಿದ್ದರೂ ಹಲವು ಧಾರ್ಮಿಕ ನಂಬಿಕೆ, ಆಚರಣೆ, ತತ್ವಗಳನ್ನೊಳಗೊಂಡ ಒಂದು ಅಪರೂಪದ ವಿಶಾಲ ಧಾರ್ಮಿಕ ವೇದಿಕೆಯಾಗಿರುವುದು ಅದರ ವಿಶೇಷ ಮೆಚ್ಚುಗೆಯ ಗುಣವಾಗಿರುತ್ತದೆ. ಇನ್ನುಳಿದ ಯಾವುದೇ ಧರ್ಮಕ್ಕೆ ಇರದ ಬಹುಮುಖೀ ಅರ್ಥಾತ್ ಅನೇಕಾಂತವಾದದ ಶ್ರೀಮಂತಿಕೆ ಹಿಂದೂಧರ್ಮಕ್ಕೆ ಇರುವುದು ಒಂದು ವಿಶೇಷ. ಇದನ್ನು ಅರಿಯದ ಅಲ್ಪಮತಿಗಳು ತಮ್ಮಲ್ಲಿ ಏಕದೇವೋಪಾಸನೆ ಇಲ್ಲವೆಂಬ ಕೀಳರಿಮೆಯಿಂದಲೊ ಅಥವಾ ಧರ್ಮದ ತಿರುಳಿನ ಅಜ್ಞಾನದಿಂದಲೊ ಹಿಂದೂಧರ್ಮಕ್ಕೆ ಹೊರತಾದ ಮತಾಂಧತೆಯ ಪೋಷಾಕನ್ನು ತೊಡಿಸಲು ಹೊರಟಿದ್ದಾರೆ.**

ರವೀಂದ್ರ ಹಳಿಂಗಳಿ

ಧರ್ಮ ಇಂದು ಮಂದಿರ ಮಸೀದಿಗಳಿಂದ ಹೊರ ಬಂದು ಜನರ ನಿತ್ಯ ವ್ಯವಹಾರಗಳಲ್ಲಿ ಮಧ್ಯಪ್ರವೇಶ ಮಾಡುತ್ತ ನಡೆದಿದೆ. ಅಯೋಧ್ಯೆಯಲ್ಲಿನ ರಾಮ ಮಂದಿರ, ಬಾಬಾ ಬುಡನಗಿರಿಯ ದತ್ತಪೀಠ-ದರ್ಗಾ ಪೂಜಾವಿಧಿ ವಿಷಯ, ವಾಲೆಂಟಿನ್ ದಿನಾಚರಣೆ, ಜನವರಿ ೧ ಹೊಸ ವರ್ಷದ ದಿನಾಚರಣೆ ಇವೆಲ್ಲ ಇಂದು ಧಾರ್ಮಿಕ ಮಧ್ಯಪ್ರವೇಶದಿಂದ ಚರ್ಚಾಸ್ಪದ, ಕೆಲವೊಂದು ಸಂದರ್ಭಗಳಲ್ಲಿ ವಿಪರೀತ ಗೊಂದಲ ಸೃಷ್ಟಿಸುವ ವಿಷಯಗಳಾಗುತ್ತಿವೆ.

ಧರ್ಮದ ಮೋಡಿ ಎಷ್ಟೊಂದು ಭಯಂಕರವೆಂದರೆ ಅದು ಎತ್ತುವ ವಿಷಯಗಳೇ ಸರ್ವವ್ಯಾಪಿಯಾಗುತ್ತಿವೆ. ದೇಶ ಎದುರಿಸುತ್ತಿರುವ ಭೀಕರ ಬರ, ಬಡತನ, ನಿರುದ್ಯೋಗಗಳಂತಹ ನೈಜ ಸಮಸ್ಯೆಗಳನ್ನು ಮರೆ ಮಾಚುವಷ್ಟು ಸಾಮರ್ಥ್ಯವನ್ನು ಧರ್ಮ ಹೊಂದಿರುತ್ತದೆ ಎನ್ನುವದಕ್ಕೆ ಇಂದು ನಾವು ಕಾಣುತ್ತಿರುವ ರಾಜಕೀಯ, ಧಾರ್ಮಿಕ ಚಿತ್ರಣ ಸಾಕ್ಷಿಯಾಗಿ ನಿಲ್ಲುತ್ತದೆ. ಇಂಥ ಸಂದರ್ಭದಲ್ಲಿ 'ಧರ್ಮ' ಕುರಿತು ಪೂಜ್ಯ, ಆದರ ಪೂರ್ವಕ ಭಾವನೆ ಹೊಂದಿರುವ ಶ್ರೀಸಾಮಾನ್ಯ ಗೊಂದಲ ಮತ್ತು ಗಲಿಬಿಲಿಗೆ ಒಳಗಾಗುತ್ತಾನೆ. ಯಾವುದು ಧರ್ಮ ? ಅದರ ಹೆಸರಲ್ಲಿ ಇಷ್ಟೊಂದು ಅವಾಂತರಗಳು ನಡೆಯುತ್ತಿರಬೇಕಾದಲ್ಲಿ ಧರ್ಮದ ಹೆಸರನ್ನು ಬದಲಿಸಬೇಕೆ, ಅಥವಾ ಅದರ ಹೆಸರಲ್ಲಿ ನಡೆಯುತ್ತಿರುವುದೆಲ್ಲವೂ ಅದರ ವ್ಯಾಪ್ತಿಯಿಂದ ಹೊರತಾದ ವಿಷಯಗಳೆ ? ಎಂಬ ಪ್ರಶ್ನೆ ಪ್ರಸ್ತುತವಾಗುತ್ತದೆ.

ಧರ್ಮ ಕುರಿತು ವ್ಯಾಖ್ಯಾನಗಳಿಗೆ ಅವುಗಳ ಉಗಮ ಬೋಧನೆಗಳ ಕುರಿತು ಸಾಕಷ್ಟು ಕೃತಿಗಳಿವೆ, ವ್ಯಾಖ್ಯಾನಗಳಿವೆ. ಜನರು ದೈನಂದಿನ ಬದುಕನ್ನು ನೆಮ್ಮದಿಯಿಂದ ಕಳೆಯಬೇಕೆಂದಲ್ಲಿ ಭೌತವಸ್ತುಗಳ ಪೂರೈಕೆ ಅವಶ್ಯಕ. ಎಲ್ಲರನ್ನೂ ತೃಪ್ತಿಯಿಂದಿಡಲು ಬೇಕಾದ ವಸ್ತುಗಳನ್ನು ಒದಗಿಸುವ ಸಾಮರ್ಥ್ಯ ಒಂದು ನಿರ್ದಿಷ್ಟ ಕಾಲಘಟ್ಟದ ಉತ್ಪಾದಕ ಶಕ್ತಿಗಳಿಗೆ ಇರುವುದಿಲ್ಲ. ಈ ಸಂದರ್ಭದಲ್ಲಿ ಅಲ್ಪಸಂಖ್ಯಾತ ಆಳುವ ವರ್ಗ ಬಹುಸಂಖ್ಯಾತ ದುಡಿಯುವ ಜನರ ಸಂಪತ್ತನ್ನು ತನ್ನದಾಗಿಸಿಕೊಂಡು ತೃಪ್ತ ಬದುಕನ್ನು ಸಾಗಿಸಲು ಮುಂದಾಗುತ್ತದೆ. ನೇರವಾಗಿ ಈ ರೀತಿ ನಡೆದುಕೊಂಡಲ್ಲಿ ಅದು ದರೋಡೆ ಸಂದರ್ಭವಾಗುವ ಅಪಾಯವಿರುತ್ತದೆ. ಈ ಕಾರಣಕ್ಕಾಗಿ ಬಹುಸಂಖ್ಯೆ ಜನರನ್ನು ಸಂಪತ್ತಿನಿಂದ ದೂರವಿಡಬೇಕೆಂದಾದಲ್ಲಿ ಸಮೂಹ ಸನ್ನಿ ಅಥವಾ ಮೋಡಿ ಮಾಡಬಲ್ಲ ಶಕ್ತಿಯ ಅವಶ್ಯಕತೆ ಅನಿವಾರ್ಯವಾಗುತ್ತದೆ. ಈ ಕಾರಣಕ್ಕಾಗಿಯೇ ಅನಾಗರಿಕತೆಯಿಂದ ನಾಗರಿಕತೆಯತ್ತ ಸಾಗಬೇಕಾದ ಸಂದರ್ಭದಲ್ಲಿ ಉದಯಿಸಿದ ಜಗತ್ತಿನ ಎಲ್ಲ ಪ್ರಮುಖ ಧರ್ಮಗಳು ಒಂದಿಲ್ಲೊಂದು ಮೋಡಿ ತಂತ್ರವನ್ನು ಅನುಸರಿಸಿರುತ್ತವೆ. ಜನರ ಬದುಕನ್ನು ನಿಯಂತ್ರಿಸುವ ಶಕ್ತಿ ಸಮಾಜದ ಉತ್ಪಾದಕ ಶಕ್ತಿಗಳಿಗಿದ್ದರೂ ಸಹ ಅದನ್ನು ಮರೆಮಾಚಿ ಬದುಕನ್ನು ನಿಯಂತ್ರಿಸುವ, ಅಷ್ಟೇ ಏಕೆ ವ್ಯಕ್ತಿಯ ಇಡೀ ವ್ಯಕ್ತಿತ್ವವನ್ನೇ ನಿಯಂತ್ರಿಸುವ ಶಕ್ತಿ, ನಿರ್ಧಾರಕ ಶಕ್ತಿ ಪರಲೋಕದಲ್ಲಿದೆ ಎಂಬ ಭ್ರಮೆಯನ್ನು ಮೂಡಿಸುವದು ಈ ಧರ್ಮಗಳಿಗೆ ಅನಿವಾರ್ಯವಾಗುತ್ತದೆ.

ಮಾನವ ಕುಲದ ರಕ್ಷಕನಾಗಿ ಒಬ್ಬ ಧರ್ಮಪ್ರವರ್ತಕ ಅವತರಿಸುತ್ತಾನೆ. ಧರ್ಮಗಳು ಅಧರ್ಮಗಳಾದಾಗ ಅವನ್ನು ಸರಿಪಡಿಸಲು ಕಾಲಕಾಲಕ್ಕೆ ಅವತರಿಸುವ ಸ್ವಾತಂತ್ರ್ಯ ಪಡೆದುಕೊಂಡಿರುವುದಾಗಿ ಮತ್ತೊಬ್ಬ ಬೋಧಕ ಹೇಳುತ್ತಾನೆ. ತಾನು ಹೇಳಿದ್ದೇ ಅಂತಿಮವಾದುದು, ತನ್ನ ನಂತರ ಬೇರಾರೂ ಇಲ್ಲ, ತಾನು ಬೋಧಿಸಿದ್ದೇ ಅಂತಿಮ ಸತ್ಯವೆಂದು ಇನ್ನೊಬ್ಬ ಧರ್ಮ ಪ್ರವರ್ತಕ ಹೇಳುತ್ತಾನೆ. ನಾಗರಿಕ ಸಮಾಜದ ಸಮೂಹ ಪ್ರಜ್ಞೆ ಇನ್ನೂ ಬೆಳೆದಿರದಿದ್ದ ಕಾಲಘಟ್ಟದಲ್ಲಿ ಮೇಲಿನಂತೆ ಹೇಳಿದರೂ ಸಾಕಾಗುತ್ತಿರಲಿಲ್ಲ. ಈ ಬೋಧನೆಗಳ ಜೊತೆ ಪವಾಡವನ್ನು ಸಹ ಸೃಷ್ಟಿ ಮಾಡಿ ತೋರಿಸಬೇಕಿತ್ತು. ಬಾಯಲ್ಲಿಯೇ ಬ್ರಹ್ಮಾಂಡವನ್ನು ತೋರುವುದು, ಕೆಲವೇ ಕೆಲವು ದಿನಗಳಲ್ಲಿ ಬ್ರಹ್ಮಾಂಡವನ್ನು ಸುತ್ತಿಬರುವುದು, ಹಲವು ಪವಾಡ ಸದೃಶ ಕೈಚಳಕದಿಂದ ರೋಗವನ್ನು ಗುಣಪಡಿಸುವುದು ಇವೆಲ್ಲ ಧರ್ಮ ಬೋಧಕರಿಗೆ ಅನಿವಾರ್ಯವಾಗಿರಬಹುದು. ಇಂದು ಇವುಗಳನ್ನೇ ಹಿಡಿದು ತಮಟೆ ಬಾರಿಸುತ್ತ ಸಾಗಿದರೆ ಅದು ನಾಗರಿಕ ಪ್ರಜ್ಞೆಗೆ ಸವಾಲು ಒಡ್ಡುವ ಅಪಾಯಕಾರಿ ಮೂಲಭೂತವಾದವಾಗಿ ನಿರ್ಮಾಣಗೊಳ್ಳುತ್ತದೆ. ಇಂದು ಜಗತ್ತಿನಾದ್ಯಂತ ಧರ್ಮದ ಹೆಸರಿನಲ್ಲಿ ನಡೆಯುತ್ತಿರುವುದು ಇದೇ ಹೆಚ್ಚಿಗೆ ಆಗಿರುವುದರಿಂದ ಸ್ವಾಭಾವಿಕವಾಗಿಯೇ ನೆಮ್ಮದಿಯನ್ನು ನೀಡಬೇಕಾದ ಧರ್ಮ, 'ಹೃದಯಹೀನರ ಹೃದಯವಾಗ'ಬೇಕಾದ ಧರ್ಮ ನೆಮ್ಮದಿಯನ್ನು ನಾಶಪಡಿಸುವ ಅಸ್ತ್ರವಾಗಿ ಮತಾಂಧ ಶಕ್ತಿಗಳಿಗೆ, ಪ್ರತಿಗಾಮಿಗಳಿಗೆ, ಇವುಗಳನ್ನು ಬಳಸುವ ಸಾಮ್ರಾಜ್ಯಶಾಹಿಗೆ ನೆರವಾಗುತ್ತಲಿದೆ.

ಮಾನವ ಸಮಾಜ ವಿವಿಧ ಹಂತಗಳನ್ನು ದಾಟಿ ಬಂದಿದೆ. ಗುಲಾಮಗಿರಿ, ಪಾಳೆಯಗಾರಿ, ಬಂಡವಾಳಶಾಹಿ ಇತ್ಯಾದಿ ಕಾಲಘಟ್ಟಗಳನ್ನು ದಾಟಿ ಬರುವಾಗ ಶೋಷಕ ಮತ್ತು ಶೋಷಿತ ಜನರ ನಡುವೆ, ಅಂದರೆ ಪರಸ್ಪರ ವಿರೋಧಿ ಹಿತಗಳನ್ನು ಹೊಂದಿದ ಎರಡು ವರ್ಗಗಳ ನಡುವೆ ಶಾಂತಿಯನ್ನು ಏರ್ಪಡಿಸುವುದು ಅನಿವಾರ್ಯವಿತ್ತು. ಈ ಕಾರ್ಯವನ್ನು ಆಯಾ ಕಾಲಘಟ್ಟದಲ್ಲಿ ಉದಯಿಸಿದ ಧರ್ಮಗಳು ಪೂರೈಸಿವೆ. ಪ್ರಪಂಚದ ಯಾವುದೇ ಮೂಲೆಯಲ್ಲಿ 'ಧರ್ಮ' ಉದಯಿಸಿದರೂ ಅದು ಉದಯಿಸಿದ ಸಾಮಾಜಿಕ ಸನ್ನಿವೇಶಗಳು ಒಂದೇ ತೆರನಾಗಿ ಇದ್ದುದರಿಂದ ಪ್ರಪಂಚದ ಬೇರೆಡೆ ಕೂಡ ಈ 'ಧರ್ಮ'ಗಳು ಪಸರಿಸಲು ಸಾಧ್ಯವಾಯಿತು. ಬೌದ್ಧ, ಕ್ರಿಶ್ಚಿಯನ್, ಇಸ್ಲಾಂ ಧರ್ಮಗಳು ಏಶಿಯಾ ಖಂಡದಲ್ಲಿಯೇ ಜನ್ಮ ತಳೆದರೂ ಅವು ಜಾಗತಿಕ ಧರ್ಮಗಳಾಗಿ ಬೆಳೆದುಬಂದುವು. ಹಿಂದೂ ಧರ್ಮ ಎಲ್ಲಕ್ಕಿಂತ ಹಳೆಯ ಧರ್ಮವಾಗಿದ್ದರೂ ಅದು ವರ್ಣಾಶ್ರಮದ ಚೌಕಟ್ಟನ್ನು ಮುರಿದುಬರುವಲ್ಲಿ ವಿಫಲವಾಗಿದ್ದರಿಂದ ಬೇರೆಡೆ ಅದರ ಬೇರುಗಳು ಇಳಿಯಲಿಲ್ಲ. ಇದೇ ಧರ್ಮದಿಂದ ಸಿಡಿದೆದ್ದ ಬೌದ್ಧ ಧರ್ಮ ವರ್ಣಾಶ್ರಮದ ಚೌಕಟ್ಟನ್ನು ಹೊಂದಿರಲಿಲ್ಲ. ಅದು ಬೇರೆಡೆಗೂ ವ್ಯಾಪಿಸಿ ಜಾಗತಿಕ ಧರ್ಮದ ಸ್ಥಾನವನ್ನು ಪಡೆದುಕೊಂಡಿತು. ತನ್ನಿಂದಲೇ ಸಿಡಿದೆದ್ದ

ಶಾಖೆಯೊಂದು ಜಾಗತಿಕ ಧರ್ಮವಾದುದಕ್ಕೆ ಹಿಂದೂ ಧರ್ಮ ತೃಪ್ತಿಪಡುವಂತಾಯಿತು.

ಉಳಿದ ಪ್ರಮುಖ ಧರ್ಮಗಳಂತೆ ಹಿಂದೂಧರ್ಮ ಏಕದೇವೋಪಾಸನೆಯ ಧರ್ಮವಾಗಿರದಿದ್ದರೂ ಹಲವು ಧಾರ್ಮಿಕ ನಂಬಿಕೆ, ಆಚರಣೆ, ತತ್ವಗಳನ್ನೊಳಗೊಂಡ ಒಂದು ಅಪರೂಪದ ವಿಶಾಲ ಧಾರ್ಮಿಕ ವೇದಿಕೆಯಾಗಿರುವುದು ಅದರ ವಿಶೇಷ ಮೆಚ್ಚುಗೆಯ ಗುಣವಾಗಿರುತ್ತದೆ. ಇನ್ನುಳಿದ ಯಾವುದೇ ಧರ್ಮಕ್ಕೆ ಇರದ ಬಹುಮುಖೀ ಅರ್ಥಾತ್ ಅನೇಕಾಂತವಾದದ ಶ್ರೀಮಂತಿಕೆ ಹಿಂದೂ ಧರ್ಮಕ್ಕೆ ಇರುವುದು ಒಂದು ವಿಶೇಷ. ಇದನ್ನು ಅರಿಯದ ಅಲ್ಪಮತಿಗಳು ತಮ್ಮಲ್ಲಿ ಏಕದೇವೋಪಾಸನೆ ಇಲ್ಲವೆಂಬ ಕೀಳರಿಮೆಯಿಂದಲೊ ಅಥವಾ ಧರ್ಮದ ತಿರುಳಿನ ಅಜ್ಞಾನದಿಂದಲೊ ಹಿಂದೂ ಧರ್ಮಕ್ಕೆ ಹೊರತಾದ ಮತಾಂಧತೆಯ ಪೋಷಾಕನ್ನು ಅದಕ್ಕೆ ತೊಡಿಸಲು ಹೊರಟಿದ್ದಾರೆ.

ಜಗತ್ತಿನ ಬೇರೆಲ್ಲೂ ಸಿಗದ ವೈವಿಧ್ಯತೆ ಇಲ್ಲಿದೆ, ಶ್ರೀಮಂತಿಕೆ ಇಲ್ಲಿದೆ. ಇಲ್ಲಿನ ವೈವಿಧ್ಯತೆಗೆ, ವಿಭಿನ್ನತೆಗೆ ಐತಿಹಾಸಿಕ-ಸಾಮಾಜಿಕ ಹಿನ್ನೆಲೆಯಿದೆ. ಭಾರತದಲ್ಲಿನ ಪ್ರತಿ ಕುಟುಂಬ ಕೂಡ ತನ್ನ ವಿಶಿಷ್ಟತೆಯನ್ನು ಕಾಪಾಡಿಕೊಂಡು ಬಂದಿದೆ. ಕುಟುಂಬ ಒಂದಕ್ಕೆ ಮೂಲಪುರುಷನಿರುವುದು, ಮೂಲ ಆರಾಧ್ಯ ದೇವನಿರುವುದು ಬಹುತೇಕ ಹಿಂದೂ ಕುಟುಂಬಗಳಲ್ಲಿ ಕಾಣಸಿಗುವ ದೃಶ್ಯ. ಈ ಆಧಾರದ ಮೇಲೆ ಗೋತ್ರ, ಕುಟುಂಬ ದೇವರುಗಳು ಬೇರೆಬೇರೆಯಾಗಿರುತ್ತವೆ. ಈ ತೆರನಾದ ಕುಟುಂಬ ಆಧರಿತ ಮೂಲ ಪುರುಷ, ದೈವಗಳು ಈಗ ಜಗತ್ತಿನ ಬೇರೆಡೆ ಸಿಗುವುದು ಕಷ್ಟ. ಕ್ರೈಸ್ತ ಧರ್ಮದ ಮುನ್ನಾದಿನಗಳಲ್ಲಿ ರೋಮ್‌ರಾಜ್ಯದಲ್ಲಿ ಈ ತೆರನಾದ ದೇವತೆಗಳು ಇದ್ದ ಬಗ್ಗೆ ಉಲ್ಲೇಖವಿದೆ. ಈ ದೇವತೆಗಳಿಗೆ ಪೂಜೆ ನಡೆಯುತ್ತಿತ್ತು. ಕ್ರೈಸ್ತ ಧರ್ಮದ ಪ್ರವೇಶದ ನಂತರ ಈ ಪದ್ಧತಿ ಮಾಯವಾಯಿತು.

ಭಾರತದಲ್ಲಿ ವಿವಿಧ ದೇವತೆಗಳ ಆಧರಿತ ಪೂಜಾ ಪದ್ಧತಿ ಇಂದಿಗೂ ವ್ಯಾಪಕವಾಗಿ ಜಾರಿಯಲ್ಲಿದೆ. ಇಂಥ ಆಚರಣೆಗೆ ಹಿಂದೂ ಸಮಾಜದಲ್ಲಿನ ಅವಿಭಕ್ತ ಕುಟುಂಬ ಪದ್ಧತಿ ಭದ್ರ ನೆಲೆಯನ್ನು ಒದಗಿಸಿರುತ್ತದೆ. ಆಸ್ತಿಯನ್ನು ಹೊಂದಬಲ್ಲ ಪ್ರತ್ಯೇಕ ಘಟಕಗಳಾಗಿ ಹಿಂದೂ ಅವಿಭಕ್ತ ಕುಟುಂಬಗಳು ರೂಪುಗೊಂಡಿದ್ದರಿಂದ ದೇವತೆಗಳ ವೈವಿಧ್ಯತೆಗೆ, ವಿವಿಧ ಧಾರ್ಮಿಕ ಆಚರಣೆಗಳಿಗೆ ಒಂದು ಆರ್ಥಿಕ-ಸಾಮಾಜಿಕವಾದ ಸ್ವಾಭಾವಿಕ ಚೌಕಟ್ಟು ಇರುವದನ್ನು ಇಂದಿಗೂ ಕಾಣುತ್ತೇವೆ. ಈ ವಿವಿಧತೆಯ ಸಂಪ್ರದಾಯ ಎಷ್ಟೊಂದು ಬಲಿಷ್ಠವೆಂದರೆ ಏಕದೇವೋಪಾಸನೆಯ ಹೆಸರಲ್ಲಿ ಬಂದ ಇಸ್ಲಾಂ, ಕ್ರಿಶ್ಚಿಯನ್ ಧರ್ಮಗಳು ಇಲ್ಲಿನ ಧಾರ್ಮಿಕ ನೆಲೆಗಟ್ಟಿಗೆ ಕೈಹಚ್ಚುವ ಗೋಜಿಗೆ ಹೋಗಲಿಲ್ಲ. ಅಷ್ಟೇ ಏಕೆ, ಹಿಂದೂ ಧರ್ಮದ ಕೆಲವು ಅನಿಷ್ಟಗಳ ಕಡೆ ಕೂಡ ಅವು ಗಮನ ಹರಿಸಲಿಲ್ಲ. ಸತಿ ಪದ್ಧತಿಯಂತಹ ಕ್ರೂರ ಆಚರಣೆಯ ತಡೆ ಕೂಡ ರಾಜಾರಾಮ ಮೋಹನ ರಾಯರಂತಹ ಸಮಾಜ ಸುಧಾರಕರ ಒತ್ತಾಸೆಯ ಫಲವಾಗಿತ್ತು. ನಾಲ್ಕನೇ ಶತಮಾನದಲ್ಲಿ ರೋಮ್‌ರಾಜ್ಯವಾಳಿದ ಲೆಕ್ಸ ಥಿಯೊಡೋಸಿಯಸ್ ಅಲ್ಲಿ ಪ್ರಚಲಿತವಿದ್ದ ಕುಟುಂಬ ದೇವತಾ ಆರಾಧನಾ ಪದ್ಧತಿಯನ್ನು ನಿರ್ಬಂಧಿಸಿ ಆದೇಶ ಹೊರಡಿಸಿದ್ದನ್ನು ನೋಡಿದಲ್ಲಿ ನಮ್ಮ ದೇಶದಲ್ಲಿ ಧಾರ್ಮಿಕ ವಿಷಯಗಳಲ್ಲಿ ಅನ್ಯಧರ್ಮೀಯರಿಂದ ಇಂಥ ಅತಿರೇಕದ ಕ್ರಮಗಳು ಜರುಗಲಿಲ್ಲ ಎನ್ನುವುದು ಗಮನಿಸಬೇಕಾದ ಸಂಗತಿಯಾಗಿರುತ್ತದೆ. ಕೆಲವು ಸಂದರ್ಭಗಳಲ್ಲಿ ಇಂಥ ಅತಿರೇಕದ ಕ್ರಮಗಳನ್ನು ಕೆಲವು ಮತಾಂಧ ಆಳರಸರು ಅನುಸರಿಸಿದಾಗ ಅಂಥ ಆಳ್ವಿಕೆಯ ಗದ್ದುಗೆಗಳೆ ನಾಶವಾಗುವ ಅಪಾಯವನ್ನು ಅವರು ತಂದೊಡ್ಡಿದರು ಎನ್ನುವುದಕ್ಕೆ ಇತಿಹಾಸ ಸಾಕ್ಷಿಯಿದೆ.

ಹಿಂದೂ-ಮುಸ್ಲಿಂ ಧರ್ಮಗಳ ಸಮನ್ವಯದ ತತ್ವದ ಮೇಲೆ ರಾಜ್ಯವಾಳಿದ ಅಕ್ಬರ ಯಶಸ್ವಿ ಮೊಗಲ ಚಕ್ರವರ್ತಿಯಾಗಿ ಒಬ್ಬ ಹೆಸರಾಂತ ಐತಿಹಾಸಿಕ ಆಳರಸನಾಗಿ ಹೊರಹೊಮ್ಮಿದ. ನಂತರದ ಅವಧಿಯಲ್ಲಿ ಬಂದ ಔರಂಗಜೇಬ ಹಿಂದೂಗಳ ಮೇಲೆ ದಬ್ಬಾಳಿಕೆ ನಡೆಸಲು ಜಜಿಯಾ ಕರದಂತಹ ಧಾರ್ಮಿಕ ಕರ ಹೇರಿ ಮತಾಂಧತೆಯನ್ನು ಮೆರೆಯಲು ಹೋದ. ಈ ರೀತಿ ಪ್ರತಿಗಾಮಿ ಮತಾಂಧ ನೀತಿ ಅನುಸರಿಸುವುದರೊಂದಿಗೆ ಆತ ಮೊಗಲ ಸಾಮ್ರಾಜ್ಯದ ಅವನತಿಯ ಬೀಜವನ್ನು ಬಿತ್ತಿದಂತಾಗಿತ್ತು ಎಂಬುದಕ್ಕೆ ಆತನ ನಂತರದ ಇತಿಹಾಸ ಸಾಕ್ಷಿಯಾಗಿದೆ. ಆತ ಹಿಂದೂಗಳಿಗಷ್ಟೇ ಧರ್ಮಾಂಧನಾಗಿರಲಿಲ್ಲ, ಶಿಯಾ ಮುಸ್ಲಿಂರಿಗೂ ದುಃಸ್ವಪ್ನವಾಗಿದ್ದ.

ಮತಾಂಧತೆ ನಾಗರಿಕತೆಗೆ, ಅಭಿವೃದ್ಧಿಗೆ ಮಾರಕವಾದ ಸಿದ್ಧಾಂತವಾಗಿರುತ್ತದೆ ಎನ್ನುವುದಕ್ಕೆ ಮುಸ್ಲಿಂ ರಾಷ್ಟ್ರಗಳ ಹಿನ್ನೆಲೆ ನೋಡಿದಲ್ಲಿ ಅರ್ಥವಾಗುತ್ತದೆ. ಎರಡನೇ ಸಹಸ್ರಮಾನದ ಆರಂಭದ ದಿನಗಳಲ್ಲಿ ವಿಜ್ಞಾನ ಬೆಳಕನ್ನು ಕಾಣುವ ಲಕ್ಷಣ ತೋರುತ್ತಿದ್ದ ಮಧ್ಯ ಪ್ರಾಚ್ಯದ ದೇಶಗಳಲ್ಲಿ ಇಸ್ಲಾಂ ಮೂಲಭೂತವಾದ ತನ್ನ ಗರಿಯನ್ನು ಬಿಚ್ಚಹತ್ತಿದಾಗ ಬಹಳಷ್ಟು ಬುದ್ಧಿವಂತರು ಯುರೋಪ್ ದೇಶಗಳಿಗೆ ವಲಸೆ ಹೋದರು. ಯಹೂದಿಗಳ ಮೇಲೆ ದಬ್ಬಾಳಿಕೆ ನಡೆಸಿದ ಜರ್ಮನಿ ತನ್ನ ಪ್ರತಿಗಾಮಿ ನೀತಿಗಳಿಂದಾಗಿ ಒಂದು ಕ್ರಿಯಾಶೀಲ ಜನಸಮುದಾಯವನ್ನು ಅಮೇರಿಕಕ್ಕೆ ಅಟ್ಟಿದಂತಾಯಿತು. ಇತಿಹಾಸದಿಂದ ಪಾಠ ಕಲಿಯದ ಜನ ಇಂದು ಭಾರತದಲ್ಲೂ ಪ್ರತಿಗಾಮಿ ಮತಾಂಧ ವಾತಾವರಣ ಸೃಷ್ಟಿಸಲು ಯತ್ನಿಸುತ್ತಿದ್ದಾರೆ. ವಿಜ್ಞಾನ, ಕಲೆ, ಸಾಹಿತ್ಯ, ಶಿಲ್ಪಕಲೆ ಹೀಗೆ ಹತ್ತು ಹಲವು ಶಾಖೆಗಳಲ್ಲಿ ವಿವಿಧ ಧರ್ಮದ ಶ್ರೀಮಂತ ಪರಂಪರೆಯ ಜನ ಭಾರತದ ನಾಗರಿಕತೆಯ, ಸಂಸ್ಕೃತಿಯ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ. ಬೌದ್ಧ ಮತ್ತು ಜೈನ ಧರ್ಮೀಯರ ಸಂದರ್ಭದಲ್ಲಿ ಹಿಂದೂಗಳಿಂದ ಕೆಲವು ಅತಿರೇಕದ ಕೃತ್ಯಗಳು ಜರುಗಿದವು. ಬೌದ್ಧ ಚೈತ್ಯಾಲಯಗಳು, ಜೈನ ಬಸದಿಗಳು ಕೆಲವೆಡೆ ಹಿಂದೂ ದೇವಾಲಯಗಳಾಗಿ ಮಾರ್ಪಟ್ಟವು. ಇದಕ್ಕೂ ಪೂರ್ವದಲ್ಲಿ ಶೈವ ಮತ್ತು ವೈಷ್ಣವ ಮತಾವಲಂಬಿಗಳ ಅಂತರ ಸಂಘರ್ಷದ ಸಂದರ್ಭಗಳಲ್ಲಿ ದೇವಾಲಯಗಳು ಬೇರೆ ಬೇರೆಯಾಗಿ ಅನೇಕ ಕಡೆಗಳಲ್ಲಿ ಪರಿವರ್ತನೆಗೊಂಡ ಉದಾಹರಣೆಗಳಿವೆ. ಔರಂಗಜೇಬನಂತಹ ಮತಾಂಧನ ಆಳ್ವಿಕೆಯ ಕಾಲದಲ್ಲಿ ಈ ತೆರನಾದ ಧಾರ್ಮಿಕ ಅತಿರೇಕಗಳು ಘಟಿಸಿವೆ. ನಮ್ಮ ದೇಶದ ಚರಿತ್ರೆಯ ಪುಟಗಳಲ್ಲಿ ಕಾಲಕ್ರಮೇಣ ಇವು ಮಾಸಿಹೋದ ಪುಟಗಳಾಗಿವೆ ವಿನಃ ಈ ಕಹಿಗಳಿಗೆ ಜೀವ ತುಂಬಲು ನಮ್ಮ ಪರಂಪರೆ ಪ್ರೋತ್ಸಾಹ ನೀಡಿರುವುದಿಲ್ಲ. ಧಾರ್ಮಿಕ ಸೇಡು ಮತ್ತು ಪ್ರತಿಕ್ರಿಯೆಗಳು ಭವ್ಯ ಭಾರತ ದೇಶದ ಇತಿಹಾಸದ ಪುಟಗಳಲ್ಲಿ ಸಿಗುವುದು ವಿರಳ. ಆದರೆ ಇಂದು ಭವ್ಯ ಭಾರತದ ಇತಿಹಾಸದ ಹೆಸರಲ್ಲಿ ಕೆಲವು ಮತಾಂಧರು ನಮಗೆ ಪರಕೀಯವಾದ, ನಾಗರಿಕತೆಗೆ ಹೊರತಾದ ಸೇಡು ಮತ್ತು ಕೋಮು ವಿಷದ ಜ್ವಾಲೆಯನ್ನು ಇತಿಹಾಸದ ಪುಟಗಳಲ್ಲಿ ತುಂಬಲು ಯತ್ನಿಸುತ್ತಿದ್ದಾರೆ.

ಇಸ್ಲಾಂ ಮತ್ತು ಕ್ರೈಸ್ತ ಧರ್ಮೀಯರ ಮಧ್ಯೆ ಪಶ್ಚಿಮದಲ್ಲಿ ನಡೆದ ಕಾಳಗಗಳ ಹಿನ್ನೆಲೆಯಲ್ಲಿ ಇತಿಹಾಸಕಾರರು ಎರಡು ಪ್ರಮುಖ ಧರ್ಮಗಳ ಕುರಿತು ಉಲ್ಲೇಖಿಸುತ್ತಾರೆ. ಒಂದು ಕೈಯಲ್ಲಿ ಖಡ್ಗ ಇನ್ನೊಂದು ಕೈಯಲ್ಲಿ ಧರ್ಮಗ್ರಂಥದಿಂದ ದಾಳಿ ನಡೆಸಲಾಯಿತೆಂದು ಹಲವು ಸಂದರ್ಭಗಳಲ್ಲಿ ಉಲ್ಲೇಖಿಸುತ್ತಾರೆ. ಇಂಥ ಧರ್ಮಗಳು ಭಾರತಕ್ಕೆ ಆಗಮಿಸಿದಾಗ ಅವುಗಳ ಸ್ವರೂಪ ಬದಲಾಯಿಸಿತೆಂದೂ ವ್ಯಾಖ್ಯಾನಿಸುತ್ತಾರೆ. ಇಸ್ಲಾಂ ಧರ್ಮ ಕುರಿತು ಬರೆಯುವಾಗ ಬ್ರಿಟಿಷ್ ಇತಿಹಾಸಕಾರನೊಬ್ಬ ಇಸ್ಲಾಂ ಗಂಗೆಯಲ್ಲಿ ಮಿಂದು ಮೇಲೆದ್ದ ನಂತರ ಅದು ತನ್ನ ಸ್ವರೂಪವನ್ನು ಬದಲಾಯಿಸಿಕೊಂಡಿತೆಂದು ಹೇಳುತ್ತಾನೆ. ಇದರರ್ಥ ಇಸ್ಲಾಂ ಧರ್ಮ ಕೂಡ ಭಾರತೀಯ ಧರ್ಮವಾಗಿ ಮಾರ್ಪಟ್ಟಿತು ಎಂಬುದಾಗಿದೆ. ಐತಿಹಾಸಿಕವಾಗಿ ಎಲ್ಲ ಪ್ರಮುಖ ಧರ್ಮಗಳು ಭಾರತೀಯ ಧರ್ಮವಾಗಿಯೇ ಭಾರತೀಯರ ಬದುಕಿನಲ್ಲಿ ಹಾಸುಹೊಕ್ಕಿವೆ. ತೀರಾ ಇತ್ತೀಚೆಗೆ ಮದರ್ ತೆರೆಸಾ ಕುರಿತಾದ ಕಾರ್ಯಕ್ರಮ ಒಂದು ವ್ಯಾಟಿಕನ್‌ದಲ್ಲಿ ನಡೆಯಿತು. ಭಾರತದಿಂದ ಭಾಗ ವಹಿಸಿದ ಕ್ರಿಶ್ಚಿಯನ್ ತಮಿಳು, ಬಂಗಾಳಿ, ಮಲೆಯಾಳಮ್ ಮಹಿಳೆಯರು ಅಲ್ಲಿ ಭಾರತೀಯ ಉಡುಪಿನಲ್ಲಿ ಹಾಡಿದ್ದು, ಪುಷ್ಪವೃಷ್ಟಿ ಮಾಡಿದ್ದು ಇತ್ಯಾದಿ ನೋಡಿದಾಗ ಪೋಪ್ ಜಾನ್ ಪಾಲರ ಎದುರಿನಲ್ಲಿ ನಡೆಯುತ್ತಿದ್ದ ಸಮಾರಂಭ ಭಾರತೀಯ ನಗರಗಳಲ್ಲಿ ನಡೆಯುವ ಧಾರ್ಮಿಕ ಸಮಾರಂಭಗಳನ್ನು ನೆನಪಿಗೆ ತರುತ್ತಿತ್ತು.

ಅನಾಗರಿಕತೆಯಿಂದ ನಾಗರಿಕತೆಯ ಹೊಸ್ತಿಲಕ್ಕೆ ಮಾನವ ಸಮಾಜವನ್ನು ಕೊಂಡೊಯ್ಯಲು ಉದಯಿಸಿದ ಧರ್ಮಗಳು, ವಿವಿಧ ಐತಿಹಾಸಿಕ ಕಾಲಘಟ್ಟಗಳಲ್ಲಿ, ತಮ್ಮ ಸಕಾರಾತ್ಮಕ ಪಾತ್ರವನ್ನು ನಿರ್ವಹಿಸಿವೆ. ಹಿಂದೂಧರ್ಮ ಸ್ವಾಭಾವಿಕವಾಗಿಯೇ ಅನೇಕಾಂತವಾದದ ತಿರುಳಾಗಿದ್ದರಿಂದ, ಬಹುಮುಖಿ ವೇದಿಕೆಯಾಗಿದ್ದರಿಂದ ಇಸ್ಲಾಂ ಅಥವಾ ಕ್ರೈಸ್ತ ಧರ್ಮದೊಂದಿಗೆ ವ್ಯವಹರಿಸುವಲ್ಲಿ ಅದಕ್ಕೆ ತೊಡಕುಂಟಾಗಲಿಲ್ಲ. ಹಿಂದೂಧರ್ಮದ ವಿವಿಧತೆಗೆ ಈ ಧರ್ಮಗಳು ಇನ್ನಷ್ಟು ಮೆರುಗನ್ನು ನೀಡಲು ನೆರವಾದವೇ ವಿನಃ ವ್ಯತಿರಿಕ್ತ ಪರಿಣಾಮ ಬೀರಲಿಲ್ಲ. ಎರಡನೇ ಸಹಸ್ರಮಾನದ ಆರಂಭದಿಂದ ಹಿಡಿದು ಮಧ್ಯಕಾಲದವರೆಗೆ ಕಾಣಬರುವ ಭಕ್ತಿಪಂಥ, ಶರಣ ಚಳುವಳಿಗಳಂತಹ ಭಾರತದೇಶದಲ್ಲಿ ನಡೆದುಹೋದ ಹಲವು ಧಾರ್ಮಿಕ ಚಳುವಳಿಗಳು, ಆಯಾಮಗಳು ಭಾರತೀಯ ಸಾಂಸ್ಕೃತಿಕ ಶ್ರೀಮಂತಿಕೆಯನ್ನು, ಧಾರ್ಮಿಕ ಪರಂಪರೆಗಳನ್ನು ಶ್ರೀಮಂತಗೊಳಿಸಿವೆ. ಮೊಗಲ ಸಾಮ್ರಾಟ ಅಕ್ಬರನಂತೂ ಹಿಂದೂ-ಮುಸ್ಲಿಂ ಎರಡನ್ನು ಒಳಗೊಂಡಂತೆ ಹೊಸ ಧರ್ಮ ದಿನ್-ಇ-ಇಲಾಹಿ ಹುಟ್ಟುಹಾಕಲು ಯತ್ನಿಸಿದ. ಔರಂಗಜೇಬನಿಗೆ ಬದಲಾಗಿ ಆತನ ಹಿರಿಯ ಅಣ್ಣ ದಾರಾ ಸುಖೊ ಒಂದು ವೇಳೆ ದಿಲ್ಲಿ ಸಿಂಹಾಸನಕ್ಕೆ ಏರಿದ್ದರೆ, ಔರಂಗಜೇಬನ ಮತಾಂಧತೆ ಒಂದು ವಿಮುಖ ಪರಿಣಾಮ ಬೀರಿದ್ದನ್ನು ಈ ದೇಶ ಕಾಣುತ್ತಿರಲಿಲ್ಲ.

ಮೊಹರಂದಲ್ಲಿ ಬಹುಸಂಖ್ಯ ಹಿಂದೂಗಳು ಮುಸ್ಲಿಂ ಬಂಧುಗಳ ಜೊತೆ ಸಮಾನವಾಗಿ ಭಾಗವಹಿಸುವುದನ್ನು ಇಂದಿಗೂ ಕಾಣುತ್ತೇವೆ. ಮೊಹರಂಗಳಲ್ಲಿ ದೇವರುಗಳನ್ನು (ಪೀರಪಾಂಜಾ) ಕೂಡ್ರಿಸುವದು ದೀಪ-ಧೂಪ ಹಚ್ಚುವುದು, ನೈವೇದ್ಯ ಇವೆಲ್ಲ ನಡೆದುಕೊಂಡು ಬರುತ್ತಿರುವುದು ಇಸ್ಲಾಂ ಧರ್ಮದ ವೈವಿಧ್ಯತೆಗೆ ಸಾಕ್ಷಿಯಾಗಿವೆ. ಆದರೆ ಈಗ ಇದನ್ನೆಲ್ಲ ಪ್ರಶ್ನಿಸುವ ರೀತಿಯಲ್ಲಿ ಉಭಯ ಕಡೆಯ ಧಾರ್ಮಿಕ ಮೂಲಭೂತವಾದಿಗಳು ಸೌಹಾರ್ದ ಧಾರ್ಮಿಕ ಆಚರಣೆಗಳಿಗೆ ಅಡ್ಡ ಬರುತ್ತಾರೆ. ಅನಾಗರಿಕತೆಯಿಂದ ನಾಗರಿಕತೆ ಎಡೆಗೆ ಸಮಾಜವನ್ನು ಕೊಂಡೊಯ್ಯಲು ಉದಯಿಸಿದ ಧರ್ಮಗಳ ಸ್ಥಿತಿ ಧಾರ್ಮಿಕ ಮತಾಂಧರಿಂದ ದುಃಸ್ಥಿತಿಯಾಗಿ ಬದಲಾಗಿದೆ.

ಸಮಾಜವನ್ನು ನಾಗರಿಕಗೊಳಿಸಿದ ಧರ್ಮಗಳನ್ನೇ ಅನಾಗರಿಕಗೊಳಿಸಲು ಯತ್ನಗಳು ಮತಾಂಧರಿಂದ ನಡೆಯುತ್ತಲಿವೆ. ಒಬ್ಬ ಮೂರ್ಖ ಧರ್ಮಯುದ್ಧ ನಡೆಸಲು ಕರೆ ನೀಡುತ್ತಾನೆ, ಇನ್ನೊಬ್ಬ ಮೂರ್ಖ ಧರ್ಮದ ಹೆಸರಲ್ಲಿ ತ್ರಿಶೂಲ ಹಂಚಲು ಹೊರಡುತ್ತಾನೆ. ಸದ್ಯ ಪರಶು ರಾಮನ ಭಕ್ತರಾರೂ ಕೊಡಲಿಯನ್ನು ವಿತರಿಸಲು ಮುಂದೆ ಬಂದಿಲ್ಲವಲ್ಲ ಎಂಬ ಸಮಾಧಾನದಿಂದ ತೃಪ್ತರಾಗಬೇಕಿದೆ! ಜಾಗತೀಕರಣ ಹೆಸರಲ್ಲಿ ಜಗತ್ತನ್ನು ಕಬಳಿಸಲು ಕುಳಿತಿರುವ ಅಮೆರಿಕನ್ ಸಾಮ್ರಾಜ್ಯಶಾಹಿ ಮತ್ತದರ ಬಾಲಬಡುಕ ಶಕ್ತಿಗಳು ಪ್ರಪಂಚದಾದ್ಯಂತ ಹಸಿವು, ಬಡತನ, ನಿರುದ್ಯೋಗ ಬಿತ್ತುತ್ತಲಿವೆ. ಅದರ ಈ ಸರ್ವನಾಶದ ಬಿತ್ತನೆಗೆ ಜನರು ಅಡ್ಡ ಬರದಿರಲಿ ಎಂಬ ಕಾರಣಕ್ಕಾಗಿ ಧರ್ಮ, ಜನಾಂಗೀಯ ವಿಶಿಷ್ಟತೆ, ರಾಷ್ಟ್ರೀಯ ವಿಭಿನ್ನತೆಗಳನ್ನು ಬಳಸಿಕೊಂಡು ಜನರನ್ನು, ಅದರಲ್ಲೂ ದುಡಿಯುವ ಜನರನ್ನು ವಿಭಜಿಸಲು ಹೊರಟಿದೆ. ಅದರ ಈ ಷಡ್ಯಂತ್ರಕ್ಕೆ ಜಾಗತಿಕ ಧರ್ಮಗಳ ಮತಾಂಧರು ಒಳಗಾಗಿ ಜನರನ್ನು ಬಲಿಪಶುಗಳನ್ನಾಗಿ ಮಾಡಲು ಹೊರಟಿರುವುದು ಇಂದಿನ ಬೆಳವಣಿಗೆಯಾಗಿದೆ. ಧರ್ಮಾಂಧತೆ ಫ್ಯಾಸಿಸಂ ಆಗಿ ಮಾನವಕುಲವನ್ನು ಕಬಳಿಸಲು ಯತ್ನಿಸುತ್ತದೆ. ಅದನ್ನು ತಡೆಯುತ್ತೇವೆಂದು ಪುರೋಗಾಮಿ ಶಕ್ತಿಗಳು ಘೋಷಿಸುತ್ತವೆ. ಫ್ಯಾಸಿಸಂ ಅರ್ಧ ದಾರಿಯಿಂದ ಹೊರಳಿ ಹೋದ ಉದಾಹರಣೆಗಳು ಜಗತ್ತಿನ ಇತಿಹಾಸದಲ್ಲಿ ಸಿಗುವುದು ವಿರಳ. ಎಲ್ಲ ವಿಷಯದಲ್ಲೂ ವಿಶಿಷ್ಟ ದೇಶವಾಗಿರುವ ಭಾರತದಲ್ಲಿ ಫ್ಯಾಸಿಸಂನ್ನು ಅರ್ಧ ದಾರಿಯಿಂದಲೇ ಓಡಿಸುವ ಸಾಧ್ಯತೆಗಳಿವೆ ಎಂದು ನಮ್ಮ ಪರಂಪರೆಯ ಬೆಂಬಲದಿಂದ ಹೇಳಬಹುದಾಗಿದೆ. ಕೊನೆಯಲ್ಲಿ ಹೇಳುವುದಾದರೆ, ಇತಿಹಾಸ ಒಂದೇ ಇದಕ್ಕೆಲ್ಲ ಸಾಕ್ಷಿಯನ್ನು ಒದಗಿಸಬೇಕಾಗಿದೆ. ಅಲ್ಲಿಯವರೆಗೆ ಮಾನವತೆಗಾಗಿ ಮಿಡಿಯುವ ಮನಗಳು ವಿಶ್ರಮಿಸದಿರಲಿ!

ರವೀಂದ್ರ ಹಳಿಂಗಳಿ
ಗಣಪತಿ ಗಲ್ಲಿ, ಜಮಖಂಡಿ

# ಸಾದರ ಸ್ವೀಕಾರ

**ಜೀವಜಗತ್ತಿನ ಕೌತುಕಗಳು : ಚಲನೆ**
*ಡಾ|| ಎನ್. ಎಸ್. ಲೀಲಾ*
**ಪುಟ :** ೭೨ **ಬೆಲೆ : ರೂ :** ೬೦
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಸಮೂಹ ಮಾಧ್ಯಮಗಳು ಮತ್ತು ಸಮಾಜ** (ಲೇಖನ ಸಂಗ್ರಹ) *ಡಾ|| ಡಿ. ಬಿ. ನಾಯಕ*
**ಪುಟ :** ೧೪೨ **ಬೆಲೆ : ರೂ.** ೧೦೦
**ಬಂಜಾರ ಪ್ರಕಾಶನ,** ನಂ. ೪೪, ಶಂಕರ್ ಕೃಪಾ, ಸದಾಶಿವನಗರ, ಗುಲಬರ್ಗಾ-೫೮೫ ೧೦೨

**ನಿತ್ಯ ಚೇತನ** (ಕವನ ಸಂಕಲನ) ಎನ್. ವಿ. ನಾಯಕ
**ಪುಟ :** ೭೦ **ಬೆಲೆ : ರೂ.** ೪೦
**ದ್ವಿತೀಯ ಅಭಿಪ್ರಾಯ** (ಹರಟೆಗಳು)
*ಡಾ|| ಜಿ. ಡಿ. ಜೋಷಿ*
**ಪುಟ :** ೭೮ **ಬೆಲೆ : ರೂ.** ೪೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಶ್ರೀ ರಾಘವೇಂದ್ರ ಪ್ರಕಾಶನ, ಅಂಬಾರಕೊಡ್ಲ, ಅಂಕೋಲಾ - ೫೮೧ ३೧೪, ಉತ್ತರ ಕನ್ನಡ.

ಇಬ್ಬನಿ (ಕವನ ಸಂಕಲನ) ಅಪ್ಪಾ ಸಾಹೇಬ ಅಲಿಬಾದಿ
**ಪುಟ :** ೭೪ **ಬೆಲೆ : ರೂ.** ೬೦
ವಚನ ವಲ್ಲರಿ (ವಚನ ಸಂಗ್ರಹ)
ಅಪ್ಪಾ ಸಾಹೇಬ ಅಲಿಬಾದಿ
**ಪುಟ :** ೬೪ **ಬೆಲೆ : ರೂ.** ೬೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ವಿನೂತನ ಪ್ರಕಾಶನ, 'ಶಾಂತಿನಿಕೇತನ', ಎಚ್.ಬಿ.ಸಿ. ಹತ್ತಿರ, ಅಥಣಿ - ೫೯೧ ೩೦೪, ಬೆಳಗಾವಿ ಜಿಲ್ಲೆ

ಕಾವ್ಯ ಚಿಗುರು (ಕವನ ಸಂಕಲನ) ರಮೇಶ
**ಪುಟ :** ೨೪ **ಬೆಲೆ : ರೂ.** ೨೦
ಮನದಲ್ಲಿ ಮನೆಯ ಮಾಡಿ (ಕವನ ಗುಚ್ಛ) ರಮೇಶ
**ಪುಟ :** ೪೮ **ಬೆಲೆ : ರೂ.** ३೦

ನಮ್ಮ ನಿಮ್ಮೊಳಗೆ (ಕವನ ಸಂಕಲನ) ರಾಜೀವ
**ಪುಟ :** ೬೦ **ಬೆಲೆ : ರೂ.** ३೫
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಭಾಗ್ಯಶ್ರೀ ಪ್ರಕಾಶನ,** ಅಜ್ಜೀಬಳ, ಶಿರಸಿ, ಉತ್ತರ ಕನ್ನಡ, ಪಿನ್ - ೪೮೧ ३೪೦

**ನಮನ** (ವಚನಗಳು) ತೋಟದ ಮನೆ ಚನ್ನಬಸವಯ್ಯ
**ಪುಟ :** ೭೮ **ಬೆಲೆ : ರೂ.** ೫೦
**ವಿಜ್ಞಾನಿಗಳಿಗೆ ಸವಾಲು !!!** (ಲೇಖನಗಳು)
ಜಿ. ಮಲ್ಲಿಕಾರ್ಜುನಯ್ಯ
**ಪುಟ :** ೧೧೪ **ಬೆಲೆ : ರೂ.** ೫೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಹೊಂಬಾಳೆ ಪ್ರಕಾಶನ,** ಹುಳಿಯಾರು - ೫೭೨ ೨೧೮, ತುಮಕೂರು ಜಿಲ್ಲೆ

**ಸ್ವಾಸ್ಥ್ಯ ಬದುಕಿಗೆ ಯೋಗ** (ಲೇಖನಗಳು)
*ಡಾ|| ಎ. ಆರ್. ಸೀತಾರಾಮ್*
**ಪುಟ :** ೧೬೦ **ಬೆಲೆ : ರೂ.** ೨೫೦
**ಪರಮಹಂಸ ಯೋಗ ಚಿಕಿತ್ಸಾ ಕೇಂದ್ರ,** ನಂ. ೨೦೮, ದೀಪದರ್ಶಿನಿ, ಸಿಎಫ್‌ಟಿಆರ್‌ಐ ಕಾಲೋನಿ, ಬೋಗಾದಿ ಎರಡನೇ ಹಂತ, ಮೈಸೂರು - ೫೭೦ ೦೦೬

ಗೀತ ಲಹರಿ (ಹಾಸ್ಯ ಬರಹಗಳ ಸಂಕಲನ)
ಗೀತಾ ಸೀತಾರಾಮ್
**ಪುಟ :** ೫೪ **ಬೆಲೆ : ರೂ.** ೪೦
**ರಂಗದರ್ಶನ** (ಎರಡು ರೂಪಕಗಳು)
ಗೀತಾ ಸೀತಾರಾಮ್
**ಪುಟ :** ४೬ **ಬೆಲೆ : ರೂ.** ೪೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಸ್ವಾತಿ ಪ್ರಕಾಶನ, ನಂ. ೨೦೮, ದೀಪದರ್ಶಿನಿ, ಸಿಎಫ್‌ಟಿಆರ್‌ಐ ಕಾಲೋನಿ, ಬೋಗಾದಿ ಎರಡನೇ ಹಂತ, ಮೈಸೂರು - ೫೭೦ ೦೦೬.

**ಸುನೀತ ಶತ** (ಕವನಗಳು) ಸಿ.ಪಿ.ಕೆ.
**ಪುಟ :** ೭೨ **ಬೆಲೆ : ರೂ.** ೬೦

**ಚಿತ್ರಭಾನು ಪ್ರಕಾಶನ,** ನಂ. ೨೨೬೫/೧೯, 'ಭಾರತಿ', ವಿನಾಯಕನಗರ, ಮೈಸೂರು - ೫೭೦ ೦೧೨.

**ಕೋಟಿ ಬೆಟ್ಟದ ಎತ್ತರಾಯನ ವಚನಗಳು**
ಕೂನಮುದ್ದನಹಳ್ಳಿ ಗಿರೀಗೌಡ ಗಿರಿಯಪ್ಪ
**ಪುಟ :** ೫೨ **ಬೆಲೆ : ರೂ.** ೧೦
**ಮಧು ಪ್ರಕಾಶನ,** ಕೊಳಾಯಿ ಮನೆ ಮಾರ್ಗ, ೨ನೇ ಅಡ್ಡರಸ್ತೆ, ಕನಕಪುರ - ೫೬೨ ೧೧೨

ಹನಿ ಜೇನು (ವಿವಿಧ ಲೇಖಕರ ಚುಟುಕು ಪದ್ಯಗಳು)
ಸಂ : ವಿ. ಎಚ್. ವೀರಣ್ಣ ಮಂಡಾಳಕರ
**ಪುಟ :** ೧೦೬ **ಬೆಲೆ : ರೂ.** ೫೦
**ಹುವಪ್ಪೋರ್ ಪ್ರಕಾಶನ,** ಅಂಚೆ ಮಂಠಾಳ
ಪಿನ್ - ೫೮೫ ४೧೯, ಬಸವಕಲ್ಯಾಣ, ಬೀದರ್ ಜಿಲ್ಲೆ.

**ಬದುಕು : ಭಾವನೆಗಳ ನಡುವೆ** (ಲೇಖನಗಳು)
ಎನ್. ವಿಶ್ವರೂಪಾಚಾರ್
**ಪುಟ :** ೬೪ **ಬೆಲೆ : ರೂ.** ೧೫
**ಪದ್ಮಶ್ರೀ ಪ್ರಕಾಶನ,** ನಂ. ೭೭, ೬ನೇ ಮುಖ್ಯರಸ್ತೆ, ಎಚ್.ವಿ.ಆರ್. ಲೇಔಟ್, ಪ್ರಶಾಂತನಗರ, ಬೆಂಗಳೂರು - ೫೬೦ ೦೭೯

**ಸೂಕ್ತಿಗಳಲ್ಲಿ ಜಾನಪದ** ಟಿ. ವಿ. ವೆಂಕಟರಮಣಯ್ಯ
**ಪುಟ :** ೪೮ **ಬೆಲೆ : ರೂ.** ೨೦
ಪ್ರಕಾಶಕರು : **ಟಿ. ವಿ. ವೆಂಕಟರಮಣಯ್ಯ,** ಈಡಬ್ಲ್ಯುಎಸ್ -೨೧೮, ಕೆಹೆಚ್‌ಬಿ ಕಾಲೋನಿ ೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರನಗರ, ಬೆಂಗಳೂರು - ೭೯
ಇದೇ ಲೇಖಕರು ಸದುಪಯೋಗಕ್ಕೆಂದು **ಆರೋಗ್ಯಕ್ಕೆ ನಡಿಗೆ, ಲಂಚ, ಆರೋಗ್ಯಕ್ಕೆ ಸ್ನಾನ, ಸ್ವಾರ್ಥ-ನಿಸ್ವಾರ್ಥ, ಬಾಳಿಗೊಂದು ಗುರಿ, ಪ್ರಾಮಾಣಿಕತೆ, ಇತಿಹಾಸ** ಮುಂತಾದ ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

**ವಚನಭ್ರಷ್ಟತೆಯಲ್ಲಿ ಬಿ.ಜೆ.ಪಿ. ಪ್ರಕಾಶಿಸುತ್ತಿದೆ**
*ಸಂಗ್ರಹ : ಪಿ. ವಿ. ಲೋಕೇಶ್*
**ಪುಟ :** ೬೦ **ಬೆಲೆ : ರೂ.** ೧೦
ಮತದಾರ ಜಾಗರಣ ವೇದಿಕೆ, 'ಲೋಕ ಸುಪ್ರದಿ', ೨ನೇ ಕ್ರಾಸ್, ಪೆನ್ಷನ್ ಮೊಹಲ್ಲಾ, ಚಿಕ್ಕಮಗಳೂರು

**ಎಲ್. ವಿ. ಶಾಂತಕುಮಾರಿ**

ಜ್ಞಾನಪೀಠ ಪ್ರಶಸ್ತಿ ವಿಜೇತೆ ಶ್ರೀಮತಿ ಮಹಾಶ್ವೇತಾದೇವಿಯವರ ಮುಖ್ಯ ಕಾಳಜಿ ಸಮಾಜದಲ್ಲಿ ಅವಗಣನೆಗೆ, ತುಳಿತಕ್ಕೆ, ನಿರ್ಲಕ್ಷ್ಯಕ್ಕೆ ಒಳಗಾಗಿರುವವರ ಹಾಗೂ ಬುಡಕಟ್ಟು ಜನಾಂಗದವರ ಸಾಂಸ್ಕೃತಿಕ ಪರಂಪರೆಯನ್ನು, ಅವರ ಜೀವನದಲ್ಲಿ ಹಾಸು ಹೊಕ್ಕಾಗಿರುವ ವ್ಯಥೆ, ವೇದನೆಗಳನ್ನು ತಮ್ಮ ಬರಹಗಳ ಮೂಲಕ ಅಭಿವ್ಯಕ್ತಿಸಿ, ಸ್ವತಃ ಬುಡಕಟ್ಟು ಜನಾಂಗದಲ್ಲಿ ಮತ್ತು ನಾಗರಿಕ ಸಮಾಜದಲ್ಲಿ ಜಾಗೃತಿ ಮೂಡಿಸುವುದಾಗಿದೆ. ಮಹಾಶ್ವೇತಾದೇವಿಯವರ 'ರುಡಾಲಿ' ಚಲನಚಿತ್ರವಾಗಿ ಪ್ರಸಿದ್ಧವಾದದ್ದಲ್ಲದೆ, ಅನೇಕ ಕಡೆ ಹಲವಾರು ಭಾಷೆಗಳಲ್ಲಿ ನಾಟಕವಾಗಿ ಪ್ರದರ್ಶನಗೊಂಡಿದೆ. ಸ್ವಾತಂತ್ರ್ಯಾನಂತರ ತೀರಾ ನಿರ್ಲಕ್ಷ್ಯಕ್ಕೆ ಒಳಗಾಗಿ, ತಮ್ಮ ಜೀವನಾಧಾರವಾಗಿದ್ದ ಕಾಡನ್ನು ಕಳೆದುಕೊಂಡು, ದುರ್ಭರ ಜೀವನ ನಡೆಸುತ್ತಿರುವ ಬುಡಕಟ್ಟು ಜನಾಂಗದ ಮೇಲೆ ಮಹಾಶ್ವೇತಾದೇವಿಯವರಿಗೆ ಅಸೀಮ ಪ್ರೇಮ ಮತ್ತು ಅನುಕಂಪ. ಅವರ ಪ್ರಕಾರ ಬುಡಕಟ್ಟು ಜನಾಂಗದವರು ಭಾರತದ ಅ-ಪ್ರಧಾನ ಸಂಸ್ಕೃತಿಗೆ ಸೇರಿದವರಾದರೂ, ಅದರಲ್ಲಿ ಪ್ರಚಲಿತವಿರುವ ಅನೇಕ ಪದ್ಧತಿಗಳು, ಪ್ರಧಾನ ಸಂಸ್ಕೃತಿಯವರು ಆಚರಣೆಯಲ್ಲಿಟ್ಟುಕೊಂಡಿರುವ ಪದ್ಧತಿಗಳಿಗಿಂತಲೂ ಸುಧಾರಿತವಾದದ್ದಾಗಿರುವುವು. ಪ್ರಧಾನ ಸಂಸ್ಕೃತಿಯವರು ಮತ್ತು ಬುಡಕಟ್ಟಿನವರು ಒಗ್ಗಟ್ಟಾಗಿ ಕೆಲಸ ಮಾಡದೆ ದೇಶದ ಸರ್ವಾಂಗೀಣ ಪ್ರಗತಿ ಸಾಧ್ಯವಿಲ್ಲ. ಬುಡಕಟ್ಟು ಜನಾಂಗದ ಸಮಸ್ಯೆ ಭಾರತ ದೇಶದ್ದೊಂದೇ ಸಮಸ್ಯೆಯೂ ಅಲ್ಲ. ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಹೆಸರಿನಿಂದ ಈ ಸಮಸ್ಯೆ ತಲೆಯೆತ್ತುತ್ತಲೇ ಇರುತ್ತದೆ (ಆಸ್ಟ್ರೇಲಿಯಾದ ಅಬಾರಿಜಿನ್, ಆಫ್ರಿಕಾ, ಅಮೆರಿಕಾಗಳ ನೀಗ್ರೋ ಸಮಸ್ಯೆ ಮುಂತಾದವು). ಮಹಾಶ್ವೇತಾದೇವಿ ಬುಡಕಟ್ಟು ಜನಾಂಗದ ಬಗೆಗೆ ಸರ್ಕಾರದ ಧೋರಣೆಯನ್ನು ವಿರೋಧಿಸುತ್ತಲೇ ಬಂದಿದ್ದಾರೆ. ಬ್ರಿಟಿಷರ ಕಾಲದಲ್ಲಿ ನಿರ್ಮಾಣವಾದ ಜೀತಪದ್ಧತಿಯಿಂದಾಗಿ ಹೊಸದೊಂದು ವರ್ಗವೇ ಸೃಷ್ಟಿಯಾಯಿತು. ಬ್ರಿಟಿಷರಿಗೂ ಮೊದಲು ಚಾಲ್ತಿಯಲ್ಲಿದ್ದ ಜಮೀನ್ದಾರಿ ಪದ್ಧತಿಯಲ್ಲಿಯೂ ಜೀತಪದ್ಧತಿ ಚಾಲ್ತಿಯಲ್ಲಿತ್ತು. ಜಮೀನ್ದಾರಿ ಪದ್ಧತಿಗೆ ಬ್ರಿಟಿಷರಿಂದ ಒತ್ತಾಸೆ ಸಹಕಾರಗಳು ಸಿಕ್ಕು, ಕೆಳವರ್ಗದ, ಅದರಲ್ಲಿಯೂ ಬುಡಕಟ್ಟು ಜನಾಂಗದವರು ಎರಡೂ ಕಡೆಯಿಂದ ಶೋಷಣೆ ದಬ್ಬಾಳಿಕೆಗಳಿಗೊಳಗಾಗಬೇಕಾಯಿತು. ಮಹಾಶ್ವೇತಾದೇವಿ ಜೀತದಾಳುಗಳ ಮೇಲೆ ನಡೆಯುವ ದೌರ್ಜನ್ಯ, ಜೀತದ ಹೆಣ್ಣುಗಳ ಮೇಲೆ ನಡೆಯುವ ಅಮಾನವೀಯ, ಅಮಾನುಷ, ಅತ್ಯಾಚಾರಗಳ ನಗ್ನ ದರ್ಶನವನ್ನು ಸ್ವತಃ ಕಂಡವರು. ಬುಡಕಟ್ಟು ಜನಾಂಗದ ನಡುವೆಯೇ ವಾಸಿಸುತ್ತಾ, ಅವರ ಸಮಸ್ಯೆಗಳನ್ನು ಅವರದೇ ದೃಷ್ಟಿಕೋನದಿಂದ ಗ್ರಹಿಸಿ, ಪರಿಹಾರ ಕಾಣಲು ಪ್ರಯತ್ನಿಸಿದ ಫಲವೇ ''ಮುಂಡಾರಿ ಮಹಾಭಾರತ ಎನ್ನಬಹುದಾದ'' ಅವರ ಕೃತಿ. ''ಅರಣ್ಯೇರ್ ಅಧಿಕಾರ್''. ಮುಂಡಾ ಜನಾಂಗದ ಬಿರ್ಸಾ ಮುಂಡಾ ಎಂಬ ಯುವಕ – ಒಬ್ಬ ಸಾಮಾನ್ಯ ಯುವಕ – ಮುಂಡಾ ಜನಾಂಗದ ನಾಯಕನಾಗಿ, ತನ್ನ ಜನಾಂಗದವರ ಮನದಲ್ಲಿ ಅಪ್ರತಿಮ ಧೈರ್ಯ ಸಾಹಸ ತುಂಬುವ, ಆ ಜನಾಂಗದ 'ದೇವರೇ' ಆಗಿಬಿಡುವ ಅದ್ಭುತ ಕಥೆ ''ಅರಣ್ಯೇರ್ ಅಧಿಕಾರ್''. ಆಫ್ರಿಕಾದ ಶ್ರೇಷ್ಠ ಲೇಖಕ ಚಿನು ಅಚಿಬೆಯವರ ಅಭಿಪ್ರಾಯದಂತೆ, ಯಾವುದೇ ಜನಾಂಗವೂ ತನ್ನ ಸಂಸ್ಕೃತಿ ಪರಂಪರೆಗಳ ಬಗೆಗೆ ನಾಚಿಕೆ ಪಟ್ಟುಕೊಳ್ಳಬೇಕಿಲ್ಲ. ಪ್ರತಿಯೊಂದು ಹಂತವೂ ಮಾನವನ ಪ್ರಜ್ಞಾ ವಿಕಾಸದ ಹಂತಗಳು. ಇದರ ಅರಿವನ್ನುಂಟುಮಾಡಬೇಕಾಗಿರುವುದು ಇಂದಿನ ಅಗತ್ಯಗಳಲ್ಲಿ ಅತ್ಯಂತ ಮುಖ್ಯವಾದದ್ದು: ಪತ್ರಿಕೆಗಳ ಮೂಲಕ, ತಮ್ಮ ಸಾಹಿತ್ಯ ಕೃತಿಗಳ ಮೂಲಕ, ಸರ್ಕಾರದೊಡನೆ ವಾದವಿವಾದಗಳ, ಚರ್ಚೆಗಳ ಮೂಲಕ ಸ್ವಯಂ ಸೇವಕರ ಸಹಾಯದ ಮೂಲಕ, ಮಹಾಶ್ವೇತಾದೇವಿ ಇಂಥ ಅರಿವನ್ನುಂಟುಮಾಡಲು ಸತತ ಪ್ರಯತ್ನಿಸುತ್ತಿದ್ದಾರೆ. ಅವರ ಅಭಿಮತದಂತೆ ಸೃಜನಶೀಲ ಸಾಹಿತಿಗೆ ಬದ್ಧತೆ ಇರಲೇಬೇಕು. ಬುಡಕಟ್ಟು ಜನಾಂಗದ ರೀತಿನೀತಿಗಳನ್ನು ಪತ್ರಿಕೆಗಳು ಪ್ರಚಾರಪಡಿಸುವುದು ತೀರಾ ಅವಶ್ಯವಾಗಿದೆ. ಬುಡಕಟ್ಟು ಜನಾಂಗದಲ್ಲಿ ವರದಕ್ಷಿಣೆಯ ಸಾವುಗಳೇ ಇಲ್ಲ. ಹೆಂಗಸಿನ ಮೇಲೆ ನಡೆಸುವ ಅತ್ಯಾಚಾರ ಮತ್ತು ಅವಮಾನವನ್ನು ತೀವ್ರ ಅಪರಾಧವೆಂದು ಬುಡಕಟ್ಟಿನವರು ಪರಿಗಣಿಸುತ್ತಾರೆ. ''ಬೇಟೆ'', ''ದೌಲೊತಿ'', ''ಟಿರೋಡಕ್ಟರ್'' ಎಂಬ ಮೂರು ಕಥೆಗಳು 'ಬೇಟೆ'ಯಲ್ಲಿ ದಾಖಲಿಸಲ್ಪಟ್ಟಿವೆ. ''ದೌಲೊತಿ'' ಜೀತ ಪದ್ಧತಿಯಲ್ಲಿ ಹೆಣ್ಣು ಅನುಭವಿಸುವ ಹಿಂಸೆ, ವೇದನೆಗಳ ನಿರೂಪಣೆಯಾಗಿದೆ. ''ಟಿರೋಡಕ್ಟರ್'' ನಲ್ಲಿ ಮಹಾಶ್ವೇತಾದೇವಿಯವರು ಹೊಸದೊಂದು ಮಿಥ್ ಅನ್ನು ಸೃಷ್ಟಿಸುತ್ತಾರೆ. 'ಬೇಟೆ'ಯ ಕಥಾವಸ್ತು ಕುರುವ ಎಂಬ ಗ್ರಾಮದಲ್ಲಿ ನಡೆದ ಘಟನೆಯೊಂದನ್ನಾಧರಿಸಿದೆ.

ಲೇಖಕಿಯ ಅಭಿಪ್ರಾಯದಂತೆ, ಅಭಿವೃದ್ಧಿಯ ಹೆಸರಿನಲ್ಲಿ ಜಾರಿಗೊಳಿಸಿದ ಎಲ್ಲ ಕಾರ್ಯಕ್ರಮಗಳೂ ಬುಡಕಟ್ಟು ಜನಾಂಗವನ್ನು ವಿನಾಶದ ಅಂಚಿಗೇ



'ಬೇಟೆ' ಮಹಾಶ್ವೇತಾದೇವಿಯವರ 'ಶಖರ್' ಎನ್ನುವ ಮೂಲಕಥೆಯ ಅನುವಾದ. ಅನುವಾದಕರು ಡಾ|| ಎಚ್. ಎಸ್. ಶ್ರೀಮತಿ. ಮೇರಿ ಒರೆಯನ್ ಲೇಖಕಿ ಕಂಡಿದ್ದ ಪಾತ್ರವಾದ್ದರಿಂದಲೂ, 'ಜಾನಿ ಪರಬ್' ಬುಡಕಟ್ಟಿನವರಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ, ಹೆಂಗಸರು ಬೇಟೆಯಾಡುವ ಹಬ್ಬದ ಆಚರಣೆಯಾಗಿರುವುದರಿಂದಲೂ, ಕಥೆಯಲ್ಲಿ ಅಧಿಕೃತತೆಯೂ, ನೈಜತೆಯ ಸತ್ವವೂ ಮೂಡಿಬಂದಿವೆ. ಪ್ರತಿಭೆ ಮತ್ತು ಕಲ್ಪನೆಯ ಮೆರುಗು ಪಡೆದು ಕತೆಯಾಗಿರುವ ವಾಸ್ತವ ಸತ್ಯವೇ 'ಬೇಟೆ'. 'ಬೇಟೆ'ಯ ಕಥೆ ಹಾಗೂ ಶೀರ್ಷಿಕೆಗಳು ಕಡೆತನಕ ಶಕ್ತರೂಪಕಗಳಾಗಿ ತಮ್ಮ ಅರ್ಥವನ್ನು ವ್ಯಾಪಕಗೊಳಿಸುತ್ತಾ ಮುಂದುವರೆಯುತ್ತವೆ.

## ಮಹಾಶ್ವೇತಾದೇವಿಯವರ

# ಬೇಟೆ

ಕೊಂಡೊಯ್ಯುತ್ತಿವೆ. ಹಾಗಾಗಿ ಈ ರೀತಿಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ಸಕ್ರಿಯವಾಗಿ ವಿರೋಧಿಸುವುದು ಮತ್ತು ಆ ಜನಾಂಗದವರನ್ನು ಪ್ರೀತಿಸಲು ಕಲಿಯುವುದು ಈ ಎರಡು ಕ್ರಮಗಳಿಂದ ಮಾತ್ರ ಶೋಷಣೆಗೊಳಗಾಗಿರುವ ಈ ಜನರ ಜೀವನ ಸುಧಾರಿಸಲು ಸಾಧ್ಯ.

''ಬೇಟೆ'' ಸಣ್ಣಕಥೆಗಿಂತ ದೀರ್ಘವಾಗಿದ್ದರೂ ಸಣ್ಣಕಥೆಯ ಸಾಲಿಗೇ ಸೇರುತ್ತದೆ. ಕಥೆಯ ಆರಂಭದಲ್ಲಿಯೇ 'ಕಾಡಿನ ದಾವೇದಾರ'ರಾದ ಬುಡಕಟ್ಟಿನವರಿಗೆ 'ನಾಗರಿಕ' ಸಮಾಜದವರಿಂದ ಅನ್ಯಾಯವಾಗುತ್ತಿರುವುದು, ಕಾಡು ಕಡಿದು ಮರದ ದಿಮ್ಮಿಗಳನ್ನು ತೊಹರಿಯ ಸಾಮಿಲ್‌ಗಳಿಗೆ ಸಾಗಿಸುವ ದಳ್ಳಾಳಿಗಳಿಂದ ನಿರೂಪಿತವಾಗಿದೆ. ಕುರುವದ ಹಳ್ಳಿಗರ ಬದುಕಿನಲ್ಲಿ ವಾರ್ಷಿಕ ಹಬ್ಬಗಳನ್ನು ಬಿಟ್ಟರೆ ಬೇರೆ ಹಬ್ಬ ಹರಿದಿನಗಳು ಅಪರೂಪ. ಹಾಗಾಗಿ, ಗುಡ್ಡದ ಮೇಲೆ ಓಡಾಡುವ ರೈಲಿನ ದಿನನಿತ್ಯದ 'ಮೆರವಣಿಗೆ' ಅವರಿಗೆ ನಿರಂತರ ಆಕರ್ಷಣೆ. ಹಳ್ಳಿಗರಿಗೆ ರೈಲಿನ ಆಕರ್ಷಣೆಯಾದರೆ, ರೈಲಿನ ಪ್ರಯಾಣಿಕರಿಗೆ ಹದಿನೆಂಟರ ತೆಳು ತಾಮ್ರವರ್ಣದ ಬೆಡಗಿ ಗಿರಿಜನರ ಹುಡುಗಿ ಮೇರಿ ಒರೆಯನ್ ಅದ್ಭುತ ಆಕರ್ಷಣೆ. 'ಬೇಟೆ'ಯ ಕಥಾನಾಯಕಿ ಮೇರಿ ಒರೆಯನ್‌ಳನ್ನು ಕಥಾನಕಕ್ಕೆ ಲೇಖಕಿ ಪರಿಚಯಿಸುವ ರೀತಿ ಇದು. ಗಿರಿಜನರು ಕಪ್ಪು ಬಣ್ಣದವರು. ಈ ಹುಡುಗಿ ಗಿರಿಜನರವಳು ಎಂದೆನಿಸುವುದೇ ಇಲ್ಲ. ಮೇರಿ ಒರೆಯನ್ ಗಿರಿಜನ ತಾಯಿ ಮತ್ತು ಬಿಳಿಯ ಮಾಲಿಕರಿಗೆ ಜನಿಸಿದವಳು. ಈಕೆಯನ್ನು ಕಥಾನಾಯಕಿಯನ್ನು ಮಾಡುವುದರಿಂದಾಗಿ, ಅವಳ ಜೀವನ ವೃತ್ತಾಂತವನ್ನು ವಿವರಿಸುವುದರ ಮೂಲಕ, ಗಿರಿಜನ ಹೆಣ್ಣು ಮಕ್ಕಳ ಮತ್ತು ಆಗ ಇದ್ದ ಬಿಳಿಯ ಮಾಲಿಕರ ನಡುವೆ ಇರುತ್ತಿದ್ದ ಲೈಂಗಿಕ ಸಂಪರ್ಕದ ನಾನಾ ಆಯಾಮಗಳು ತೆರೆದುಕೊಳ್ಳಲು ಸಹಕಾರಿಯಾಗಿದೆ. ಬಿಳಿಯ ಮಾಲಿಕರು ತಲೆತಲಾಂತರದಿಂದ ಗಿರಿಜನ ಹೆಣ್ಣು ಮಕ್ಕಳನ್ನು ಹೇಗೆ ತಮ್ಮ ದೇಹವಾಂಛೆ ತೀರಿಸಿಕೊಳ್ಳಲು ಬಳಸಿಕೊಳ್ಳುತ್ತಿದ್ದರೆಂಬುದು ತಿಳಿದುಬರುತ್ತದಲ್ಲದೆ, ಮೇರಿ ಒರೆಯನ್‌ಳಂತಹ ಬುದ್ಧಿವಂತ ಹಾಗೂ ಧೈರ್ಯ ಸಾಹಸಗಳುಳ್ಳ ಹೆಣ್ಣುಗಳಲ್ಲಿ, ತಮ್ಮ ಈ ಲೈಂಗಿಕ ಶೋಷಣೆಯ ವಿರುದ್ಧ ಒಳಗೊಳಗೇ ಹೊಗೆಯಾಡುತ್ತಿದ್ದ ಪ್ರತಿಭಟನೆ ಹಾಗೂ ಸೇಡುಗಳಿಗೆ ಪ್ರಚೋದನೆ ನೀಡುತ್ತದೆಂಬುದನ್ನು ಸ್ಪಷ್ಟಪಡಿಸುತ್ತದೆ. ಮೇರಿ ಒರೆಯನ್, ತನ್ನ ಸಮಕಾಲೀನ ಅಥವಾ ವೈಯಕ್ತಿಕ ಪ್ರತಿಭಟನೆಯಾಗುಳಿಯುವುದಿಲ್ಲ. ಆ ಪಾತ್ರ ತಲೆತಲಾಂತರದಿಂದ ಅನೂಚಾನವಾಗಿ ನಡೆದುಬಂದಿದ್ದ, ಇನ್ನೂ ನಡೆದು ಬರುತ್ತಿರುವ ಶೋಷಣೆಗಳ ವಿರುದ್ಧ ಪ್ರತಿಭಟಿಸುವ ಸ್ತ್ರೀ ಶಕ್ತಿಯಾಗುತ್ತದೆ.

'ಬೇಟೆ' ಮಹಾಶ್ವೇತಾದೇವಿಯವರ 'ಶಿಖರ್' ಎನ್ನುವ ಮೂಲಕಥೆಯ ಅನುವಾದ. ಅನುವಾದಕರು ಡಾ॥ ಎಚ್. ಎಸ್. ಶ್ರೀಮತಿ. ಮೇರಿ ಒರೆಯನ್ ಲೇಖಕಿ ಕಂಡಿದ್ದ ಪಾತ್ರವಾದ್ದರಿಂದಲೂ, 'ಜಾನಿ ಪರಬ್' ಬುಡಕಟ್ಟಿನವರಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ, ಹೆಂಗಸರು ಬೇಟೆಯಾಡುವ ಹಬ್ಬದ ಆಚರಣೆಯಾಗಿರುವುದರಿಂದಲೂ, ಕಥೆಯಲ್ಲಿ ಅಧಿಕೃತತೆಯೂ, ನೈಜತೆಯ ಸತ್ವವೂ ಮೂಡಿಬಂದಿವೆ. ಪ್ರತಿಭೆ ಮತ್ತು ಕಲ್ಪನೆಯ ಮೆರುಗು ಪಡೆದು ಕತೆಯಾಗಿರುವ ವಾಸ್ತವ ಸತ್ಯವೇ 'ಬೇಟೆ'. 'ಬೇಟೆ'ಯ ಕಥೆ ಹಾಗೂ ಶೀರ್ಷಿಕೆಗಳು ಕಡೆತನಕ ಶಕ್ತರೂಪಕಗಳಾಗಿ ತಮ್ಮ ಅರ್ಥವನ್ನು ವ್ಯಾಪಕಗೊಳಿಸುತ್ತಾ ಮುಂದುವರಿಯುತ್ತವೆ. ಬೇಟೆಯಾಗಬೇಕಾದ ವ್ಯಕ್ತಿಯೇ ಬೇಟೆಗಾರನಾಗಿ ಬದಲಾಗಿಬಿಡುವಂತಹ ತಿರುವು ಮುರುವಿನ ಸನ್ನಿವೇಶದಿಂದಾಗಿ ಆ ಘಟನೆಯ ನಿರೂಪಣಾ ಕ್ರಮದಿಂದಾಗಿ 'ಬೇಟೆ' ಒಂದು ಸುಂದರ, ರೋಮಾಂಚಕ ಹಾಗೂ ಅಪರೂಪದ ಕಥೆಗಳಲ್ಲೊಂದಾಗಿದೆ. ಕಥೆಯೊಂದಿಗೇ ಸಮಾನಾಂತರ ಎಳೆಯಾಗಿ ಬುಡಕಟ್ಟು ಜನಾಂಗದವರ ಸ್ವಾಭಿಮಾನ, ನೈತಿಕ ಪ್ರಜ್ಞೆ, ಸಾಹಸ ಪ್ರವೃತ್ತಿಗಳು ಅಭಿವ್ಯಕ್ತಿಸಲ್ಪಟ್ಟು, ಕಥಾನಕಕ್ಕೆ ಪೂರಕವಾಗುವ ಹಿನ್ನೆಲೆಯನ್ನು ಕೊಡುತ್ತವೆ.

ಗಿರಿಜನರ ಭಿಕನಿ ಮೇರಿಯ ತಾಯಿ, ಬಿಳಿಯ ಮಾಲಿಕನಾದ ಡಿಕ್ಸನ್ ಬಂಗಲೆಯನ್ನು ನೋಡಿಕೊಂಡಿರುತ್ತಿದ್ದವಳು. ಡಿಕ್ಸನ್‌ನ ಮಗ ಇಂಡಿಯಾಕ್ಕೆ ಬಂದು ತನ್ನ ಆಸ್ತಿಯನ್ನೆಲ್ಲಾ ಮಾರಿಹೋದ. ಅಂತೆಯೇ ಭಿಕನಿಗೆ ''ಮೇರಿಯನ್ನು ಹೊಟ್ಟೆಯಲ್ಲಿ ಹಾಕಿ'' ಹೋದ. ಭಿಕನಿ ಕ್ರಿಶ್ಚಿಯನ್ ಆಗಿ ಪರಿವರ್ತಿತಳಾಗಿದ್ದಳಾಗಿ ಚರ್ಚಿನ ಪಾದ್ರಿ ಅವಳ ಮಗುವಿಗೆ ಮೇರಿ ಎಂದು ಹೆಸರಿಟ್ಟ. ಡಿಕ್ಸನ್‌ನ ಆಸ್ತಿ ಪ್ರಸಾದ್ ಜೀಯವರ ಒಡೆತನಕ್ಕೆ ಬಂದಿತು. ಆದರೆ ಪ್ರಸಾದ್ ಜೀ ಭಿಕನಿಯನ್ನು ಕೆಲಸಕ್ಕಿರಿಸಿಕೊಳ್ಳಲು ಒಪ್ಪಲಿಲ್ಲ – ಭಿಕನಿ ಕ್ರಿಶ್ಚಿಯನ್ ಜಾತಿಯಿಂದ ಹೊರಬಂದಳು. ಅಲ್ಲಿನ ಬುಡಕಟ್ಟು ಜನಾಂಗದವರಲ್ಲಿ ಈ ''ಮಿಷನ್'' ಜಾತಿಗೆ ಸೇರುವುದು ಬಿಡುವುದು ನಡೆದೇ ಇರುತ್ತಿತ್ತು. ಮೇರಿ ಒರೆಯನ್ ಪ್ರಸಾದ್ ಜೀಯವರ ಮನೆಯ ಹೊರಗಿನ ಎಲ್ಲ ಕೆಲಸ ವ್ಯವಹಾರಗಳನ್ನು ನಿರ್ವಹಿಸುತ್ತಿದ್ದಳು. ತೋಟ ನೋಡಿಕೊಳ್ಳುವುದು, ಸಂತೆಗೆ ಹೋಗಿ ಹಣ್ಣುಗಳನ್ನು ಮಾರಿ ಬರುವುದು, ಬಂಗಲೆ ಶುಚಿಗೊಳಿಸುವುದು ಎಲ್ಲ ಅವಳದೇ ಕೆಲಸ. ಮೇರಿ ಬುಡಕಟ್ಟು ಜನಾಂಗದ ಇತರ ಹೆಣ್ಣು ಮಕ್ಕಳಂತೆ ಮೆದುಗಸ್ವಭಾವದವಳಲ್ಲ. ಅವಳ ರೂಪದಿಂದಾಗಿ ತೊಹರಿ ಸಂತೆಯಲ್ಲಿ ಬಹುಮಂದಿ ಅವಳಿಂದ ಆಕರ್ಷಿತರಾದರೂ, ಅವಳು ಆಕರ್ಷಿತಳಾದದ್ದು ಮಾತ್ರ ಮುಸ್ಲಿಮ್ ಯುವಕ ಜಾಲಿಂ ನೆಡೆಗೆ. ನೂರು ರೂಪಾಯಿ ಕೂಡಿಟ್ಟುಕೊಂಡು ಮದುವೆಯಾಗುವ ಯೋಜನೆ ಅವರದು. ಪ್ರಸಾದ್ ಜೀಯ ಹೆಂಡತಿಗೆ ಮೇರಿಯನ್ನು ತಮ್ಮ ತೋಟದ ಕೂಲಿಯೊಬ್ಬನಿಗೆ ಮದುವೆ ಮಾಡಿ ಅವಳನ್ನು ತಮ್ಮಲ್ಲಿಯೇ ಉಳಿಸಿಕೊಳ್ಳುವ ಆಸೆ. ಆದರೆ ಮೇರಿಯ ಕನಸುಗಳೇ ಬೇರೆ. ''ಕೊಟ್ಟಿಗೆ ವಾಸ, ತಂಗಳೂಟ, ಕುಡಿಯುವ ಗಂಡ'' ಇವುಗಳಿಂದ ದೂರ ಹೋಗಿ ಸ್ವತಂತ್ರವಾಗಿ ಬದುಕುವ ಕನಸು ಅವಳದು. ಜಾಲಿಂ, ಒಮ್ಮೆ ಇವಳನ್ನು ಟ್ರಕ್ ಡ್ರೈವರ್‌ನಿಂದ ರಕ್ಷಿಸಿದ್ದುದರಿಂದ ಇವಳಿಗೆ ಅವನ ಮೇಲೆ ಅಭಿಮಾನ ಮತ್ತು ಭರವಸೆ. ''ಆ ತುರುಕನನ್ನು ಏಕೆ ಮದುವೆಯಾಗ್ತೀ?'' ಎಂದು ಪ್ರಸಾದ್ ಜೀಯ ಹೆಂಡತಿ ಒಮ್ಮೊಮ್ಮೆ ಟೀಕಿಸುತ್ತಾರೆ. ಮೇರಿಯೇನು ಸುಮ್ಮನಿರುವುದಿಲ್ಲ, ''ಆ ತುರುಕ ನನ್ನನ್ನು ಮದುವೆಯಾಗ್ತೀನಿ ಎನ್ನುತ್ತಾನೆ. ನಿಮ್ಮ ತಮ್ಮ ನನ್ನನ್ನು ಇಟ್ಕೊಳ್ತೀನಿ ಬಾ ಎಂದು ಕರೀತಾನಲ್ಲ'' ಎಂದು ದಬಾಯಿಸುತ್ತಾಳೆ. ಊರಿನ ತರುಣರು ಅವಳನ್ನು ''ಮುಸಲನ ರಾಣಿ'' ಎಂದು ರೇಗಿಸುತ್ತಾರೆ. ಅವಳು ಬಿಳಿಯವನಿಗೆ ಹುಟ್ಟಿದವಳಾದ್ದರಿಂದ ತಮ್ಮ ಪಂಗಡ ಬಿಟ್ಟು ಮುಸಲರವನನ್ನು ಮದುವೆಯಾಗಲು ಅಡ್ಡಿಪಡಿಸುವುದಿಲ್ಲ. ಆದರೂ ಮೇರಿಯನ್ನು, ತಾನು ಸಂಪೂರ್ಣವಾಗಿ ಆ ಸಮುದಾಯಕ್ಕೆ ಸೇರಲಿಲ್ಲವೆಂಬ ಕೊರಗು ಬಾಧಿಸುತ್ತದೆ. ಪ್ರಸಾದ್ ಜೀಯ ಕುಂಟು ನಡಿಗೆ, ಅವರ ಹೆಂಡತಿಯ ಬೊಜ್ಜು ನಡಿಗೆಗಳನ್ನು.... ಎಲ್ಲರನ್ನು ಅಣಕಮಾಡುತ್ತಾ ಎಲ್ಲರನ್ನು ರಂಜಿಸುತ್ತಾಳಾಗಿ ಆ ಹಳ್ಳಿಯವರಿಗೆ ಮೇರಿಯೆಂದರೆ ಹೆಚ್ಚು ಪ್ರೀತಿ.

ತಹಶೀಲ್ದಾರ್ ಸಿಂಗ್‌ನ ಆಗಮನ ಮೇರಿಯ ಜೀವನದ ಗತಿಯನ್ನು ಬದಲಾಯಿಸುವುದಲ್ಲದೇ ಅವನು ಆ ಊರಿಗೆ ಬಂದುದರಿಂದಾಗಿ ಅವನ ಜೀವನವೇ ಮುಗಿಯುವ ವಿಪರ್ಯಾಸ ಸೃಷ್ಟಿಯಾಗುತ್ತದೆ. ಪ್ರಸಾದ್ ಜೀಯ ವಶದಲ್ಲಿದ್ದ ಐವತ್ತು ಎಕರೆಗಳಲ್ಲಿ ಬೆಳೆದಿದ್ದ ಸಾಲ ವೃಕ್ಷಗಳನ್ನು ಕಡಿಸುವ ವ್ಯವಹಾರ ಕುದುರಿಸಿಕೊಳ್ಳುತ್ತಾನೆ ಕಂಟ್ರಾಕ್ಟರ್. ನಿಮ್ಮ ಊರಿನ ಹೆಂಗಸರು ನಮ್ಮ ಅಕ್ಕ-ತಂಗಿಯರಂತೆ ಎನ್ನುತ್ತಾನೆ. ಅವನನ್ನು ನಂಬಬಾರದೆಂಬುವ ತಿಳಿವಳಿಕೆ ಊರಿನ ಹಿರಿಯರಿಗಿರುವುದಿಲ್ಲ. ಊರಿನವರಿಗೆ ಸಾರಾಯಿ, ಬನವಾರಿಗೆ ಟ್ರಾನ್ಸಿಸ್ಟರ್ ಹೀಗೆ ತನ್ನದೇ ಆದ ಅತ್ಯಂತ ಸೂಕ್ಷ್ಮ ರೀತಿಯ ಬಲೆ ಬೀಸತೊಡಗುತ್ತಾನೆ ಕಂಟ್ರಾಕ್ಟರ್. ಇದು ಅತ್ಯಂತ ಸೂಕ್ಷ್ಮ ಸ್ತರದಲ್ಲಿ ನಡೆಯುವ ಬೇಟೆ ಎಂದು ತಿಳಿಯಲೇ ಆಗದಂತಹ ಬೇಟೆ. ಬಲೆಗೆ ಸಿಕ್ಕ ಮಿಕಗಳಿಗೆ ತಾವು ಬಲೆಗೆ ಸಿಕ್ಕಿದ್ದೇವೆ, ಬೇಟೆಯಾಡಲ್ಪಡುತ್ತಿದ್ದೇವೆ ಎಂಬುದು ತಿಳಿಯಲಾರದಂತಹ ಬೇಟೆ. ಬೇಟೆಯ ಮತ್ತೊಂದು ಸ್ತರ ಆದಷ್ಟು ಕಡಿಮೆ ದುಡ್ಡಿಗೆ ಕಂಟ್ರಾಕ್ಟ್ ಪಡೆಯುವುದು. ಈ ಸ್ತರದಲ್ಲಿ ಪ್ರಸಾದ್ ಜೀಯಂತಹ ''ತಿಳಿವಳಿಕೆ''ಯುಳ್ಳವರೂ ಮಿಕಗಳಾಗಿ ಬಿಡುತ್ತಾರೆ (ಮುಲನಿ, ಲಾಲ್‌ಚಂದ್ ಎಲ್ಲರೂ ಮಿಕಗಳು). ಕಥೆ ಬೆಳೆದಂತೆ ಬೇಟೆಯ ನಾನಾ ಆಯಾಮಗಳು ಆಶ್ಚರ್ಯಕರ ರೀತಿಯಲ್ಲಿ ತೆರೆದುಕೊಳ್ಳುತ್ತವೆ.

ಪ್ರಸಾದ್ ಜೀಯ ಮನೆಯಲ್ಲಿ ಕಂಟ್ರಾಕ್ಟರ್ ಮೇರಿಯನ್ನು ನೋಡಿ, ಅವಳ ರೂಪ



ಲಾವಣ್ಯಗಳಿಂದ ಹುಚ್ಚಾಗುತ್ತಾನೆ. ಈ ಘಟನೆಯಿಂದ ನಿಜವಾದ ಬೇಟೆಯ ಆಟ ತನ್ನ ಪೂರ್ಣಶಕ್ತಿಯಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಕಂಟ್ರಾಕ್ಟರ್‌ನ ದೃಷ್ಟಿಯನ್ನು ಗಮನಿಸಿದ ಪ್ರಸಾದ್ ಜೀ ''ಮೇರಿ ತಮ್ಮ ಮನೆಯ ಮಗಳಿದ್ದಂತೆ'' ಎಂದು ಅವಳ ಹಿನ್ನೆಲೆಯನ್ನು ವಿವರಿಸುತ್ತಾರೆ. ಆದರೆ ಅವನ ಮೇಲೆ ಇದರ ಪರಿಣಾಮವೇನೂ ಆಗುವುದಿಲ್ಲ. ಮೇರಿಯ ಬಗೆಗೆ ಹುಚ್ಚನಾಗಿ, ಕಾಡುಮೇಡುಗಳಲ್ಲಿ ಅವಳನ್ನು ಹಿಂಬಾಲಿಸುತ್ತಾ ''ನೀನು ಹೇಮಮಾಲಿನಿಯ ಥರಾ ಇದ್ದೀಯಾ'' ಎಂದ ಅವನಿಗೆ ಮೇರಿ ''ನೀನು ಕೋತಿಯ ಥರಾ ಇದ್ದೀಯಾ'' ಎಂದು ಹಂಗಿಸಿ, ಅವನು ಹತ್ತಿರ ಬಂದಾಗ ಚಾಕು ತೋರಿಸುತ್ತಾಳೆ ಮತ್ತು ಹೇಳುತ್ತಾಳೆ ''ನಿನ್ನಂಥ ಕಂಟ್ರಾಕ್ಟರ್‌ಗಳು ತೂಹರಿ ಬೀದೀಲಿ ಕಾಸಿಗೊಂದು ಕೊಸರಿಗೊಂದು ಇದ್ದಾರೆ. ಅವರಿಗೆ ನಾನು ಇದೇ ಚಾಕು ತೋರಿಸೋದು''. ಆದರೂ ಅವನಿಗೆ ಮೇರಿಯ ಮೋಹ ಇಳಿಯದೇ ಅವಳಿಗೆಂದು ಸೀರೆ ತಂದುಕೊಟ್ಟಾಗ ''ನನ್ನೇನು ಸೂಳೆ ಅಂದುಕೊಂಡೆಯಾ?'' ಎಂದು ಅವನ ಮುಖಕ್ಕೆ ನೀರಿಳಿಸುತ್ತಾಳೆ. ಇವೆಲ್ಲವುಗಳಿಂದ ಸಮಸ್ಯೆ ಪರಿಹಾರವಾಗುವ ಬದಲು, ಕಂಟ್ರಾಕ್ಟರ್‌ನ ಆಸೆ, ಸೇಡಾಗುತ್ತದೆ. ಬೇಟೆಗಾರ ತನ್ನ ಮಿಕಕ್ಕೆ ಹೊಂಚುಹಾಕುವಂತೆ ಮೇರಿಗೆ ಹೊಂಚುಹಾಕತೊಡಗುತ್ತಾನೆ. ಮೇರಿ ಬೇರೆ ಹೆಣ್ಣುಗಳಂತೆ ಸುಲಭದವಳಲ್ಲ ಎನ್ನುವುದರಿಂದ ಆಸೆ ಮತ್ತೂ ಹೆಚ್ಚಾಗುತ್ತದೆ. ಅದೇ ವರುಷ ಜಾನಿ ಪರಬ್ ಹಬ್ಬ ಬರುವುದು 'ಬೇಟೆ' ಕಥೆಯ ಮುಖ್ಯ ತಾಂತ್ರಿಕ ವಿನ್ಯಾಸವಾಗುತ್ತದೆ. ಜಾನಿ ಪರಬ್ ಹಬ್ಬದ ಆಚರಣೆ ಬುಡಕಟ್ಟಿನವರಲ್ಲಿ ಒಂದು ಮಿಥ್ ಆಗಿ ಉಳಿದು ಬಂದಿದೆ. ಈ ಕಥೆಯಲ್ಲಿ ನಡೆವ 'ಜಾನಿ ಪರಬ್' ಹಬ್ಬ ಮತ್ತೊಂದು ಮಿಥ್ ಅನ್ನು ಸೃಷ್ಟಿಸಿ, ಅಂದು ನಡೆವ ಬೇಟೆಯೂ ಒಂದು ಮಿಥ್ ಆಗುವಂತಹ ಪರಿಯನ್ನೂ ಕಾಣುತ್ತೇವೆ.

'ಜಾನಿ ಪರಬ್' ಹನ್ನೆರಡು ವರ್ಷಗಳಿಗೊಮ್ಮೆ, ಹೆಂಗಸರಿಗೆ ಬೇಟೆಯ ಹಕ್ಕು ಬಿಟ್ಟುಕೊಡುವ ಹಬ್ಬ. ಹೆಂಗಸರೆಲ್ಲ ಬಿಲ್ಲು ಬಾಣ, ಕತ್ತಿ ಹಿಡಿದು ಕಾಡಿನಲ್ಲಿ ಸಿಕ್ಕ ಪ್ರಾಣಿಗಳನ್ನು ಬೇಟೆಯಾಡಿ ಅಡಿಗೆ ಮಾಡಿ ಒಟ್ಟಾಗಿ ತಿಂದು, ಕುಡಿದು ತಮ್ಮ ಹಾಡಿಗಳಿಗೆ ಹಿಂದಿರುಗುವಂತಹ ಸಾಮೂಹಿಕ ಹಬ್ಬ – ಅಂದು ಮೇರಿಗೆ ದ್ವಂದ್ವ. ಈ ಕಂಟ್ರಾಕ್ಟರ್ ಸಿಂಗ್ ತನಗೆ ತೊಂದರೆ ಕೊಡುತ್ತಿರುವ ವಿಷಯ ತಿಳಿದರೆ, ಸಿಂಗನನ್ನು ಜಾಲಿಂ ತೂಹರಿ ಸಂತೆಯಲ್ಲಿ ಅಟ್ಟಾಡಿಸಿಕೊಂಡು ಕೊಂದು ಮುಗಿಸುತ್ತಾನೆ ನಿಜ. ಆದರೆ ಆ 'ಪಟ್ಟಣದ ನಾಯಿ' ತಪ್ಪಿಸಿಕೊಂಡು, ಜಾಲಿಂನ ಮೇಲೆ ಕೇಸುಗೀಸು ಎಂದು ಹಾಕಿಬಿಟ್ಟರೆ ? ಆದ್ದರಿಂದ 'ಬೇಟೆ'ಯ ಸಂಪೂರ್ಣ ವ್ಯವಸ್ಥೆಯನ್ನು ತಾನೇ ನಿರ್ಧರಿಸಿ ನಿರ್ವಹಿಸುತ್ತಾಳೆ. ಕಂಟ್ರಾಕ್ಟರ್ ಸಿಂಗ್ ಒಂದು ದಿನ ಇವಳ ಕೈ ಹಿಡಿದಾಗ, ತಾನಂದು ಹೊರಗಾಗಿರುವುದಾಗಿಯೂ, 'ಜಾನಿ ಪರಬ್' ಹಬ್ಬದಂದು ಅವನು ಇದೇ ಬಂಡೆಯ ಬಳಿ ಕಾದಿದ್ದರೆ, ತಾನು ಎಲ್ಲರ ಕಣ್ಣು ತಪ್ಪಿಸಿ ಬಂದು ಅವನ ಇಚ್ಛೆ ಪೂರೈಸುವುದಾಗಿಯೂ ಹೇಳುತ್ತಾಳೆ.

'ಬೇಟೆ' ಕಥೆಯ ಈ ಕಡೆಯ ಭಾಗ ಅತ್ಯಂತ ಯಶಸ್ವಿಯಾಗಿ ಚಿತ್ರಿಸಲ್ಪಟ್ಟಿದೆ. ಕಂಟ್ರಾಕ್ಟರ್‌ನ ನವನಾಗರಿಕ ವೇಷಭೂಷಣಗಳು – ಸೈಡ್ ಬರ್ನ್ಸ್, ಉದ್ದ ಕ್ರಾಪು, ಪಾಲಿಯೆಸ್ಟರ್ ಪ್ಯಾಂಟು, ಚೂಪುಮೊನೆಯ ಷೂಗಳು, ಬೆನ್ನಿನ ಮೇಲೆ ಎಸೆದು ಕೊಂಡಿದ್ದ ಕಡುಕೆಂಪು ಷರ್ಟು – ಯಾವುವೂ ಈ ಗಿರಿಬಾಲೆಯನ್ನು ಆಕರ್ಷಿಸಲಿಲ್ಲ. ಬದಲಿಗೆ ಮೇರಿಯ ಕಣ್ಣುಗಳಿಗೆ ಅವನು ಒಂದು ಕಾಡುಪ್ರಾಣಿಯಂತೆ ಕಂಡುಬಂದ. ಕಂಟ್ರಾಕ್ಟರ್‌ನ ವೇಷ, ಅದಕ್ಕೆ ಮೇರಿ ಪ್ರತಿಕ್ರಿಯಿಸುವ ರೀತಿ ಇವುಗಳಿಂದ ಪಟ್ಟಣದ ಕೃತ್ರಿಮ ವೇಷಗಳಿಗೂ ಗಿರಿಜನರ ಸರಳತೆಗೂ ಇರುವ ಅಂತರ ಬಿಚ್ಚಿಕೊಳ್ಳುತ್ತದೆ. ಮೇರಿಯ ಮನಸ್ಸಿನಲ್ಲಿ ಕಾಡು ಪ್ರಾಣಿಯ ಹೋಲಿಕೆ (ಕಂಟ್ರಾಕ್ಟರ್‌ನ ಬಗೆಗೆ) ಸುಳಿದೊಡನೆಯೇ ಕಥೆಯ ಗತಿಯೇ ಬದಲಾಗುತ್ತದೆ. ಈ ಹೋಲಿಕೆ ಅವಳ ಮನಸ್ಸಿನಲ್ಲಿ ಚೋದಕದಂತೆ ಕೆಲಸ ಮಾಡುತ್ತದೆ. ''ಮೇರಿಯ ತಲೆಯಲ್ಲಿ ಮಿಂಚು ಹೊಡೆದಂತಾಯಿತು. ಫಕ್ಕನೆ ನಗು ಉಕ್ಕಿತು'' ಎಂದು ಬರೆಯುತ್ತಾರೆ ಲೇಖಕಿ. ಆ ದಿವ್ಯಗಳಿಗೆಯಲ್ಲಿಯೇ ತಹಶೀಲ್ದಾರ್ ಕಂಟ್ರಾಕ್ಟರ್ ಸಿಂಗನ ಭವಿಷ್ಯ ಮೇರಿಯ ತಲೆಯಲ್ಲಿ ನಿರ್ಧಾರವಾಯಿತು. ಮುಂದೆ ನಡೆಯುವುದೇ ಮಹಾಬೇಟೆ, ಬೇಟೆಯ ಮಿಕವೇ ಬೇಟೆಗಾರನಾಗಿ, ತನ್ನನ್ನು ಬೇಟೆಯಾಡಬಂದವನನ್ನೇ ಮುಗಿಸಿಬಿಡುವ ಮಹಾಬೇಟೆ.

ಹಬ್ಬದ ಉತ್ಸಾಹದಲ್ಲಿ ಉಲುಉಲು ಎಂದು ಕೂಗುತ್ತಾ ಎಲ್ಲ ಹೆಂಗಸರು ಕಾಡಿನ ಕಡೆಗೆ ನುಗ್ಗಿದರು. ಮೇರಿ ಹೊಸ ಸೀರೆಯುಟ್ಟು ಅಲಂಕರಿಸಿಕೊಂಡು ಬೇಟೆಗೆ ಅಣಿಯಾದಳು. ಅವಳು ''ನಡೆದಾಡುವ ಕೆಂಪು ಮುತ್ತುಗದ ಮರದಂತೆ ಕಾಣುತ್ತಿದ್ದಳು.... ಎಲ್ಲೆಲ್ಲೂ ಕೆಂಪು...'' ಮೇರಿ ಮೊಲ, ಮುಳ್ಳುಹಂದಿ ಮುಂತಾದ ಸಣ್ಣ ಪ್ರಾಣಿಗಳ ಬೇಟೆಯಾಡಲು ಬಂದವಳಲ್ಲ... ಅಂತಿಂಥ ಬೇಟೆಯಲ್ಲ, ತನ್ನನ್ನೂ ತನ್ನಂತಹ ನೂರಾರು ಜನರನ್ನು, ಬೇಟೆಯಾಡದೆಯೇ ಹಿಡಿದು ಹಿಂಸಿಸುತ್ತಿದ್ದ ಆ ಕಂಟ್ರಾಕ್ಟರ್‌ನಂತಹ ಮೃಗದ ಬೇಟೆಗಾಗಿಯೇ ಸಜ್ಜಾಗಿ ಬಂದವಳು.. ನಾಟಕವಾಡಿ ಆ ಮೃಗವನ್ನು ಮರುಳು ಮಾಡಿದಳು. ಅವನ ಕೆಂಪು ಷರ್ಟು, ಗೂಳಿಕಾಳಗಕ್ಕೆ ಆಹ್ವಾನ ಕೊಡುತ್ತಿರುವಂತೆ ತೋರುತ್ತದೆ ಅವಳಿಗೆ. ವಿದೇಶೀ ಸಿಗರೇಟು, ಸಾರಾಯಿ – ತಹಸೀಲ್ದಾರ್ ಸಿಂಗ್ – ಎಲ್ಲ ಮನಸ್ಸಿನಲ್ಲಿಯೇ ಲೆಕ್ಕಾಚಾರ ಹಾಕಿಕೊಂಡು ತನ್ನ ಬೇಟೆಯ ಕ್ರಮವನ್ನು ಕರಾರುವಾಕ್ಕಾಗಿ ನಿರ್ಧರಿಸಿಕೊಳ್ಳುತ್ತಾಳೆ ಮೇರಿ. ತಹಶೀಲ್ದಾರನ ಜೊತೆಗೂ ಕುಡಿದೂ, ಕುಡಿದೂ, ಕುಡಿದೂ ಮೇರಿಗೆ ಅವನ ಮುಖ ಥೇಟ್ ಬೇಟೆ ಪ್ರಾಣಿಯ ಮುಖದಂತೆಯೇ ಕಾಣಲಾರಂಭವಾಗುತ್ತದೆ. ಆಗ ಮೇರಿ ನಕ್ಕಳು. ಅವನನ್ನು ನೆಲಕ್ಕೆ ಕೆಡವಿ ''ಚೂರಿಯನ್ನು ಎತ್ತಿ ಕೆಳಗಿಳಿಸಿದಳು-ಮತ್ತೆ, ಮತ್ತೆ, ಮತ್ತೆ'', ಅವಳಿಗಾವ ಪಶ್ಚಾತ್ತಾಪವೂ ಇಲ್ಲ. ಅವನ ಪರ್ಸಿನಲ್ಲಿದ್ದ ದುಡ್ಡೆಲ್ಲವನ್ನೂ ತೆಗೆದುಕೊಂಡು ತನ್ನಲ್ಲಿದ್ದ ಹಣದ ಜೊತೆ ಸೇರಿಸಿದಳು.. ಅಲ್ಲಿನ ಗಿಲ್‌ಗಿಂಡಾ ಹಂಬುಗಳ ಹಿಂದಿರುವ ಕಣಿವೆಯ ಆಳ ಕಂಡವರಿಲ್ಲ. ಅವನನ್ನೂ, ಅವನಿಗೆ ಸೇರಿದ ಪ್ರತಿಯೊಂದು ವಸ್ತುವನ್ನೂ ಆ ಕಣಿವೆಯ ಆಳಕ್ಕೆ ಎಸೆದಳು. ಹಳ್ಳದಲ್ಲಿ ಮನಸಾರೆ ಮೈತೊಳೆದುಕೊಂಡು ಬಂದಾಗ ಅವಳಲ್ಲಿ ಬೇಟೆ ಪೂರೈಸಿದ ತೃಪ್ತಿ ಹರಡಿತ್ತು. ಈ ತೃಪ್ತಭಾವವನ್ನು ಲೇಖಕಿ ಹೀಗೆ ವರ್ಣಿಸುತ್ತಾರೆ: ''ರತಿಕ್ರೀಡೆಯಲ್ಲಿ ತೊಡಗಿ ಅನಂತವಾದ ಸಂತೃಪ್ತಿಯನ್ನು ಹೊಂದಿ ಬಂದಿದ್ದಾಳೋ ಎಂಬಂತಹ ಸಂತೃಪ್ತಿ ಮುಖದಲ್ಲಿ ತುಂಬಿತ್ತು''. ನಂತರ, ದೊಡ್ಡ ಬೇಟೆಯಾಡಿ ಬಂದವರಂತೆ ಹೊಟ್ಟೆಬಿರಿಯುವಷ್ಟು ಉಣ್ಣುತ್ತಾಳೆ. ಎಲ್ಲರ ಜೊತೆ ಕುಣಿಯುತ್ತಾ ಕತ್ತಲಿನಲ್ಲಿ ಮರೆಯಾಗುತ್ತಾಳೆ – ತನ್ನ ಜಾಲಿಮನ ಜೊತೆ ದೂರ ಹೋಗಲು. ಮೇರಿ ಈಗ ಕ್ರೌರ್ಯವನ್ನು ನೆನೆದು ನಡುಗುವ ಮುಗ್ಧ ಬಾಲೆಯಲ್ಲ. ಅವಳಾಡಿದ ಬೇಟೆ ಅವಳಲ್ಲಿ ಎಲ್ಲಿಲ್ಲದ ಕಸುವು ಮತ್ತು ಆತ್ಮವಿಶ್ವಾಸವನ್ನು ತುಂಬಿದೆ. ಮೇರಿ ಒರೆಯನ್ ಹೀಗೆ ತನ್ನನ್ನು ಬೇಟೆಯಾಡಬಂದವನನ್ನು ಹಿಂಸೆಯಿಂದ ಕೊಲ್ಲುತ್ತಾಳೆಂದು, ಲೇಖಕಿ ಹಿಂಸೆಯನ್ನೂ ಕೊಲೆಯನ್ನೂ ಸಮರ್ಥನೆ ಮಾಡುತ್ತಾರೆಂದಲ್ಲ. 'ಬೇಟೆ' ಮಾನವ ಸ್ವಭಾವದ ಅನೇಕ ಆಯಾಮಗಳನ್ನು ತೆರೆದಿಡುವುದಲ್ಲದೆ, ಇಡೀ ವ್ಯವಸ್ಥೆಯಲ್ಲಿ ಅಂತರ್ಗತವಾಗಿರುವ ವಿಷವರ್ತುಲದ ಪರಿಚಯವನ್ನೂ ಮಾಡಿಸುತ್ತದೆ. ವ್ಯಕ್ತಿಗಳು ಮುಗ್ಧರಾಗಿರುವವರೆಗೂ ಕ್ರೌರ್ಯಕ್ಕೆ, ಶೋಷಣೆಗೆ ಒಳಗಾಗಿ ಬೇಟೆಯ ಪ್ರಾಣಿಗಳಾಗ ಬೇಕಾಗುತ್ತದೆ. ಈ ಕ್ರೌರ್ಯ ಹಿಂಸೆಯಿಂದ ಪಾರಾಗಬೇಕಾದರೆ ಮುಗ್ಧತೆಯನ್ನು, ಸರಳತೆಯನ್ನು ಕಳೆದುಕೊಳ್ಳಲೇಬೇಕಾಗುತ್ತದೆ. ಕ್ರೌರ್ಯದಿಂದ ತಪ್ಪಿಸಿಕೊಳ್ಳಲು ಕ್ರೌರ್ಯವನ್ನೇ ಆಶ್ರಯಿಸಬೇಕಾಗುವ, ಬಲಿಪಶುವಾಗುವುದರಿಂದ ತಪ್ಪಿಸಿಕೊಳ್ಳಲು ಬೇಟೆಗಾರನೇ ಆಗಬೇಕಾಗುವ ಅನಿವಾರ್ಯ ವಿಷಮ ಪರಿಸ್ಥಿತಿ ಉಂಟಾಗುವುದನ್ನು ಅತ್ಯಂತ ಶಕ್ತವಾಗಿ ಪರಿಚಯಿಸುತ್ತದೆ 'ಬೇಟೆ'. ನವಿರು ಭಾವನೆಗಳಿಗಾಗಲೀ ಬೇಟೆಗಾರನ ಬಗೆಗೆ ದಯೆ ದಾಕ್ಷಿಣ್ಯಗಳಿಗಾಗಲೀ ಅವಕಾಶವಿಲ್ಲ ಬೇಟೆಯಲ್ಲಿ. ತನ್ನ ಉಳಿವಿನ ಪ್ರಶ್ನೆ ಬಂದಾಗ, ಎದುರಾಳಿಯನ್ನು ಬೇಟೆಯಾಡದೇ ವಿಧಿಯಿಲ್ಲವೆಂಬ ಸತ್ಯದರ್ಶನ ವಾಗುತ್ತದೆ. ಆದರೂ ಮೇರಿ ಒರೆಯನ್, ಬೇಟೆಗಾರನಿಂದ ತಪ್ಪಿಸಿಕೊಂಡು (ಈ ತಪ್ಪಿಸಿಕೊಳ್ಳುವಿಕೆ ಕ್ರೌರ್ಯ, ಹಿಂಸೆಗಳಿಂದಲೇ ಇರಬಹುದಾದರೂ) ತನ್ನ ಪ್ರೀತಿಯ ಜಾಲಿಂ ಜೊತೆಗೆ ಹೋಗುವುದರಿಂದ, ಮಾನವೀಯ ಮೌಲ್ಯವಾದ ಪ್ರೀತಿ ಜಯಿಸಿ, ಲೇಖಕಿಯ ಸಕಾರಾತ್ಮಕ ನಿಲುವು ವ್ಯಕ್ತವಾಗುತ್ತದೆ.

'ಜಾನಿ ಪರಬ್'ನಂದು ಮೇರಿ ಕಂಟ್ರಾಕ್ಟರ್‌ನನ್ನು ಬೇಟೆಯಾಡಿ ಮಿಥ್‌ನೊಳಗೆ ಮತ್ತೊಂದು ಮಿಥ್ ಅನ್ನು ಸೃಷ್ಟಿಸುತ್ತಾಳೆ ಮತ್ತು ಇಂತಹ ಬೇಟೆಗಳಿಗೆ ಅವಳು ಬೇಟೆಗಾರಳಾಗಿ ಮೂಲ ಮಾದರಿಯಾಗುತ್ತಾಳೆ. ಮೇರಿ, ಬೇಟೆಯ ಮಿಕವಾಗುವು ದರಿಂದ ತಪ್ಪಿಸಿಕೊಳ್ಳಲು ಹೊಸ ಹೊಸ ದಾರಿಗಳಿಗೆ ಸ್ಫೂರ್ತಿಯಾಗುತ್ತಾಳೆ. ಬೇಟೆಗೆ ಸಿಕ್ಕ ಮಿಕವೇ ಬೇಟೆಗಾರನನ್ನು ಬೇಟೆಯಾಡಿ ಕೊಲ್ಲುವ ಈ ಕಥೆ ಒಂದು ಬೆಡಗಿನಂತುಳಿ ಯುತ್ತದೆ. ಲೇಖಕಿ ತಮ್ಮ ಸಂವಾದದಲ್ಲಿ ಹೇಳುತ್ತಾರೆ, ''ಕಥೆಯಲ್ಲಿ ನಾನು ನಿರೂಪಿಸಿರುವ ಎಲ್ಲವೂ ವಾಸ್ತವ ಸಂಗತಿಗಳೇ. ಆ ಕಥೆಯ ಮೇರಿ ಹಬ್ಬದ ದಿನ ಮಾಡಿದಳೆನ್ನಲಾದ ಸಂಗತಿ ಪದೇ ಪದೇ ಆ ಪ್ರದೇಶದಲ್ಲಿ ನಡೆದದ್ದಿದೆ. ಈ ಪ್ರಸಂಗ ಬುಡಕಟ್ಟಿನವರ ಹಾಡಿನಲ್ಲಿ ಬರುತ್ತದೆ...'' ತಹಶೀಲ್ದಾರ ಸಿಂಗನಂತಹವರು ಇರುವವರೆಗೂ, ಮೇರಿ ಯಂತಹವರು ಇರಲೇಬೇಕಾಗುತ್ತದೆ. 'ಬೇಟೆ'ಯಂತಹ ಕಥೆಯನ್ನು ಸುಂದರವಾಗಿ ಅನುವಾದಿಸಿರುವ ಡಾ|| ಎಚ್. ಎಸ್. ಶ್ರೀಮತಿಯವರು ಅಭಿನಂದನಾರ್ಹರು.


ಎಲ್. ವಿ. ಶಾಂತಕುಮಾರಿ

೧೫೮, ೪ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ಪೂರ್ಣಪ್ರಜ್ಞ ಲೇಔಟ್, ಬೆಂಗಳೂರು - ೫೬೦ ೦೮೫

# ಆರ್ಥಿಕ ದಿಗ್ಬಂಧನದಲ್ಲೂ ಪ್ರಗತಿ ಸಾಧಿಸಿರುವ ಕ್ಯೂಬಾ

ವಿಶ್ವವೀಕ್ಷಣೆ

ಸೀಯಾರ್ಕೆ

ಇಪ್ಪತ್ತಾರು ವರ್ಷಗಳ ಕ್ರೂರ ಸರ್ವಾಧಿಕಾರಿ ಆಡಳಿತವನ್ನು ಕ್ರಾಂತಿಕಾರಿ ಹೋರಾಟದಿಂದ ಅಂತ್ಯಗೊಳಿಸಿ ಫಿಡೆಲ್ ಕ್ಯಾಸ್ಟ್ರೋ ನಾಯಕತ್ವದಲ್ಲಿ ಕ್ಯೂಬಾ ಸಮಾಜವಾದಿ ಸಮಾಜ ನಿರ್ಮಾಣದ ಪಥದಲ್ಲಿ ಅಡಿಯಿರಿಸಿ ನಲವತ್ತೈದು ವರ್ಷಗಳಾಯಿತು. ಈ ಎಲ್ಲ ವರ್ಷಗಳಲ್ಲಿ ಪ್ರಪಂಚದ ಅತ್ಯಂತ ಬಲಿಷ್ಠ ಹಾಗೂ ದುಷ್ಟ ನೆರೆರಾಷ್ಟ್ರ ಅಮೆರಿಕದ ಕಿರುಕುಳ, ಬೆದರಿಕೆ, ಆರ್ಥಿಕ ದಿಗ್ಬಂಧನಗಳನ್ನು ಎದುರಿಸಿ ಕ್ಯೂಬಾ ದೃಢವಾಗಿ ಮುಂದುವರಿಯುತ್ತಿರುವುದೇ ಒಂದು ಅದ್ಭುತ. ತನ್ನ ಬಲೆಗೆ ಬೀಳಲು ನಿರಾಕರಿಸುವ ದೇಶಗಳನ್ನು ಹೆದರಿಸಿ ದುರಾಕ್ರಮಣ ನಡೆಸುವ ದುಶ್ಚಟ ಬೆಳೆಸಿಕೊಂಡಿರುವ ಅಮೆರಿಕದ ಆಡಳಿತ ಕ್ಯೂಬಾದ ಮೇಲೆ ಎರಗಿಬೀಳಲು ಈಗಲೂ ಸಮಯ ಕಾಯುತ್ತಿದೆ, ಸಬೂಬು ಹುಡುಕುತ್ತಿದೆ. ಪ್ರಪಂಚದ ಜನಾಭಿಪ್ರಾಯವನ್ನು, ವಿಶ್ವಸಂಸ್ಥೆಯನ್ನು ಮೂಲೆಗೊತ್ತಿ ಇರಾಕಿನ ಮೇಲೆ ದುರಾಕ್ರಮಣ ನಡೆಸಿ, ಮಣ್ಣುಮುಕ್ಕುತ್ತಿರುವ ಅಮೆರಿಕದ ಜಾರ್ಜ್ ಬುಷ್ ಮತ್ತೆ ಅಧಿಕಾರದ ಗುದ್ದಗೆಗೇರಲು ಅನುಕೂಲವಾಗುವುದಾದರೆ ಕ್ಯೂಬಾವನ್ನು ಕಬಳಿಸಲು ಹೇಸುವುದಿಲ್ಲ. ಬುಷ್-ರಮ್ಸಫೀಲ್ಡ್-ಡಿಕ್‌ಶೆನಿ ಪಾತಕಿಗಳ ಕೂಟ ಮುಂಬರುವ ಚುನಾವಣೆಗಳಲ್ಲಿ ಕ್ಯೂಬಾವನ್ನು ಬಲಿಪಶುವಾಗಿಸಲು ಹಂಚಿಕೆ ಹೂಡುತ್ತಿದೆ. ಈಗಿನಿಂದಲೇ ಸಾಮ್ರಾಜ್ಯಶಾಹಿಗಳ ಈ ಹಂಚಿಕೆಯನ್ನು ಪ್ರಪಂಚದ ಜನತೆ ಬಯಲಿಗೆಳೆದು, ವಿರೋಧಿಸಿ, ಕ್ಯೂಬಾದ ತಂಟೆಗೆ ಅಮೆರಿಕ ಹೋಗದಂತೆ ತಡೆಯಲು ಕ್ರಮ ಕೈಗೊಳ್ಳಬೇಕಾಗಿದೆ. ಇಷ್ಟು ವರ್ಷ ಅಮೆರಿಕ ಕ್ಯೂಬಾದ ಮೇಲೆ ಆಕ್ರಮಣ ನಡೆಸದಂತೆ ತಡೆಹಿಡಿದಿರುವುದು ಪ್ರಪಂಚದ ಜನಾಭಿಪ್ರಾಯ, ಮುಂದೆಯೂ ಅದೇ ಶ್ರೀರಕ್ಷೆ.

ಉತ್ತರ ಅಮೆರಿಕ ಖಂಡದ ಸಮೀಪದಲ್ಲಿರುವ ಕೆರಿಬಿಯನ್ ಸಮುದ್ರದ ದ್ವೀಪ ಸಮೂಹಗಳಲ್ಲಿ ಒಂದು ಕ್ಯೂಬಾ. ಅಮೆರಿಕದ ಫ್ಲಾರಿಡಾ ರಾಜ್ಯದ ದಕ್ಷಿಣದ ತುದಿಯಿಂದ ಕೇವಲ ೧೬೦ ಕಿ.ಮೀ. ದೂರದಲ್ಲಿರುವ ಪುಟ್ಟ ದ್ವೀಪ ರಾಷ್ಟ್ರ ಕ್ಯೂಬಾ ಅಮೆರಿಕದ ಆಡಳಿತಕ್ಕೆ ಗಂಟಲಲ್ಲಿ ಸಿಕ್ಕಿಕೊಂಡಿರುವ ಮುಳ್ಳಾಗಿದೆ. ೧೯೫೯ರ ಜನವರಿ ೧ರಂದು ಫಿಡೆಲ್ ಕ್ಯಾಸ್ಟ್ರೋ ಅಧಿಕಾರ ಕ್ಯೂಬಾದಲ್ಲಿ ಆರಂಭವಾದಾಗಿನಿಂದಲೂ ಅಮೆರಿಕ ಅದರ ಮೇಲೆ ಕೆಂಡ ಕಾರುತ್ತಿದೆ. ಅಮೆರಿಕದ ಬಹುರಾಷ್ಟ್ರೀಯ ಕಂಪೆನಿಗಳು, ಬಂಡವಾಳಗಾರರ ಕಪಿಮುಷ್ಟಿಯಿಂದ ಕಳಚಿಕೊಂಡು ತನ್ನ ಅಭಿವೃದ್ಧಿಗಾಗಿ ಅನ್ಯಮಾರ್ಗ ಅನುಸರಿಸಿದ್ದೇ ಕ್ಯೂಬಾ ಎಸಗಿದ ಅಪರಾಧ. ನೂರಾರು ವರ್ಷಗಳ ಕಾಲ ಕ್ಯೂಬಾದ ನೈಸರ್ಗಿಕ ಸಂಪನ್ಮೂಲಗಳನ್ನು ದೋಚಿ, ಅಲ್ಲಿನ ಜನತೆಯನ್ನು ಶೋಷಿಸಿದ ಅಮೆರಿಕ ಕ್ಯಾಸ್ಟ್ರೋ ಆಡಳಿತವನ್ನು ಕಿತ್ತೊಗೆಯಲು ನಡೆಸಿದ ಸಂಚುಗಳು ಒಂದೇ ಎರಡೇ. ಕುಖ್ಯಾತ ಸಿಐಎ ಷಡ್ಯಂತ್ರಗಳ ಮೂಲಕ ಕ್ಯೂಬಾದಲ್ಲಿ ದೊಂಬಿ ಎಬ್ಬಿಸಿ ದಂಗೆ ನಡೆಸಲು ನಡೆಸಿದ ಪ್ರಯತ್ನಗಳೆಲ್ಲ ಮಣ್ಣುಗೂಡಿದುವು. ಕ್ರಾಂತಿಯ ನಂತರ ಕ್ಯೂಬಾದಿಂದ ಫ್ಲಾರಿಡಾಗೆ ವಲಸೆ ಬಂದ ಸರ್ವಾಧಿಕಾರಿ ಬಾಟಿಸ್ಟಾನ ಅನುಯಾಯಿಗಳು, ಬೆಂಬಲಿಗರನ್ನು ಗುಂಪುಸೇರಿಸಿ ಆಕ್ರಮಣ ನಡೆಸುವ ಸನ್ನಾಹ ಕೈಗೂಡದೇಹೋಯಿತು. ಕ್ಯೂಬಾದ ಜನಪ್ರಿಯ ನಾಯಕ ಫಿಡೆಲ್ ಕ್ಯಾಸ್ಟ್ರೋ ಅವರನ್ನೇ ಕೊಲೆ ಮಾಡಲು ನಡೆಸಿದ ಒಳಸಂಚುಗಳೂ ಫಲಕಾರಿಯಾಗಲಿಲ್ಲ. ಇವೆಲ್ಲ ಒಂದು ಕಡೆಯಾದರೆ, ಅಮೆರಿಕ ಕ್ಯೂಬಾದ ಮೇಲೆ ಪ್ರಯೋಗಿಸಿರುವ ಬ್ರಹ್ಮಾಸ್ತ್ರ ಆರ್ಥಿಕ ದಿಗ್ಬಂಧನ. ಇದರಿಂದ ಕ್ಯೂಬಾಗೆ ಆಗಿರುವ ನಷ್ಟ ಅಪಾರ. ಕ್ಯೂಬಾದ ಮುಖ್ಯ ರಫ್ತು ಸರಕಾದ ಸಕ್ಕರೆ ಮತ್ತು ಹೊಗೆಸೊಪ್ಪು ಉದ್ಯಮಕ್ಕೆ ಭಾರಿ ಪೆಟ್ಟು ಬಿತ್ತು. ಆದರೂ ಅಂದು ಸೋವಿಯೆತ್ ಒಕ್ಕೂಟ ಹಾಗೂ ಪೂರ್ವ ಯೂರೋಪಿನ ರಾಷ್ಟ್ರಗಳ ಬೆಂಬಲ ಇದ್ದುದರಿಂದ ಕ್ಯೂಬಾಗೆ ಪರಿಸ್ಥಿತಿಯನ್ನು ನಿಭಾಯಿಸಿಕೊಳ್ಳಲು ತಕ್ಕಮಟ್ಟಿಗೆ ಸಾಧ್ಯವಾಯಿತು. ಆದರೆ ಸೋವಿಯತ್ ಒಕ್ಕೂಟದ ವಿಸರ್ಜನೆಯ ನಂತರ ಕ್ಯೂಬಾ ಏಕಾಂಗಿ. ಪ್ರಪಂಚದ ಪ್ರಜಾಪ್ರಭುತ್ವವಾದಿ ಶಾಂತಿಪ್ರಿಯ ಜನತೆಯ ನೈತಿಕ ಬೆಂಬಲ ಬಿಟ್ಟರೆ, ಬೇರಾವುದೇ ನೆರವಿನ ಒತ್ತಾಸೆಯಿಲ್ಲ ಅದಕ್ಕೆ.

ಹಾಗಿದ್ದರೂ, ಕ್ಯೂಬಾ ಎಲ್ಲ ಕಷ್ಟನಷ್ಟಗಳನ್ನೂ ನಿಭಾಯಿಸಿಕೊಂಡು ಮುಂದುವರಿಯುತ್ತಿರುವುದು ಗಮನಾರ್ಹ. ಎಂಥ ಕಷ್ಟದ ಪರಿಸ್ಥಿತಿಯನ್ನೂ ಜನತೆಯ ಬೆಂಬಲವಿದ್ದರೆ ಎದುರಿಸಬಹುದು ಎಂಬುದಕ್ಕೆ ಕ್ಯೂಬಾ ಜೀವಂತ ಸಾಕ್ಷಿ. ಅಮೆರಿಕ ವಿಧಿಸಿರುವ ನಿರ್ಬಂಧಗಳಿಂದಾಗಿ ಮುಕ್ತ ಅವಕಾಶ ಜಾಗತಿಕ ಮಾರುಕಟ್ಟೆಯಲ್ಲಿ ಲಭ್ಯವಿಲ್ಲದಿದ್ದರೂ ಕ್ಯೂಬಾ ಇದ್ದುದರಲ್ಲೇ ಸಂಪನ್ಮೂಲಗಳನ್ನು ರೂಢಿಸಿಕೊಂಡು ಎಲ್ಲ ಕ್ಷೇತ್ರಗಳಲ್ಲೂ ಪ್ರಗತಿ ಸಾಧಿಸಿದೆ. ಸಾರ್ವಜನಿಕ ಆರೋಗ್ಯ ಕ್ಷೇತ್ರದಲ್ಲಿ ಕ್ಯೂಬಾದ ಸಾಧನೆಯನ್ನು ಅಮೆರಿಕದ ತಜ್ಞರೇ ಶ್ಲಾಘಿಸಿದ್ದಾರೆ. ಅತ್ಯತ್ತಮ ವೈದ್ಯಕೀಯ ಸೌಲಭ್ಯ ಇಂದು ಕ್ಯೂಬಾದ ಜನತೆಗೆ ಉಚಿತವಾಗಿ ಲಭ್ಯ. ಅದೇ ರೀತಿಯಲ್ಲಿ ವಿದ್ಯಾಭ್ಯಾಸ ಕ್ಷೇತ್ರದಲ್ಲಿಯೂ ಅದು ಅಪಾರವಾದ ಮುನ್ನಡೆ ಸಾಧಿಸಿದೆ. ಇರುವ ಸೌಲಭ್ಯಗಳನ್ನೇ ಬಳಸಿಕೊಂಡು ಕೈಗಾರಿಕೋತ್ಪನ್ನವನ್ನು ವೃದ್ಧಿಗೊಳಿಸಲಾಗಿದೆ. ಕಳೆದ ಹನ್ನೆರಡು ವರ್ಷಗಳಲ್ಲಿ, ಅಂದರೆ ಸೋವಿಯೆತ್ ಒಕ್ಕೂಟ ವಿಸರ್ಜನೆಯ ನಂತರದ ವರ್ಷಗಳಲ್ಲಿ ಕ್ಯೂಬಾ ಸಮರೋಪಾದಿಯಲ್ಲಿ ಆಹಾರ ಉತ್ಪಾದನೆಗೆ ಗಮನ ನೀಡಿದೆ. ಹತ್ತು ವರ್ಷಗಳ ಹಿಂದೆ ಕ್ಯೂಬಾ ಸರಕಾರ ಜಾರಿಗೆ ತಂದ ಹೊಸ ಕೃಷಿ ನೀತಿಯಿಂದಾಗಿ ಇಂದು ಕ್ಯೂಬಾದ ಜನತೆಗೆ ಅಧಿಕ ಆಹಾರ ಪದಾರ್ಥಗಳು ಲಭ್ಯವಾಗಿವೆ. ದೇಶದಲ್ಲಿ ಸಾಗುವಳಿಗೆ ಯೋಗ್ಯವಾದ ಎಲ್ಲ ಭೂಮಿಯನ್ನು ಬಳಸಿಕೊಳ್ಳಲಾಗುತ್ತಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಪಾಳು ಬಿದ್ದಿದ್ದ ಜಮೀನುಗಳನ್ನು ಸಾಗುವಳಿಗೆ ಯೋಗ್ಯವಾಗಿಸುವುದರ ಜೊತೆಗೆ ನಗರಗಳಲ್ಲಿ ಲಭ್ಯ ಇರುವ ಎಲ್ಲ ಭೂಮಿಯನ್ನು ಆಹಾರ ಪದಾರ್ಥಗಳನ್ನು ಬೆಳೆಸಲು ದೊಡ್ಡ ಚಳವಳಿಯನ್ನೇ ಸಂಘಟಿಸಲಾಗಿದೆ. ಬರಡು ಭೂಮಿಯಲ್ಲಿ ಕಾಡು ಬೆಳೆಸುವುದಕ್ಕೆ ಪ್ರಾಧಾನ್ಯತೆ ನೀಡಿ ನೀರಿನ ಆಕರಗಳನ್ನು ವರ್ಧಿಸಲು ಕ್ರಮ ಕೈಗೊಳ್ಳಲಾಗಿದೆ. ಎಲ್ಲ ಮನೆಗಳ ಹಿತ್ತಲಿನಲ್ಲೂ ಹಣ್ಣುಹಂಪಲು, ತರಕಾರಿ ಬೆಳೆಯಲು ಪ್ರೋತ್ಸಾಹಿಸಲಾಗಿದೆ. ದೇಶದಲ್ಲಿದ್ದ ಸಕ್ಕರೆ ಕಾರ್ಖಾನೆಗಳಲ್ಲಿ ಅರ್ಧದಷ್ಟನ್ನು ಮುಚ್ಚಿ ಆ ಭೂಮಿಯನ್ನು – ಸುಮಾರು ಒಂದು ಮಿಲಿಯ ಹೆಕ್ಟೇರುಗಳಷ್ಟು ಭೂಮಿಯನ್ನು – ಸಾಗುವಳಿಗೆ ಯೋಗ್ಯವಾಗಿಸಿ, ೨೦೦೨ರಿಂದ ಆಹಾರ ಪದಾರ್ಥಗಳನ್ನು ಬೆಳೆಸಲಾಗುತ್ತಿದೆ. ನಗರಗಳಲ್ಲಿನ ಉದ್ಯಾನಗಳಲ್ಲಿಯೂ ಕೂಡ ಹಣ್ಣುಹಂಪಲು ತರಕಾರಿ ಬೆಳೆಸಲು ಕ್ರಮ ಕೈಗೊಳ್ಳಲಾಗಿದೆ. ನಗರದ ಮನೆಗಳಲ್ಲಿ ಮುಂದೆ ಹಾಗೂ ಹಿತ್ತಲಿನಲ್ಲಿ ಅಲಂಕಾರಿಕ ಗಿಡಗಳಿಗೆ ಬದಲಾಗಿ ಹಣ್ಣು, ತರಕಾರಿ ಬೆಳೆಯಲು ಜನರಿಗೆ ತರಬೇತಿ ನೀಡಲಾಗಿದೆ. ಒಟ್ಟಿನಲ್ಲಿ, ಎಲ್ಲೆಲ್ಲಿ ಆಹಾರ ಪದಾರ್ಥಗಳನ್ನು ಬೆಳೆಯಲು ಸಾಧ್ಯವೋ ಅಲ್ಲೆಲ್ಲ ಬೆಳೆಯಲು ಕ್ರಮ ಕೈಗೊಳ್ಳಲಾಗಿದೆ. ಜನತೆಯ

**ಉತ್ತರ ಅಮೆರಿಕ ಖಂಡದ ಸಮೀಪದಲ್ಲಿರುವ ಕೆರಿಬಿಯನ್ ಸಮುದ್ರದ ದ್ವೀಪ ಸಮೂಹಗಳಲ್ಲಿ ಒಂದು ಕ್ಯೂಬಾ. ಅಮೆರಿಕದ ಫ್ಲಾರಿಡಾ ರಾಜ್ಯದ ದಕ್ಷಿಣದ ತುದಿಯಿಂದ ಕೇವಲ ೧೬೦ ಕಿ.ಮೀ. ದೂರದಲ್ಲಿರುವ ಪುಟ್ಟ ದ್ವೀಪ ರಾಷ್ಟ್ರ ಕ್ಯೂಬಾ ಅಮೆರಿಕದ ಆಡಳಿತಕ್ಕೆ ಗಂಟಲಲ್ಲಿ ಸಿಕ್ಕಿಕೊಂಡಿರುವ ಮುಳ್ಳಾಗಿದೆ. ೧೯೫೯ರ ಜನವರಿ ೧ರಂದು ಫಿಡೆಲ್ ಕ್ಯಾಸ್ಟ್ರೋ ಅಧಿಕಾರ ಕ್ಯೂಬಾದಲ್ಲಿ ಆರಂಭವಾದಾಗಿನಿಂದಲೂ ಅಮೆರಿಕ ಅದರ ಮೇಲೆ ಕೆಂಡ ಕಾರುತ್ತಿದೆ. ಕ್ಯೂಬಾದ ಮೇಲೆ ಆಕ್ರಮಣಕಾರಿ ಧಾಳಿ ಕೂಡದೆಂದು ಹೇಳಿ ದೆಹಲಿಯಲ್ಲಿರುವ ಅಮೆರಿಕಾದ ರಾಯಭಾರಿಗೆ ಸಾರ್ವಜನಿಕರು ಪತ್ರ ಬರೆಯುವುದು ಸೂಕ್ತ.**

ಭಾಗವಹಿಸುವಿಕೆಯಿಂದ ಯಶಸ್ವಿಯಾಗಿರುವ ಈ ಕ್ರಮಗಳ ಪರಿಣಾಮವಾಗಿ ತರಕಾರಿ ಬೆಳೆ ೧೯೯೭ರಲ್ಲಿ ೦.೧ ಮಿಲಿಯ ಟನ್‌ಗಳಿದ್ದುದು ೨೦೦೨ರಲ್ಲಿ ೩ ಮಿಲಿಯ ಟನ್‌ಗಳಿಗೇರಿತ್ತು, ಅದು ಈಗ ಇನ್ನಷ್ಟು ಹೆಚ್ಚಿದೆ. ವಿಶ್ವಸಂಸ್ಥೆಯ ಆಹಾರ ಮತ್ತು ಕೃಷಿ ಸಂಸ್ಥೆ ಶಿಫಾರಸು ಮಾಡಿರುವ ತಲಾ ಒಬ್ಬರಿಗೆ ೩೦೦ ಗ್ರಾಮ್ ಆಹಾರ ಧಾನ್ಯಗಳ ಮಟ್ಟವನ್ನು ಮೀರಿ ಕ್ಯೂಬಾ ತಲಾ ಒಂದಕ್ಕೆ ೪೬೯ ಗ್ರಾಮ್‌ಗಳ ಮಟ್ಟ ತಲುಪಿದೆ. ಇದು ಸಮಾಜವಾದಿ ಪಥದಲ್ಲಿ ಅಡಿಯಿರಿಸಿರುವ ಕ್ಯೂಬಾದ ಜನತೆಯ ಸಾಧನೆ, ಅಮೆರಿಕದ ಉದ್ಧಟತನಕ್ಕೆ ನೀಡಿರುವ ತಕ್ಕ ಸವಾಲು.

ಮಾನವ ಹಕ್ಕುಗಳ ಕುರಿತು ಉಪದೇಶ ನೀಡುವ, ಅದರ ಪ್ರತಿಪಾದಕ ತಾನೊಂದೇ ಎಂದು ಕೊಚ್ಚಿಕೊಳ್ಳುವ ಅಮೆರಿಕ ಅವನ್ನು ಉಲ್ಲಂಘಿಸಿರುವಷ್ಟು ಬೇರಾವ ದೇಶವೂ ಮಾಡಿಲ್ಲ. ತಮಗೆ ಸರಿಯೆನಿಸಿದ ವ್ಯವಸ್ಥೆಯನ್ನು ರೂಪಿಸಿಕೊಳ್ಳುವ ಹಕ್ಕು ಪ್ರತಿಯೊಂದು ಜನತೆಯ ಮೂಲಹಕ್ಕು. ಅಮೆರಿಕ ತನಗಷ್ಟೇ ಆ ಹಕ್ಕು ಇರುವುದು ಎಂದು ತಿಳಿದುಕೊಂಡಿದೆ. ಅದರಿಂದಲೇ ಅದು ಬೇರೊಂದು ರೀತಿಯ ವ್ಯವಸ್ಥೆ ರೂಪಿಸಿಕೊಳ್ಳುವ ಜನತೆಗಳ ಮೇಲೆ ಕಿಡಿಕಾರುತ್ತದೆ. ಅಂಥ ದೇಶಗಳ ಮೇಲೆ ಆರ್ಥಿಕ ದಿಗ್ಬಂಧನ ಹೇರುವುದು ಅದು ಅನುಸರಿಸುವ ಕ್ರಮಗಳಲ್ಲೊಂದು. ಎರಡನೇ ಮಹಾಯುದ್ಧಾನಂತರ ತನಗಾಗದಿರುವ ದೇಶಗಳ ಜನತೆಯನ್ನು ಹಿಂಸಿಸಲು ಅಮೆರಿಕ ಪ್ರಯೋಗಿಸುತ್ತಿರುವ ಅಸ್ತ್ರ ಆರ್ಥಿಕ ದಿಗ್ಬಂಧನ. ಅದು ವಿಫಲವಾಗುತ್ತಿದೆ ಎಂದು ಮನವರಿಕೆಯಾದಾಗ ಅದು ದುರಾಕ್ರಮಣ ನಡೆಸುತ್ತದೆ. ಇರಾಕ್ ಅದಕ್ಕೆ ಉದಾಹರಣೆ. ಇನ್ನು ಮುಂದಿನ ಸರದಿ ಯಾರದಾದರೂ ಆದೀತು. ಆರ್ಥಿಕ ದಿಗ್ಬಂಧನದಿಂದ ತೊಂದರೆಗೀಡಾಗುವುದು ಜನಸಾಮಾನ್ಯರು. ಅವರ ಜೀವಿಸುವ ಹಕ್ಕನ್ನೇ ಅದು ಕಸಿದುಕೊಳ್ಳುತ್ತದೆ. ಔಷಧಿಗಳು, ಆಹಾರ ಪದಾರ್ಥಗಳು, ಇತರ ಸೌಲಭ್ಯಗಳು ಜನರಿಗೆ ಸುಲಭವಾಗಿ ದೊರಕದೆ ಜೀವನ ದುಸ್ತರವಾಗುತ್ತದೆ. ಇಡೀ ಜನತೆಯ ಬದುಕಿನ ಹಕ್ಕನ್ನೇ ಕಸಿದುಕೊಳ್ಳುತ್ತದೆ. ಇರಾಕಿನಲ್ಲಿ ಆದದ್ದೂ ಅದೇ. ಸಹಸ್ರಾರು ಮಂದಿ ಮಕ್ಕಳು, ರೋಗಿಗಳು, ಬಡಜನರು ಸೂಕ್ತ ಚಿಕಿತ್ಸೆ ಇಲ್ಲದೆ, ಪೋಷಕಾಂಶವಿಲ್ಲದೆ ಅಸುನೀಗಿದರು. ಇಂಥ ಕ್ರೂರ ದಿಗ್ಬಂಧನ ಮಾನವ ಹಕ್ಕುಗಳ ಉಲ್ಲಂಘನೆ ಅಲ್ಲವೆ? ಮುಕ್ತ ಮಾರುಕಟ್ಟೆಯ ಜಪ ಮಾಡುವ ಅಮೆರಿಕ ದಿಗ್ಬಂಧನ ಹೇರುವ ಮೂಲಕ ರಾಷ್ಟ್ರವೊಂದರ ವ್ಯಾಪಾರಕ್ಕೇ ಧಕ್ಕೆ ತರುವುದಿಲ್ಲವೆ? ಧನಮದ, ಬಲಮದದಿಂದ ಅಮೆರಿಕ ಇಂಥ ಧೂರ್ತತನ ತೋರಿಸುತ್ತಿದೆ. ಇದನ್ನು ಅಂತ್ಯಗೊಳಿಸುವವರೆಗೆ ನಾಗರಿಕ ಜಗತ್ತು ನಿರಾತಂಕವಾಗಿರುವುದು ಸಾಧ್ಯವಾಗದು. ೧೯೯೨ರಿಂದ ವಿಶ್ವಸಂಸ್ಥೆಯ ಮಹಾಸಭೆ ಕ್ಯೂಬಾದ ಮೇಲೆ ವಿಧಿಸಲಾಗಿರುವ ಆರ್ಥಿಕ ದಿಗ್ಬಂಧನವನ್ನು ಕಿತ್ತುಹಾಕಬೇಕೆಂದು ಶಿಫಾರಸು ಮಾಡುತ್ತಿದೆ ಅತ್ಯಧಿಕ ಬಹುಮತದಿಂದ. ಈ ನಿರ್ಣಯವನ್ನು ವಿರೋಧಿಸುತ್ತ ಬಂದಿರುವುದು ಅಮೆರಿಕ ಮತ್ತು ಅದರ ಚೇಲ ಇಸ್ರೇಲ್ ಮಾತ್ರ. ಒಂದೆರಡು ಬಾರಿ ಪುಟ್ಟ ರಾಷ್ಟ್ರ ಮೈಕ್ರೊನೀಸಿಯ ವಿರೋಧಿಸಿದೆ. ಎಂದರೆ, ಅಮೆರಿಕ ವಿಶ್ವದ ಎಲ್ಲ ದೇಶಗಳ ಅಭಿಪ್ರಾಯವನ್ನು ಧಿಕ್ಕರಿಸಿ ಕ್ಯೂಬಾದ ಮೇಲೆ ಛಲ ಸಾಧಿಸುತ್ತಿದೆ. ಆರ್ಥಿಕ ದಿಗ್ಬಂಧನ ಮುಂದುವರಿಸಿ, ಭದ್ರತಾ ಮಂಡಲಿಯಲ್ಲಿ ತನ್ನ ವೀಟೋ ಹಕ್ಕು ಚಲಾಯಿಸಿ ಅದನ್ನು ನಿಷ್ಕ್ರಿಯಗೊಳಿಸಿದೆ. ಅಮೆರಿಕದ ಅಹಮಿಕೆಯಿಂದಾಗಿ ಬಹುಮತಕ್ಕೆ ಬೆಲೆಯೇ ಇಲ್ಲವಾಗಿದೆ. ಈ ಪರಿಸ್ಥಿತಿ ಅಂತ್ಯಗೊಂಡಂದೇ ಮುಕ್ತಿ.

ಕ್ಯೂಬಾದ ಮೇಲೆ ದುರಾಕ್ರಮಣ ನಡೆಸಲು ಅಮೆರಿಕ ಹಿಂದೆ ನಡೆಸಿದ ಪ್ರಯತ್ನಗಳೆಲ್ಲ ವಿಫಲಗೊಂಡುವು. ೧೯೬೨ರಲ್ಲಿ ಕ್ಯೂಬಾದ ಆಕ್ರಮಣಕ್ಕೆ ಸಿದ್ಧತೆ ಎಲ್ಲ ಪೂರ್ಣಗೊಂಡಿದ್ದುವು. ಇನ್ನೊಂದು ಜಾಗತಿಕ ಯುದ್ಧಕ್ಕೆ ಎಡೆಕೊಡುವ ಸಾಧ್ಯತೆಯಿಂದಾಗಿ ಅದು ತಪ್ಪಿತು. ಈಗ ನಲವತ್ತು ವರ್ಷಗಳ ನಂತರ ಮತ್ತೆ ಕ್ಯೂಬಾದ ಮೇಲೆ ದಾಳಿ ನಡೆಸುವ ಮಸಲತ್ತು ನಡೆಸಿದೆ ಅಮೆರಿಕ. ಅದನ್ನು ತಡೆಯುವುದು ಎಲ್ಲ ಶಾಂತಿಪ್ರಿಯರ, ಪ್ರಜಾಪ್ರಭುತ್ವವಾದಿಗಳ ಕರ್ತವ್ಯ, ತಪ್ಪಿದರೆ ಅನಾಹುತವೆ. ○



## ಎಲ್ಲರಂತಲ್ಲ ನನ್ನ ಗಂಡ!

ಎಲ್ಲರಂತಲ್ಲ ನನ್ನ ಗಂಡ
ಹೇಳುವೆನು ಕೇಳಿ
ನನ್ನ ಕರ್ಮ ಕಾಂಡ !

ಇಲ್ಲ... ಬಿಡಿ ಸಿಗರೇಟು;
ಇಲ್ಲ... ಹೆಣ್ಣು, ಹೆಂಡ ವಾಸನೆ
ನಾ ಬರೆಯುವುದು ಕಂಡರೆ
ಖಾಲಿ ಬಾಟ್ಲಿಯಲಿ
ಏರುವುದು ಇವರ "ರೇಶ್"!!

"ಬಾಳಿನಲಿ ನಾ ಮೋಸ ಹೋದೆ
ಆ ದಿನ...
ಕವಯಿತ್ರಿಯಾದ ನಿನ್ನ
ಕೈ ಹಿಡಿದು ಪಾವನವಾದೆ" !
ಕವಿತೆ ಹೇಳಿ ಅಣಕಿಸುವರು ನೋಡಿ !

"ನೀನು ಹಾಗೂ
ನಿನ್ನ ಬರೆಹಗಳ
ಎತ್ತಿ ಒಗೆಯಬೇಕು
ಅಟ್ಲಾಂಟಿಕ ಸಾಗರಕೆ !
ಮೇಲೆ ಬಾರದಿರಲು
ಕೊರಳಿಗೆ ಕಟ್ಟಬೇಕು ಕಲ್ಲು" !
ದುರ್ವಾಸ ಪತಿರಾಯರದು ನಿತ್ಯ ಶಾಪ.

ಆದರೆ...
ಬೀಡಿ-ಸಿಗರೇಟು ವ್ಯಸನಿ
ಗಳಂತೆ
ಬರೆಯೋದು ಅನಿವಾರ್ಯ
ಕರ್ಮ ಎನಗೆ

ಎಲ್ಲರಂತಲ್ಲ ನನ್ನ ಗಂಡ
ದೇವರಾಣೆಗೂ
ನಾ ಮಾಡಿದ್ದೆ ಮಹಾಪಾಪ !

**ಶೋಭಾ ಪ್ರಮೋದ್**
ಮಹಾಲಕ್ಷ್ಮೀ ಏಜೆನ್ಸೀಸ್, ಮಾಣ್‌ಗಾಂವ್ -
೪೦೨ ೧೦೪, ಮಹಾರಾಷ್ಟ್ರ



# ಹಿಪ್ಯಾಟಿಟಿಸ್ – ಬಿ ಚುಚ್ಚುಮದ್ದು ಅವಶ್ಯವೇ? ಹೇರಿಕೆಯೇ?

ಈಗೊಂದ್ಯೆದಾರು ವರ್ಷಗಳಿಂದ ಹಿಪ್ಯಾಟಿಟಿಸ್–ಬಿ ಚುಚ್ಚುಮದ್ದಿನ ಕ್ಯಾಂಪುಗಳ ಬಗ್ಗೆ ಪದೇ ಪದೇ ಕೇಳುತ್ತಿದ್ದೇವೆ. ಹಾಕಿಸಿಕೊಳ್ಳಲೇಬೇಕಂತೆ, ಮುನ್ನೂರೈವತ್ತು ರೂಪಾಯಿಯಂತೆ.... ಎಂದು ಮಕ್ಕಳು ತಾಯ್ತಂದೆಗಳಿಗೆ ದುಂಬಾಲು ಬೀಳುವುದು, ಮುಖ್ಯೋಪಾಧ್ಯಾಯರಿಂದ ತಾಯ್ತಂದೆಯರಿಗೆ ಒತ್ತಾಯ ಇವೆಲ್ಲ ತೀರಾ ಸಾಮಾನ್ಯ ಸುದ್ದಿಗಳು. ಅವು ಈಗೀಗಂತೂ ವೃದ್ಧಾಶ್ರಮಗಳಂಥ ಹಿರಿಯ ನಾಗರಿಕರ ಆಶ್ರಮಗಳಲ್ಲೂ ಅತಿಯಾಗುತ್ತಿವೆ. ಪ್ರತಿಷ್ಠಿತ ಸಾಮಾಜಿಕ ಸಂಸ್ಥೆಗಳು ಬಹು ಆಸ್ಥೆಯಿಂದ ಹಿಪ್ಯಾಟಿಟಿಸ್–ಬಿ ಕ್ಯಾಂಪು ನಡೆಸುತ್ತಿವೆ. ಅದರ ಬೆಲೆ ಇಳಿಸಲು ಪೋಷಕರಾಗಿ ನಿಲ್ಲುತ್ತಲೂ ಇವೆ.

**ಈ**ಗೊಂದ್ಯೆದಾರು ವರ್ಷಗಳಿಂದ ಹಿಪ್ಯಾಟಿಟಿಸ್-ಬಿ ಚುಚ್ಚುಮದ್ದಿನ ಕ್ಯಾಂಪುಗಳ ಬಗ್ಗೆ ಪದೇ ಪದೇ ಕೇಳುತ್ತಿದ್ದೇವೆ. ಹಾಕಿಸಿಕೊಳ್ಳಲೇಬೇಕಂತೆ, ಮುನ್ನೂರೈವತ್ತು ರೂಪಾಯಿಯಂತೆ.... ಎಂದು ಮಕ್ಕಳು ತಾಯ್ತಂದೆಗಳಿಗೆ ದುಂಬಾಲು ಬೀಳುವುದು, ಮುಖ್ಯೋಪಾಧ್ಯಾಯರಿಂದ ತಾಯ್ತಂದೆಯರಿಗೆ ಒತ್ತಾಯ ಇವೆಲ್ಲ ತೀರಾ ಸಾಮಾನ್ಯ ಸುದ್ದಿಗಳು. ಅವು ಈಗೀಗಂತೂ ವೃದ್ಧಾಶ್ರಮಗಳಂಥ ಹಿರಿಯ ನಾಗರಿಕರ ಆಶ್ರಮಗಳಲ್ಲೂ ಅತಿಯಾಗುತ್ತಿವೆ. ಪ್ರತಿಷ್ಠಿತ ಸಾಮಾಜಿಕ ಸಂಸ್ಥೆಗಳು ಬಹು ಆಸ್ಥೆಯಿಂದ ಹಿಪ್ಯಾಟಿಟಿಸ್-ಬಿ ಕ್ಯಾಂಪು ನಡೆಸುತ್ತಿವೆ. ಅದರ ಬೆಲೆ ಇಳಿಸಲು ಪೋಷಕರಾಗಿ ನಿಲ್ಲುತ್ತಲೂ ಇವೆ.

■ ಡಾ|| ಗೋಪಾಲ ದಾಬಡೆ
■ ಶಾರದಾ ಗೋಪಾಲ

ಹಿಪ್ಯಾಟಿಟಿಸ್ ಎಂದರೆ ಪಿತ್ತಕೋಶಕ್ಕೆ ಸೋಂಕು. ಸೋಂಕು ತರುವ ಐದು ರೀತಿಯ ವೈರಾಣುಗಳಿವೆ -ಎ, ಬಿ, ಸಿ, ಡಿ, ಈ ಎಂದು. 'ಎ' ಮತ್ತು 'ಈ' ಇವು ನೀರು ಮತ್ತು ಆಹಾರದಿಂದ ಹರಡಿದರೆ ಉಳಿದವು ರಕ್ತದ ಸೋಂಕಿನಿಂದ ಹರಡುವ ಹಿಪ್ಯಾಟಿಟಿಸ್.

ಇಂದು ಬಹು ಪ್ರಚಾರದಲ್ಲಿರುವ ಹಿಪ್ಯಾಟಿಟಿಸ್-ಬಿ ಏಡ್ಸ್ ರೋಗದಂತೆಯೇ ರೋಗಿಯ ರಕ್ತ ಅಥವಾ ಬೇರೆ ಕೆಲವು ಅಂಗಾಂಶಗಳು ಇನ್ನೊಬ್ಬರ ದೇಹ ಪ್ರವೇಶಿಸಿದಾಗ ಅವರಿಗೂ ರೋಗದ ಸೋಂಕು ತಗುಲುವುದು. ರೋಗ ಹರಡುವ ವೇಗ ಮಾತ್ರ ಏಡ್ಸ್‌ಗಿಂತಲೂ ಜೋರು ಎನ್ನುತ್ತಾರೆ.

ಮಾದಕ ಔಷಧಗಳನ್ನು ಚುಚ್ಚಿಕೊಳ್ಳುವ ಜನ ಒಬ್ಬರು ಬಳಸಿದ ಸೂಜಿಯನ್ನೇ ಇನ್ನೊಬ್ಬರು ಬಳಸುವುದರಿಂದ, ಅಸುರಕ್ಷಿತ.ಲೈಂಗಿಕ ಸಂಪರ್ಕದಿಂದ, ರಕ್ತದೊಟ್ಟಿಗೆ ಕೆಲಸ ಮಾಡುವಾಗ ಉದಾ: ಬ್ಲಡ್ ಬ್ಯಾಂಕಿನಲ್ಲಿ, ಪದೇ ಪದೇ ರಕ್ತ ಕೊಡುವವರಿಗೆ ಮತ್ತು ಸ್ವೀಕರಿಸುವವರಿಗೆ, ಹಲ್ಲಿನ ಡಾಕ್ಟರುಗಳಿಗೆ ರೋಗ ತಗಲುವ ಅಪಾಯವಿದೆ.

ಇದಲ್ಲದೇ ಗರ್ಭಿಣಿ ತಾಯಿಯಲ್ಲಿ ಹಿಪ್ಯಾಟಿಟಿಸ್-೧ಬಿ ರೋಗವಿತ್ತೆಂದರೆ ಜನಿಸುವ ಮಗು ಆ ರೋಗವನ್ನು ಬಳುವಳಿಯಾಗಿ ಪಡೆದಿರುತ್ತದೆ.

ಸಾಮಾನ್ಯವಾಗಿ ಒಂದೆರಡು ವಾರ ಕಾಡುವ ರೋಗವಿದು. ಆರು ತಿಂಗಳಿಗೂ ಜಾಸ್ತಿ ಕಾಲ ಇತ್ತೆಂದರೆ ಪಿತ್ಥಕೋಶಕ್ಕೆ ಕ್ಯಾನ್ಸರ್ ತಗುಲಬಹುದು. ಹಾಗಾದಾಗ ಮಾತ್ರ ಮನುಷ್ಯ ಬದುಕುವುದು ಕಷ್ಟ. ರೋಗ ತಗುಲಿದ ಒಟ್ಟು ಜನರಲ್ಲಿ ಅವರವರ ರೋಗ ಪ್ರತಿಬಂಧಕ ಶಕ್ತಿಗನುಸಾರವಾಗಿ ಶೇ.೫ ಜನರಿಗೆ ರೋಗವು ಮುಂದಿನ ಹಂತವನ್ನು ತಲುಪಬಹುದು. ಆ ಶೇಕಡಾ ೫ರಲ್ಲಿ ಕಾಲುಭಾಗ ಜನಕ್ಕೆ ಪಿತ್ಥಕೋಶದ ಕ್ಯಾನ್ಸರಾಗಬಹುದು. ಒಮ್ಮೆ ಹಿ-ಬಿ ರೋಗ ಬಂದು ವಾಸಿಯಾಯಿತೆಂದರೆ ಆ ಮನುಷ್ಯನಿಗೆ ಜೀವನ ಪೂರ್ತಿ ರೋಗನಿರೋಧಕ ಶಕ್ತಿ ಇರುತ್ತದೆ.

ತಾಯಿಯಿಂದ ಹುಟ್ಟುವಾಗಲೇ ರೋಗ ಪಡೆಯಿತೆಂದರೆ ಆ ಮಗುವಿನ ಪಿತ್ಥಕೋಶ ಪೂರ್ತಿ ಹಾಳಾಗುವ ಸಂಭವವಿದೆ. ಇನ್ನಾವುದೇ ವಯಸ್ಸಿನಲ್ಲಿ ಈ ಸಾಧ್ಯತೆ ಶೇ.೫ರ ಕಾಲುಭಾಗ ಮಾತ್ರ. ರೋಗಿಗಳಲ್ಲಿ ನೂರಕ್ಕೆ ಹತ್ತು ಜನರಲ್ಲಿ ಮಾತ್ರ ಜೀವನ ಪೂರ್ತಿ ರೋಗಾಣುಗಳು ಇರಬಹುದು.

ಇವಿಷ್ಟು ವಿಶ್ವ ಆರೋಗ್ಯ ಸಂಸ್ಥೆಯೇ ಹೇಳುವ ವಿಷಯ. ಆದರೆ ಹಿಪ್ಯಾಟಿಟಿಸ್-ಬಿ ಚುಚ್ಚುಮದ್ದನ್ನು ತಯಾರಿಸುವ ಔಷಧ ಕಂಪನಿಗಳ ಹೇಳಿಕೆಯೇ ಬೇರೆ. 'ಏಡ್ಸ್ ರೋಗವು ಒಂದು ವರ್ಷದಲ್ಲಿ ಕೊಲ್ಲುವಷ್ಟು ಜನರನ್ನು ಹಿ -ಬಿ ರೋಗವು ಒಂದು ದಿನದಲ್ಲಿ ಕೊಲ್ಲುತ್ತದೆ'. ಇಂಥ ಜಾಹೀರಾತುಗಳು ಇಂದು ಯಾವುದೇ ಚಿಕ್ಕಪುಟ್ಟ ಕ್ಲಿನಿಕ್, ಆಸ್ಪತ್ರೆಗಳ ಗೋಡೆಗಳ ಮೇಲೆ ರಾರಾಜಿಸುತ್ತವೆ. ನಮ್ಮ ದೇಶದಲ್ಲಿ ಹಿಪ್ಯಾಟಿಟಿಸ್-ಬಿಯಿಂದ ಸಾಯುತ್ತಿರುವವರ ಸಂಖ್ಯೆ ನಮಗೆಲ್ಲೂ ಸಿಗುವುದೇ ಇಲ್ಲ. ರೋಗ ತಗುಲಿದವರಲ್ಲಿ ಶೇ. ೧.೪೨ರಷ್ಟು ಜನರು ರೋಗವಾಹಕರಾಗಿರುತ್ತಾರೆ. ಈ ಸಂಖ್ಯೆ ಶೇ. ೨ಕ್ಕೇರಿದರೆ ದೇಶದಲ್ಲಿ ಎಲ್ಲರಿಗೂ ಲಸಿಕೆ ಹಾಕಿಸಬೇಕೆಂದು ವಿಶ್ವ ಆರೋಗ್ಯ ಸಂಸ್ಥೆಯು ಹೇಳುತ್ತದೆ.

ಎಲ್ಲಾ ದೇಶಗಳೂ ಹಿ-ಬಿ ಲಸಿಕೆಯನ್ನು ತಮ್ಮ ರಾಷ್ಟ್ರೀಯ ಚುಚ್ಚುಮದ್ದು ಕಾರ್ಯಕ್ರಮದಲ್ಲಿ ಹಾಕಿಕೊಳ್ಳಬೇಕೆಂದು ವಿಶ್ವಬ್ಯಾಂಕು (ವಿಶ್ವ ಆರೋಗ್ಯ ಸಂಸ್ಥೆ ಅಲ್ಲ!) ಮಾರ್ಗದರ್ಶಿ ಸೂತ್ರವನ್ನು ಕೊಟ್ಟಿದೆ. ಭಾರತ ಸರಕಾರವೂ ಕೂಡ ಹಂತ ಹಂತವಾಗಿ ಅದನ್ನು ಜಾರಿಗೊಳಿಸುತ್ತಿದೆ.

ಈ ಮಧ್ಯೆ ವಿಶ್ವಸಂಸ್ಥೆಯು ಖಾಸಗಿ ಮತ್ತು ಸಾಮುದಾಯಿಕ ಪಾಲುದಾರಿಕೆಯ (ಪ್ರೈವೆಟ್ ಪಬ್ಲಿಕ್ ಪಾರ್ಟನರ್‌ಶಿಪ್) ಕಾರ್ಯಕ್ರಮವೊಂದನ್ನು ಜಾರಿಯಲ್ಲಿ ತಂದಿತು. ಏಡ್ಸ್‌ನಂಥ ಭಯಂಕರ ಕಾಯಿಲೆಗಳನ್ನು ಹೊಡೆದೋಡಿಸಲು ಶ್ರೀಮಂತ ದೇಶಗಳು ಮತ್ತು ಖಾಸಗಿಯವರ ಸಹಭಾಗಿತ್ವದಲ್ಲಿ ಲಸಿಕೆ, ಔಷಧಗಳನ್ನು ಬಡದೇಶಗಳಿಗೆ-ಕೊಡುವ ಕಾರ್ಯಕ್ರಮವಿದು. 'ಗ್ಲೋಬಲ್ ಅಲಾಯನ್ಸ್ ಫಾರ್ ವ್ಯಾಕ್ಸಿನೇಶನ್ ಅಂಡ್ ಇಮ್ಯುನೈಸೇಶನ್,(ಗಾವಿ) ಎಂಬ ಹೆಸರಿನ ಈ ಕಾರ್ಯಕ್ರಮದಲ್ಲಿ ಬಿಲ್‌ಗೇಟ್ಸ್‌ನಂಥವರು ಹಣ ಕೊಡುತ್ತಿದ್ದಾರೆ. ಆದರೆ ಲಸಿಕೆ ಕೊಡುವ ಕಾರ್ಯಕ್ರಮ ಆರಂಭಿಸಲು ಮಾತ್ರ 'ಗಾವಿ' ಹಣಕೊಡುತ್ತದೆ.

ಇಲ್ಲಿ ಏಳುವ ಪ್ರಶ್ನೆಗಳೆಂದರೆ, ಹಿ-ಬಿ ಚುಚ್ಚುಮದ್ದು ದೇಶದಲ್ಲಿ ಎಲ್ಲರಿಗೂ ಅತ್ಯವಶ್ಯವೇ? ಅಥವಾ ರೋಗದ ಬಗ್ಗೆ ಮಾಹಿತಿ ಕೊಡುವುದು ಹೆಚ್ಚು ಅವಶ್ಯವೇ? ದೇಶದ ಅವಶ್ಯಕತೆಗಳನ್ನು ನೋಡದೆ ವಿಶ್ವಬ್ಯಾಂಕು

ನಮ್ಮ ಮೇಲೆ ಇದನ್ನು ಹೇರುತ್ತದೆಯೇ ?

ಚುಚ್ಚುಮದ್ದಿನ ಅವಶ್ಯಕತೆ ಇರುವಲ್ಲಿ ಅದನ್ನು ತಲುಪಿಸ ಲೇಬೇಕಾದ್ದು ಅತಿ ಮುಖ್ಯ. ಬ್ಲಡ್ ಬ್ಯಾಂಕಿನಲ್ಲಿ ಕೆಲಸ ಮಾಡುವವರು, ರಕ್ತ ಕೊಡುವವರು-ಕೊಳ್ಳುವವರು; ಡೆಂಟಿಸ್ಟ್‌ಗಳು ಹಿ-ಬಿ ಲಸಿಕೆ ಹಾಕಿಸಿಕೊಳ್ಳಲೇಬೇಕು. ಎರಡನೆಯ ಗುಂಪು ಅನೈತಿಕ ಲೈಂಗಿಕ ಸಂಗ ಮಾಡು ವವರು ಮತ್ತು ಮಾದಕ ಔಷಧ ಚುಚ್ಚಿಕೊಳ್ಳುವವರು. ಇಂಥವರಿಗೆ ಹಿ-ಬಿ ಚುಚ್ಚುಮದ್ದು ಹಾಕಿಸಬೇಕು.

ಇನ್ನು ಅತಿ ಹೆಚ್ಚು ಅಪಾಯದಲ್ಲಿರುವ ಗುಂಪೆಂದರೆ ಹಿಪ್ಯಾಟಿಟಿಸ್-ಬಿ ಇರುವ ತಾಯಿಗೆ ಹುಟ್ಟುವ ಮಕ್ಕಳದು. ಆ ಶಿಶುಗಳಿಗೆ ರೋಗ ಬರಬಾರದೆಂದರೆ ಹುಟ್ಟಿದ ೨೪ ತಾಸಿನೊಳಗೆ ಲಸಿಕೆ ಹಾಕಬೇಕು. ನಿಜವಾದ ಸವಾಲಿನ ಕೆಲಸವಿದು. ಏಕೆಂದರೆ ನಮ್ಮ ದೇಶದಲ್ಲಿ ಶೇ.೭೦ ಹೆರಿಗೆಗಳು ಮನೆಗಳಲ್ಲಿ, ದೂರದ ಹಳ್ಳಿಯ ಗುಡಿಸಲು ಗಳಲ್ಲಿ ಆಗುತ್ತವೆ. ಅಂಥಲ್ಲಿ ಮಗು ಹುಟ್ಟಿದ ೨೪ ತಾಸಿನೊಳಗೆ ಲಸಿಕೆ ತಲುಪಿಸುವುದು ಅಸಂಭವ.

ಇದು ಬಹಳ ದುಬಾರಿಯಾದ ಲಸಿಕೆ. ಇಂದು ಕಾರ್ಯಕ್ರಮ ಆರಂಭಿಸಲಿಕ್ಕಾಗಿ 'ಗಾವಿ'ಯೇನೋ ಸಹಾಯ ಮಾಡಬಹುದು. ನಾಳೆ ಅದನ್ನು ಮುಂದುವ ರೆಸುವ ಜವಾಬ್ದಾರಿ, ಖರ್ಚು ಎಲ್ಲವೂ ನಮ್ಮ ಸರಕಾರದ ತಲೆಗೇ. ಇಂದು ದೇಶದಲ್ಲಿ ಕ್ಷಯ ರೋಗದಿಂದ ಪ್ರತಿನಿತ್ಯ ಸಾವಿರಾರು ಜನ ಸಾಯುತ್ತಿದ್ದಾರೆ. ಲಸಿಕೆ ಬಂದು ದಶಕಗಳೇ ಕಳೆದಿದ್ದರೂ ಆ ರೋಗವನ್ನು ನಿಯಂತ್ರಿಸ ಲಾಗಿಲ್ಲ ನಮಗೆ. ಹಾಗಿರುವಾಗ ಬೇರೆಯವರ ಒತ್ತಾಯಕ್ಕೆ, ಲೆಕ್ಕಸಂಖ್ಯೆ ಗೊತ್ತಿಲ್ಲದ ರೋಗಕ್ಕೆ ಲಸಿಕೆ ತಲುಪಿಸುವವರೇ ನಾವು ?

ಪ್ರತಿಷ್ಠಿತ ಸಂಘ ಸಂಸ್ಥೆಗಳು ಹಿ-ಬಿ ಚುಚ್ಚುಮದ್ದಿನ ಕ್ಯಾಂಪು ನಡೆಸುತ್ತಿವೆ. ಅಲ್ಲಿ ಜನರಿಗೆ ರೋಗದ ಮಾಹಿತಿ ಯನ್ನೇನೂ ಕೊಡಲಾಗುತ್ತಿಲ್ಲ, ಗರ್ಭಿಣಿಯರಿಗೆ ರೋಗ ವಿದೆಯೇ ಎಂದು ರಕ್ತ ತಪಾಸಣೆಯೇನೂ ನಡೆಯು ವುದಿಲ್ಲ. 'ನವಜಾತ ಶಿಶುಗಳಿಗೆ', 'ರಕ್ತದ ಜೊತೆ ಸಂಪರ್ಕ ದಲ್ಲಿರುವವರಿಗೆ' ಎಂದು ನಿರ್ದಿಷ್ಟ ಗುರಿಗುಂಪು ಇಲ್ಲ. ಬದಲು ಶಾಲಾ ಮಕ್ಕಳಿಗೋ, ವಯಸ್ಸಾದವರಿಗೋ ಇರುತ್ತದೆ. ನಿರ್ದಿಷ್ಟ ಗುರಿ ಇಲ್ಲದೆಯೇ ಹೀಗೆ ರ್‍ಯಾಂಡಂ ಆಗಿ ಚುಚ್ಚಿ ಪೋಲು ಮಾಡಬಹುದಾದ ಔಷಧವೇ ಇದು ?

ಇಂಥ ಗುರಿ ಇಲ್ಲದ ಕ್ಯಾಂಪುಗಳನ್ನು ಮಾಡುವ ಬದಲು ಅತಿ ಅಗತ್ಯ ಇರುವಂಥ ಶಿಶುಗಳಿಗೆ ಲಸಿಕೆ ನೀಡುವುದು ಹೇಗೆಂದು ಯೋಚಿಸಬೇಕಾಗಿದೆ ನಾವು. ಚುಚ್ಚುಮದ್ದು ಬಹಳ ದುಬಾರಿ ಆಗಿರುವುದರಿಂದಲೂ ಹೆರಿಗೆಗಳು ಎಲ್ಲವೂ ಆಸ್ಪತ್ರೆಯಲ್ಲಿ ಆಗದಿರುವುದ ರಿಂದಲೂ ಪರ್ಯಾಯ ಮಾರ್ಗವೊಂದನ್ನು ಹುಡುಕಿ ಯೋಗ್ಯರಿಗೆ ಅದನ್ನು ತಲುಪಿಸುವುದು ಅತಿ ಮಹತ್ವದ್ದು.

ಎಲ್ಲಾ ಸ್ತ್ರೀಯರನ್ನೂ ಹಿಪ್ಯಾಟಿಟಿಸ್-ಬಿ ರೋಗಕ್ಕಾಗಿ ತಪಾಸಿಸುವುದು ಅಸಾಧ್ಯವಾದರೂ ಗರ್ಭಿಣಿ ಸ್ತ್ರೀಯರ ತಪಾಸಣೆ ತುಸುಮಟ್ಟಿಗೆ ಸಾಧ್ಯವೆನ್ನಬಹುದು. ಚೆಕ್‌ಅಪ್, ಟಿಟಿ ಇಂಜೆಕ್ಷನ್ ಎಂದು ಈಗೀಗ ಹೆಚ್ಚೆಚ್ಚು ಗರ್ಭಿಣಿಯರು ಆಸ್ಪತ್ರೆಗಳಿಗೆ ಬರುತ್ತಿರುತ್ತಾರೆ. ಹಾಗೆ ಬಂದವರ ರಕ್ತ ಪರೀಕ್ಷೆ ಮಾಡಬಹುದು. ರೋಗವಿದೆ ಯೆಂದು ಕಂಡುಬಂದ ತಾಯಿಯ ಹೆರಿಗೆ ವೇಳೆಗೆ ನರ್ಸೋ ಡಾಕ್ಟರೋ ಹಾಜರಿದ್ದು ಶಿಶುವಿಗೆ ಲಸಿಕೆ ಹಾಕ ಬಹುದು. ತೀರಾ ಅಸಾಧ್ಯವಾದ ಸಾಧ್ಯತೆಯೇನಲ್ಲ ಇದು.

ರೋಗ ತಗುಲಬಹುದಾದ ಇನ್ನೆರಡು ಗುಂಪುಗಳಿಗೆ ಲಸಿಕೆ ಹಾಕುವ ಗುರಿಯನ್ನು ಸಂಘ ಸಂಸ್ಥೆಗಳ ಕ್ಯಾಂಪ್ ಇಟ್ಟುಕೊಳ್ಳಬೇಕು. ಈ ರೀತಿ ಸರಿಯಾದ ದಿಕ್ಕುಗಳಲ್ಲಿ, ಸರಿಯಾದ ಯೋಜನೆಗಳಿಂದ ರೋಗದ ಮೇಲೆ ದಾಳಿ ಮಾಡಿದರೆ ನಿಯಂತ್ರಣ ನಮ್ಮ ಕೈಯಲ್ಲೇ ಇದೆ.

ಇಂದು ಸರಕಾರವು ಕ್ಷಯ ರೋಗ ನಿವಾರಣೆಗೆ ಹಾಕುತ್ತಿರುವಷ್ಟು ಹಣವನ್ನು ಹಿಪ್ಯಾಟಿಟಿಸ್-ಬಿ ಚುಚ್ಚು ಮದ್ದುಗಳ ಖರೀದಿಗೆ ಮಾತ್ರವೇ ಹಾಕುತ್ತಿದೆ. ವರ್ಷಕ್ಕೆ ೫೦,೦೦೦ ಜನರನ್ನು ನುಂಗುವ ಕ್ಷಯ ರೋಗವೆಲ್ಲಿ? ಇನ್ನೂ ಲೆಕ್ಕವೇ ಗೊತ್ತಿಲ್ಲದ ಹಿಪ್ಯಾಟಿಟಿಸ್-ಬಿ ರೋಗವೆಲ್ಲಿ? ಎಲ್ಲಿಯೋ ನಮ್ಮ ಆದ್ಯತೆ ಅಡ್ಡದಾರಿ ಹಿಡಿದಂತಿದೆಯಲ್ಲವೇ ?

**ಡಾ॥ ಗೋಪಾಲ ದಾಬಡೆ, ಶಾರದಾ ಗೋಪಾಲ**
೫೭, ತೇಜಸ್ವಿ ನಗರ, ಧಾರವಾಡ - ೫೮೦ ೦೦೭



ಕರ್ನಾಟಕದಲ್ಲಿ ಸುಸ್ಥಿರ ಆಂದೋಲನ ಹುಟ್ಟುಹಾಕಲು ತನ್ನದೇ ನಿಲುವು ದೃಷ್ಟಿಕೋನಗಳಿಂದ ಕರ್ನಾಟಕದ ಮೂಲೆಗಳಲ್ಲಿರುವ ಕೃಷಿಕರ ಹೊಸ ಚೈತನ್ಯ ಮೂಡಿಸಲು ಸಫಲವಾಗಿರುವ

**ಸಿರಿ ಸಮೃದ್ಧಿ**

**ಮಾಸಿಕ ಕೃಷಿ ಪತ್ರಿಕೆ**

ಗ್ರಾಮೀಣಾಭಿವೃದ್ಧಿಯಲ್ಲಿ ಅಭೂತಪೂರ್ವ ಪ್ರಯೋಗಗಳನ್ನು ಕೈಗೊಂಡಿರುವ ಬೈಫ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಿಂದ ಪ್ರಕಟಿತ

**'ನಾಡ ಹಸುಗಳಿಂದ ಮಿಶ್ರತಳಿ ಸಂವರ್ಧನೆ'** ಎಂಬ ಪುಸ್ತಕವನ್ನು ಆಜೀವ ಸದಸ್ಯರಿಗೆ ಉಚಿತವಾಗಿ ಕಳುಹಿಸಲಾಗುವುದು

ಚಂದಾ ವಿವರ

| | | | |
|---|---|---|---|
| ವಾರ್ಷಿಕ | ರೂ. ೧೦೦ | ಪಂಚವಾರ್ಷಿಕ | ರೂ. ೪೫೦ |
| ತ್ರೈವಾರ್ಷಿಕ | ರೂ. ೨೭೫ | ಆಜೀವ | ರೂ. ೧೦೦೦ |

*ನಿಮ್ಮ ಚಂದಾ ಹಣವನ್ನು ಡಿ.ಡಿ./ಎಂ.ಓ. ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಿ*

**ಬೈಫ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆ**

ಕಾಮಧೇನು, ಅಂಚೆ ಪೆಟ್ಟಿಗೆ ೩, ಶಾರದಾನಗರ, ತಿಪಟೂರು-೫೭೨ ೨೦೨, ತುಮಕೂರು ಜಿಲ್ಲೆ
ಫೋನ್ : ೦೮೧೩೪- ೨೫೦೬೫೮/೫೯, ೨೫೪೪೨೧ e-mail : baif1@sancharnet.in





# ಮಾಗಡಿ ಕೆರೆಯಲ್ಲಿ ವಿದೇಶಿ ಅತಿಥಿಗಳ ಕಲರವ

**ಗ**ದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಮಾಗಡಿ-ಹೊಳಲಾಪುರ ಕೆರೆ ಈಗ ರಾಜ್ಯದ ಹೆಸರಾಂತ ಪಕ್ಷಿಧಾಮವಾಗಿ ದಿನದಿಂದ ದಿನಕ್ಕೆ ಹೆಸರು ಮಾಡುತ್ತಿದೆ. ಈ ಕೆರೆಗೆ ಕಳೆದ ೭-೮ ವರ್ಷಗಳಿಂದ ವಿದೇಶದಿಂದ ವಿವಿಧ ಜಾತಿಯ ಪಕ್ಷಿಗಳು ಅತಿಥಿಗಳಾಗಿ ಬರುತ್ತಿರುವುದೆ ಇದು ಪ್ರಸಿದ್ಧವಾಗಲು ಕಾರಣ.

ಗದಗದಿಂದ ಬೆಂಗಳೂರಿಗೆ ಹೋಗುವ ರಾಜ್ಯ ಹೆದ್ದಾರಿಯಲ್ಲಿ ಲಕ್ಷ್ಮೇಶ್ವರದಿಂದ ೧೨ ಕಿ.ಮೀ. ಅಂತರದಲ್ಲಿದೆ ಮಾಗಡಿ ಗ್ರಾಮ. ಇಲ್ಲಿನ ಬಸ್ ನಿಲ್ದಾಣದ ಸಮೀಪದಲ್ಲಿದೆ ೧೩೧ ಎಕರೆಯ ಬೃಹತ್ ಕೆರೆ. ಕಳೆದ ೭-೮ ವರ್ಷಗಳಿಂದ ಈ ಕೆರೆಯನ್ನು ಹಲವಾರು ದೇಶಗಳ ವಿವಿಧ ಜಾತಿಯ ಪಕ್ಷಿಗಳು ಅರಸಿ ಬರುತ್ತಿವೆ.

ಕಳೆದ ವರ್ಷ ನೀರಿಲ್ಲದ್ದರಿಂದ ಪಕ್ಕದ ಶೆಟ್ಟಿಕೇರಿ ಕೆರೆಗೆ ಪಲಾಯನ ಮಾಡಿದ್ದ ಈ ವಿದೇಶಿ ಅತಿಥಿಗಳು ಈ ಬಾರಿ ಮತ್ತೆ ಅದೇ ಸಂತಸವನ್ನು ನೋಡುಗರ ಕಣ್ಣು ತುಂಬತೊಡಗಿವೆಯಲ್ಲದೆ ಈ ಬಾರಿ ೮ ಸಾವಿರಕ್ಕೂ ಹೆಚ್ಚು ಪಕ್ಷಿಗಳು ಬಂದಿವೆ. ಈ ಸಂಖ್ಯೆ ಕಳೆದ ೮ ವರ್ಷಗಳಲ್ಲಿಯೇ ಹೆಚ್ಚಿನದು.

ಪಾಕಿಸ್ತಾನ, ಬಾಂಗ್ಲಾದೇಶ, ನೇಪಾಳ, ಸೈಬೇರಿಯಾ, ನ್ಯೂಜಿಲೆಂಡ್, ಲಢಾಕ್, ಟಿಬೆಟ್ ಹಾಗೂ ಆಸ್ಟ್ರೇಲಿಯಾ ಮುಂತಾದ ಕಡೆಗಳಿಂದ ವಿವಿಧ ೨೫ ಕ್ಕೂ ಹೆಚ್ಚು ಜಾತಿಯ ಪಕ್ಷಿಗಳು ಇಲ್ಲಿಗೆ ಆಗಮಿಸಿವೆ.

ಇದರಲ್ಲಿ ಬಾರ್ ಹೆಡೆಡ್ ಗೂಸ್, ಬ್ರಾಹ್ಮಿಣಿ ಡಕ್, ಬ್ಲ್ಯಾಕ್ ಐಬೀಸ್, ಲಿಟಲ್ ಗಿಬ್ಸ್, ಲಿಟಲ್ ರಿಂಗ್ ಪ್ಲೋವರ್, ಸ್ಯಾಂಡ್ ಪೈಪರ್ ಕೋನ್‌ಮನ್, ಪುಡ್ ಸ್ಯಾಂಡ್ ಪೈಪರ್, ಪಾಯಿಂಟೆಡ್ ಸ್ಟಾರ್ಕ್, ರೆಡ್ ವೆಟೆಡ್ ಲಿಪಿಂಗ್, ಗ್ರೇವೆನ್‌ಟೆಲ್, ಯಲ್ಲೋ ವಾಗಿಟೈಯಿಲ್, ಲಿಟಲ್ ಯುನಿಟ್, ಸ್ಟೆಟೆಡ್ ಓವೆಟ್, ರೆಡ್‌ಥ್ರಾಟ್, ಫ್ಲೈಕ್ಯಾಚರ್, ಪ್ಯಾರಡೈಸ್ ಫ್ಲೈ ಕ್ಯಾಚರ್, ಲೋರಂಗಿ, ಪೆಡ್ಡಿ ಪ್ರೇಪಿಟ್ ಬ್ಲಾಕ್, ಡ್ಯಾಂಗೋ, ಲಿಟಲ್ ಗ್ರೀನ್, ಟ್ರೀ ಈಟರ್, ಲೋಮನ್ ಟೇಲ್ ಮುಂತಾದ ಪಕ್ಷಿಗಳು ಇರುವುದನ್ನು ಗುರುತಿಸಲಾಗಿದೆ.

ಇವುಗಳಲ್ಲಿ ಬಾರ್ ಹೆಡೆಡ್ ಗೂಸ್ ಒಂದೇ ೫ ಸಾವಿರಕ್ಕೂ ಹೆಚ್ಚು ಸಂಖ್ಯೆಯಲ್ಲಿದ್ದು ಇನ್ನುಳಿದ ಪಕ್ಷಿಗಳು ಕಡಿಮೆ ಸಂಖ್ಯೆಯಲ್ಲಿದ್ದು ಒಟ್ಟಾರೆಯಾಗಿ ೮ ಸಾವಿರದಷ್ಟು ಪಕ್ಷಿಗಳು ಕೆರೆಯಲ್ಲಿವೆ.

ಸಾಮಾನ್ಯವಾಗಿ ನವೆಂಬರ ತಿಂಗಳ ಕೊನೆಯ ವಾರದಿಂದ ಆಗಮಿಸಲು ಪ್ರಾರಂಭಿಸುವ ಈ ಪಕ್ಷಿಗಳು ಸುಮಾರು ನಾಲ್ಕು ತಿಂಗಳ ಅಂದರೆ ಮಾರ್ಚ್ ಅಂತ್ಯದವರೆಗೆ ಇಲ್ಲೇ ವಾಸವಾಗಿದ್ದು ತಮ್ಮ ಹೊಸ ಸಂತಾನ ವೃದ್ಧಿಸಿಕೊಂಡು ತಮ್ಮ ಮೂಲ ವಾಸ ಸ್ಥಾನಗಳಿಗೆ ಮರಳುತ್ತವೆ.

ಹಿಂಡುಹಿಂಡಾಗಿ ಕೆರೆಯ ತುಂಬ ಕುಳಿತ ಈ ಪಕ್ಷಿಗಳ ದೃಶ್ಯ ನಯನ ಮನೋಹರ. ಈ ಪಕ್ಷಿಗಳು ಹೊರಡಿಸುವ ಸದ್ದು ಕಿವಿಗೆ ಇಂಪು. ಅಲ್ಲದೆ ನೀರಲ್ಲಿ ಹಾರಾಡುವ, ತೇಲುತ್ತ ಸಾಗುವ ಪಕ್ಷಿಗಳ ಸಾಲುಸಾಲುಗಳನ್ನು ನೋಡುವುದೇ ಒಂದು ಸೊಗಸು.

ಈ ಪಕ್ಷಿಗಳ ಚಟುವಟಿಕೆಗಳ ಮನೋಹರ ದೃಶ್ಯ ನೋಡಲು ಜನರು ದೂರ ದೂರದಿಂದ ಬರುವುದರೊಂದಿಗೆ, ಶಾಲಾ ವಿದ್ಯಾರ್ಥಿ ವೃಂದಗಳು ಪಿಕ್‌ನಿಕ್‌ಗಾಗಿ ಈ ಕೆರೆಗೆ ಬರತೊಡಗಿದ್ದಾರೆ. ಆದರೆ ಇಲ್ಲಿ ಹೇಳಿಕೊಳ್ಳುವಂತಹ ಸೌಕರ್ಯಗಳಿಲ್ಲ. ಈ ವರ್ಷ ನೋಡುಗರಿಗಾಗಿ ಪ್ರೇಕ್ಷಕರ ಗ್ಯಾಲರಿ, ಬೈನಾಕುಲರ್ ವ್ಯವಸ್ಥೆ ಮಾಡಲಾಗಿದ್ದು, ರಸ್ತೆ ನಿರ್ಮಾಣ ನಡೆದಿದ್ದು, ಶೌಚಾಲಯ ಹಾಗೂ ಪಕ್ಷಿಗಳ ಕುರಿತ ಪುಸ್ತಕಗಳು ಬರಲಿವೆ.

ಮತ್ತು ಸ್ವಜಲಧಾರಾ ಯೋಜನೆಯಲ್ಲಿ ೨೦ ಲಕ್ಷ ಮಂಜೂರಾಗಿದ್ದು ಹಣ ಬರಬೇಕಾಗಿದೆ. ಇದರಲ್ಲಿ ಕೆರೆಗೆ ಹೋಗುವ ರಸ್ತೆ ಅಕ್ಕಪಕ್ಕಕ್ಕಿರುವ ತಿಪ್ಪೆಗಳನ್ನು ತೆರವುಗೊಳಿಸಿ ಗಿಡಗಳನ್ನು ನೆಡುವ ಮೂಲಕ ಸುಂದರಗೊಳಿಸಬೇಕಾಗಿದೆ. ಅಲ್ಲದೆ ಪಕ್ಷಿಗಳನ್ನು ವೀಕ್ಷಿಸಲು ಬರುವವರಿಗಾಗಿ ಹಲವಾರು ವ್ಯವಸ್ಥೆಗಳನ್ನು ಕೈಗೊಳ್ಳಬೇಕಾಗಿದೆ.

ಆದರೆ ಈ ಕೆರೆಯ ಸುತ್ತ-ಮುತ್ತ ಬೇನಾಮಿ ಕ್ರೆಸರ್‌ಗಳಿದ್ದು ಅಲ್ಲಿ ಮದ್ದುಗಳನ್ನಿಟ್ಟು ಕಲ್ಲುಗಳನ್ನು ಸಿಡಿಸುವ ಸಪ್ಪಳದಿಂದ ಪಕ್ಷಿಗಳು ಹೆದರುತ್ತಿದ್ದು ಇದಕ್ಕೆ ಸಂಬಂಧಪಟ್ಟ ಭೂಗರ್ಭ ಖನಿಜ ಇಲಾಖೆ ಹಾಗೂ ಜಿಲ್ಲಾ ಆಡಳಿತ ಗಮನಹರಿಸಿ ವಿದೇಶದಿಂದ ಬಂದ ಪಕ್ಷಿಗಳಿಗೆ ಉಪದ್ರವ ನೀಡದೆ ಅತಿಥಿ ಸತ್ಕಾರಕ್ಕೆ ಹೆಸರಾಗಿರುವ ನಾವು ಆ ಹೆಸರನ್ನು ಉಳಿಸಿಕೊಳ್ಳಬೇಕಾಗಿದೆ.

ಎಂ. ಮಂಜುನಾಥ ಬಮ್ಮನಕಟ್ಟಿ
ಪತ್ರಕರ್ತ, ಲಕ್ಷ್ಮೇಶ್ವರ - ೫೮೨೧೧೬

# ನೀರು ಬ್ರಹ್ಮಾಂಡ ಮತ್ತು ರೇಣುಕಾಳ ಕಣ್ಣು

ಬಂದಗದ್ದೆ ರಾಧಾಕೃಷ್ಣ

**ನೀರಿನ ಬಗ್ಗೆ ಪಾಠ ಮಾಡುತ್ತ ಅದು ಬ್ರಹ್ಮಾಂಡಕ್ಕೆ ಹೋಗುವುದು, ಜನ್ಮಾಂತರಕ್ಕೆ ಹೋಗುವುದು, ಪಂಚಭೂತಗಳಲ್ಲಿ ಯಾವುದರ ಬಗ್ಗೆ ಮಾತಾಡಲು ತೊಡಗಿದರೂ ಅದು ವಿಶ್ವಕ್ಕೇ ಹೋಗಿ ನಿಲ್ಲುವುದು! ಅಂದಾಗ ರೇಣುಕಾಳ ಮುಖದಲ್ಲಿ ಪ್ರಶ್ನೆಗಳಿದ್ದರೂ ಅವಳು ವಿಷಯದಲ್ಲಿ ಕರಗುತ್ತ ಹೊಸದೊಂದು ವಿಚಾರ ಲೋಕಕ್ಕೆ ಪ್ರವೇಶ ಪಡೆಯುತ್ತಿದ್ದಳೆಂದು ಅವಳ ಕಣ್ಣುಗಳು ಹೇಳುತ್ತಿದ್ದವು.**

ಮೆಟ್ಟ ಕೊಪ್ಪದಲ್ಲಿರುವ (ಕಲಘಟಗಿ ತಾಲೂಕು, ಹುಬ್ಬಳ್ಳಿ ಹತ್ತಿರ) ಎ.ಎಲ್.ಆರ್.ಡಿ. ಕಾಲೇಜಿನಲ್ಲಿ ನೀರಿನ ಬಗ್ಗೆ ಪಾಠ ಮಾಡುತ್ತಿದ್ದೆ. ಭೂಮಿಗೆ ಜೀವವಿದೆಯೇ ಎಂಬ ಪ್ರಶ್ನೆ ಎದುರಾಯಿತು. ಭೂಮಿ ಚಲನೆಯಲ್ಲಿದೆಯಲ್ಲವೇ? ಅಲ್ಲದೆ, ಭೂಮಿಯಲ್ಲಿ ಗಿಡಮರಗಳು ಬೆಳೆಯುತ್ತಿವೆ, ಜೀವವಿದೆ ಎಂದು ಗುರುತಿಸಬೇಕಾದರೆ ಇರುವ ಲಕ್ಷಣಗಳೆಲ್ಲವೂ ಭೂಮಿಗಿದೆ, ಆದ್ದರಿಂದ ಭೂಮಿಗೆ ಜೀವವಿದೆ ಎಂದು ಎಲ್ಲರೂ ಒಪ್ಪಿದರು. ಮುಂದಿನ ಪ್ರಶ್ನೆ ಕಲ್ಲಿಗೆ ಜೀವವಿದೆಯೇ? ಇಲ್ಲ, ಕಲ್ಲು ಜಡವಸ್ತು, ಅಂದಳು ರೇಣುಕಾ. ಜೀವವಿರುವ ಭೂಮಿಯೊಳಗೇ ಕಲ್ಲಿದೆ. ಅಂದರೆ ಕಲ್ಲಿಗೂ ಜೀವವಿದೆ ಎಂಬುದು ನನ್ನ ವಾದ. ಕಲ್ಲು ಜಡವಸ್ತು ಎಂದು ಪಾಠದಲ್ಲಿತ್ತು ಎಂಬುದು ರೇಣುಕಾಳ ವಾದ.

ಭೂಮಿಗೆ ಜೀವವಿದೆ. ಭೂಮಿಯಲ್ಲಿ ಕಲ್ಲು ಮಣ್ಣಿದೆ. ಮಣ್ಣಲ್ಲಿ ಜೀವವಿದೆ. ಕಲ್ಲಿಗೆ ಜೀವವಿಲ್ಲ ಎಂದು ಹೇಗೆ ಹೇಳುವೆ ಎಂದು ಪ್ರಶ್ನಿಸಿದಾಗ ರೇಣುಕಾ ತಬ್ಬಿಬ್ಬಾದಳು. ಮಣ್ಣಿನೊಂದಿಗೆ ಇದ್ದಾಗ ಕಲ್ಲಿಗೆ ಜೀವವಿದೆ. ಆದರೆ ಭೂಮಿಯಿಂದ ಮೇಲೆತ್ತಿದಾಗ ಕಲ್ಲಿಗೆ ಜೀವವಿಲ್ಲ ಅಂದಳು. ಅರೇ! ಇದೇಕೆ ಹೀಗೆ ಹೇಳುತ್ತಿರುವೆ? ಹ್ಯಾಂಗಿಂಗ್ ಪಾಟ್ ತೆಗೆದುಕೋ. ಕಲ್ಲು ಮಣ್ಣುಗಳನ್ನು ತುಂಬಿ ಬೀಜ ಹಾಕು. ಬೀಜ ಮೊಳೆಯುವುದಿಲ್ಲವೇ? – ಕೇಳಿದಾಗ ನಿಧಾನ ಅವಳು ಪಾಠದಲ್ಲಿ ಕಲಿತದಕ್ಕಿಂತ ಈ ವಿಚಾರ ಭಿನ್ನವಾಗಿದೆ ಎಂದು ಅರಿಯುತ್ತಿದ್ದಳು. ಅವಳು ಒಳಗೆ ಕರಗುತ್ತಿರುವುದು ಅನುಭವಕ್ಕೆ ಬರುತ್ತಿತ್ತು. ನಾವು ಮೆಟ್ಟಿ ನಿಂತ ನೆಲವಷ್ಟೇ ಭೂಮಿ ಎಂಬುದು ನಿನ್ನರ್ಥವೇ ಎಂದು ಕೇಳಿದೆ. ಈ ಪ್ರಶ್ನೆಯೇ ಅರ್ಥವಾಗದೇ ಹೋದದ್ದು ಅವಳ ಕಣ್ಣುಗಳಿಂದ ತಿಳಿಯುತ್ತಿತ್ತು. ಮುಂದುವರೆಸಿದೆ.

ನಾವು ಭೂಮಿಯನ್ನು ಹೇಗೆ ಅರ್ಥಮಾಡಿಕೊಳ್ಳಬೇಕು? ಈ ಭೂಮಿ ಹೇಗಿದೆ? ಮೂರನೇ ಎರಡು ಭಾಗ ಉಪ್ಪು ನೀರಿನಿಂದ ಆವೃತವಾದ ಈ ಭೂಮಿ ದುಂಡಗಿದೆ. ಇದು ದುಂಡಗಿದೆ ಎಂದು ತಿಳಿದಿದ್ದಾದರೂ ಹೇಗೆ? ಸಮುದ್ರದಲ್ಲಿ ಹಡಗು ಬರುತ್ತಿದ್ದರೆ ಮೊದಲು ಹೊಗೆ ಕೊಳವೆ ಕಾಣುವುದಂತೆ. ನಂತರ ಮೇಲ್ಭಾಗದಿಂದ ಹಡಗು ಕಾಣುವುದು. ಒಂದು ದಿಕ್ಕನ್ನು ಅರಸಿ ವಿಮಾನದಲ್ಲಿ ಹೊರಟರೆ ಪುನಃ ಅದೇ ಸ್ಥಳಕ್ಕೆ ತಲುಪುವೆವು. ನಮ್ಮ ಸುತ್ತಲೂ ಇರುವ ಸೂರ್ಯ, ಚಂದ್ರ ಮುಂತಾದ ಗ್ರಹ, ನಕ್ಷತ್ರಾದಿಗಳೆಲ್ಲವೂ ದುಂಡಾಗಿಯೇ ಇವೆ. ಹೀಗಾಗಿ ಭೂಮಿಯೂ ದುಂಡಾಗಿಯೇ ಇದೆ ಮುಂತಾದ ಕಾರಣ ನೀಡಲಾಗುವುದು. ಚಂದ್ರಗ್ರಹಣ ಹಿಡಿಯುವಾಗ ಭೂಮಿಯ ನೆರಳೇ ತಾನೇ ಚಂದ್ರನ ಮೇಲೆ ಬೀಳುವುದು? ಆ ನೆರಳೂ ದುಂಡಾಕೃತಿಯಲ್ಲಿಯೇ ಕಾಣುವುದಿಲ್ಲವೇ? ಕೃಷ್ಣ ಬಾಯಲ್ಲೇ ಬ್ರಹ್ಮಾಂಡ ತೋರಿದ ಕಥೆ ಉಂಟಲ್ಲ? ಅವನು ತೋರಿದ ಬ್ರಹ್ಮಾಂಡವೂ ದುಂಡಾಗಿಯೇ ಇತ್ತಲ್ಲವೇ? ಇವು ಹಳೆಯ ಕಾಲದ ಉದಾಹರಣೆಗಳು. ಈಗ ಉಪಗ್ರಹಗಳು ಕಳಿಸುತ್ತಿರುವ ಚಿತ್ರಗಳೂ ದುಂಡಾಗಿಯೇ ಇವೆ. ಸತ್ಯ ಯಾವ ಕಾಲಕ್ಕೂ ಒಂದೇ ಅಲ್ಲವೇ?

ಭೂಮಿ ಅಂದರೆ ಕಲ್ಲು, ಮಣ್ಣು. ಈ ಮಣ್ಣು ಸೂಕ್ಷ್ಮಾಣು ಜೀವಿಗಳಿಂದ ಫಲವತ್ತಾಗಿದೆ. ಒಂದು ಗ್ರಾಂ ಮಣ್ಣಿನಲ್ಲಿ ೨ ಕೋಟಿ ೮೦ ಲಕ್ಷ ಸೂಕ್ಷ್ಮಾಣು ಜೀವಿಗಳಿರಬಹುದು ಎಂದು ಕೃಷಿ ತಜ್ಞ ನಾರಾಯಣರೆಡ್ಡಿ ಹೇಳುತ್ತಾರೆ. ಕೆಲವು ಸೂಕ್ಷ್ಮ ಜೀವಿಗಳು, ಕೆಲವು ಗಂಟೆಗಳಲ್ಲಿ, ಕೆಲವು ೨ ದಿನಗಳಲ್ಲಿ ತಮ್ಮ ಜೀವನ ಚಕ್ರ ಮುಗಿಸಿ ಮಣ್ಣಲ್ಲಿ ಬೆರೆಯುತ್ತವೆ. ಇನ್ನು ಕೆಲವು ೨-೩ ವಾರ ಇದಕ್ಕಿಂತ ಜಾಸ್ತಿ ದಿನ ಇರಲ್ಲ ಅನ್ನುತ್ತಾರೆ. ಹೀಗೆ ನಮ್ಮ ಕಣ್ಣಿಗೆ ಕಾಣುವುದು ಕಲ್ಲು ಮಣ್ಣಾದರೂ ಅದು ಜೀವಕೋಟಿಗಳ ತಾಣ! ಈ ಮಣ್ಣಿನ ಜೊತೆ ನೀರಿದೆ. ಬೆಂಕಿಯಿದೆ. ಗಾಳಿಯಿದೆ. ಈ ಎಲ್ಲವೂ ಆಕಾಶದಲ್ಲಿದೆ. ಭೂಮಿಯಿಂದ ಕಲ್ಲೆತ್ತಿದರೂ ಅದಕ್ಕೆ ಜೀವವಿದೆ ಏಕೆ? ನಾವು ತಿಳಿದಂತೆ ಭೂಮಿ ಅಂದರೆ ನಾವು ಮೆಟ್ಟಿದ ನೆಲವಷ್ಟೇ ಅಲ್ಲ. ಈ ನೆಲದ ಸುತ್ತಲೂ ವಾಯುಮಂಡಲವಿದೆಯಲ್ಲವೇ? ವಾಯುಮಂಡಲ ಎಲ್ಲಿಯವರೆಗಿದೆಯೋ ಅದೆಲ್ಲವೂ ಸೇರಿ ಭೂಮಿ. ಯಾವ ವಸ್ತು ನಮ್ಮ ವಾಯುಮಂಡಲ ಪ್ರವೇಶ ಮಾಡುವುದೋ ಆಗ ಗುರುತ್ವಾಕರ್ಷಣೆಗೆ ಒಳಗಾಗಿ ಭೂಮಿಯತ್ತ ಬರುವುದು. ಅಂದರೆ ನಾವು ಕೈ ಆಡಿಸುವ ಈ ಗಾಳಿಯಲ್ಲಿ ಒಂದು ಶಕ್ತಿಯಿದೆ. ಕಣ್ಣಿಗೆ ಕಾಣದು! ಕೈಗೆ ಸಿಗದು! ದೇವರಂತೆ! ಇಲ್ಲಿಗೆ ಈ ಭೂಮಿಯ ಕತೆ ಮುಗಿಯಿತೇ?



ವಾಯುಮಂಡಲವನ್ನೊಳಗೊಂಡ ಭೂಮಿ ತನಗೆ ತಾನು ತಿರುಗುತ್ತ ಸೂರ್ಯನ ಸುತ್ತ ತಿರುಗುತ್ತಿದೆ. ಆಕಾಶ (ವಿಶ್ವ)ದಲ್ಲಿ ಈ ನೆಲ ಹೇಗೆ ತಿರುಗುತ್ತೋ? ಯಾವ ಆಕರ್ಷಣೆಯೋ? ಯಾವ ಶಕ್ತಿಯೋ?

ಚಳಿಗಾಲದ ರಾತ್ರಿಗಳಲ್ಲಿ ಪೂರ್ವ ಪಶ್ಚಿಮವಾಗಿ ಆಕಾಶದಲ್ಲಿ ಒಂದು ಬೆಳಕಿನ ಗೆರೆ ಕಾಣುತ್ತೆ. ಇದನ್ನು ಹಾಲು ಹಾದಿ ಎಂದು ಕರೆಯುವರು. ಈ ಹಾಲು ಹಾದಿಯಲ್ಲೇ ನಮ್ಮ ನೆಲವೂ ಉಂಟು. ಹಾಲು ಹಾದಿ ಸುರಳಿಯ ಆಕಾರದಲ್ಲಿದೆ ಎಂದು ಸ್ಟೀಫನ್ ಹಾಕಿಂಗ್ ತಾನು ಬರೆದ ಬ್ರೀಫ್ ಹಿಸ್ಟರಿ ಆಫ್ ಟೈಂ ಪುಸ್ತಕದಲ್ಲಿ ತಿಳಿಸುವನು. ಒಟ್ಟೂ ಈ ಹಾಲು ಹಾದಿಯೇ ಒಂದು ವಿಶ್ವವೇ? ಸುರಳಿಯ ಆಕಾರ ಈಗ ಹಿಗ್ಗುತ್ತಿದೆ ಅನ್ನುತ್ತಾನೆ. ಯಾವುದು ಹಿಗ್ಗುವುದೋ ಅದು ಕುಗ್ಗುವುದೂ ನಿಶ್ಚಿತ ಎಂದೂ ತಿಳಿಸುವನು. ನಮ್ಮ ಗೀತೆಯಲ್ಲಿ, ಯಾವುದು ಹುಟ್ಟುವುದೋ ಅದು ಸಾಯುತ್ತದೆ. ಯಾವುದು ಸಾಯುವುದೋ ಅದು ಹುಟ್ಟುವುದು ಅಂದಂತೆ! ಅಲ್ಲದೆ ಈ ಆಕಾಶದಲ್ಲಿ ಇಂಥ ಎಷ್ಟೋ ವಿಶ್ವಗಳಿವೆ ಅನ್ನುತ್ತಾನೆ! ವಿಶ್ವ ಎಂಬುದಕ್ಕೆ ಎಲ್ಲೆ ಎಲ್ಲಿದೆ? ಅಂತ್ಯ ಇಲ್ಲದಿರುವುದಕ್ಕೆ ಅನಂತ ಅನ್ನುವುದಿಲ್ಲವೇ? ಭೂಮಿಗೆ ಮೇಲ್ಮುಖನಾಗಿ ಹೊರಟರೆ ಅಂತ್ಯವೇ ಇಲ್ಲ! ಕೋಟಿ ಕೋಟಿ ವರ್ಷಗಳಾದರೂ ಹೋಗುತ್ತಲೇ ಇರಬಹುದೆಂದರೆ... ಈ ಅನಂತದಲ್ಲಿ ಭೂಮಿ ಒಂದು ಸಣ್ಣ ಮಣ್ಣಿನ ಹನಿಯಂತೆ ಕಂಡೀತು! ಆದರೆ ಭೂಮಿಯಲ್ಲಿರುವ ನಮಗೆ ಈ ಭೂಮಿ ಎಷ್ಟು ವಿಶಾಲವಾಗಿ ಕಾಣುತ್ತಿದೆ. ಇದು ದುಂಡಾಗಿದೆ ಎಂದು ಕಲ್ಪಿಸಿಕೊಳ್ಳಲಿಕ್ಕೇ ಆಗದು. ಇಲ್ಲಿ ಒಂದೆರಡು ಅಡಿಗಳಿಗಾಗಿ, ನಾವೆಲ್ಲಾ ಒಂದು ಎಂಬುದನ್ನೂ ಮರೆತು ಜಗಳ ಆಡುತ್ತಿದ್ದೇವಲ್ಲವೇ? – ಹೀಗೆ ಈ ವಿಚಾರವೂ ಅನಂತ. ಈಗ ವಿಷಯಕ್ಕೆ ಬರೋಣ.

ನಾನಂದು ನೀರಿನ ಬಗ್ಗೆ ಪಾಠ ಮಾಡುತ್ತಿದ್ದೆ. ಭೂಮಿಯಲ್ಲಿ ಒಂದು ಹನಿ ನೀರು ಹೆಚ್ಚೂ ಆಗದು. ಕಡಿಮೆಯೂ ಆಗದು. ಸಮುದ್ರದಿಂದ ನೀರು ಆವಿಯಾಗಬೇಕು. ಮೋಡವಾಗಬೇಕು. ಗಾಳಿಗೆ ತೇಲಿ ಮಳೆ ಹನಿಯಾಗಿ ಭೂಮಿ ಸೇರಬೇಕು. ಇಲ್ಲಿ ನೀರಿಂಗಿ ನದಿಯಾಗಿ ಪುನಃ ಕಡಲು ಸೇರಬೇಕು. ಮತ್ತೆ ಆವಿ... ಮಳೆ... ನದಿ... ಕಡಲು... ಈ ಚಕ್ರ ಕೋಟ್ಯಂತರ ವರ್ಷಗಳಿಂದ ನಡೆದುಕೊಂಡುಬಂದಿದೆ. ವಾಯುಮಂಡಲ ದೊಳಗೆ ನೀರು ಬೇರೆ ಬೇರೆ ರೂಪ ತಾಳಬಹುದೇ ಹೊರತು ಒಂದು ಹನಿಯೂ ಹೆಚ್ಚಾಗದು. ಕಡಿಮೆಯಾಗದು. ಗಾಳಿ – ಹೆಚ್ಚಾಗದು ಕಡಿಮೆಯಾಗದು. ಮಣ್ಣು – ಒಂದು ಕಣದಷ್ಟು ಹೆಚ್ಚಾಗದು. ಕಡಿಮೆಯಾಗದು. ಪ್ರಕೃತಿಯ ವಿಚಿತ್ರ ಹೀಗಿರುವಾಗ ಈ ಭೂಮಂಡಲದಲ್ಲಿರುವ ಜೀವಗಳೂ ಹೆಚ್ಚಾಗದು. ಕಡಿಮೆಯೂ ಆಗದು.

ನೀರಿನ ಬಗ್ಗೆ ಪಾಠ ಮಾಡುತ್ತ ಅದು ಬ್ರಹ್ಮಾಂಡಕ್ಕೆ ಹೋಗುವುದು, ಜನ್ಮಾಂತರಕ್ಕೆ ಹೋಗುವುದು, ಪಂಚಭೂತಗಳಲ್ಲಿ ಯಾವುದರ ಬಗ್ಗೆ ಮಾತಾಡಲು ತೊಡಗಿದರೂ ಅದು ವಿಶ್ವಕ್ಕೇ ಹೋಗಿ ನಿಲ್ಲುವುದು! ಅಂದಾಗ ರೇಣುಕಾಳ ಮುಖದಲ್ಲಿ ಪ್ರಶ್ನೆಗಳಿದ್ದರೂ ಅವಳು ವಿಷಯದಲ್ಲಿ ಕರಗುತ್ತ ಹೊಸದೊಂದು ವಿಚಾರ ಲೋಕಕ್ಕೆ ಪ್ರವೇಶ ಪಡೆಯುತ್ತಿದ್ದಳೆಂದು ಅವಳ ಕಣ್ಣುಗಳು ಹೇಳುತ್ತಿದ್ದವು.

ತಾಯಿಯ ಗರ್ಭದಿಂದ ಈ ನೆಲಕ್ಕೆ ಜಾರುತ್ತಿದ್ದಂತೆ ಹೃದಯಕ್ಕೆ ಗಾಳಿಯ ಪ್ರವೇಶ ವಾಗುವುದು. ಅದರಿಂದಲೇ ದೇಹ ಬೆಳೆಯುತ್ತ ಹೋಗುವುದು. ನಾವು ತಿನ್ನುವ ಎಲ್ಲಾ ಆಹಾರವೂ ಮಣ್ಣು! ಅಷ್ಟೇ ಅಲ್ಲ, ನಮ್ಮ ಈ ದೇಹವೂ ಮಣ್ಣಿನಿಂದಲೇ ಆದದ್ದು! ಹುಚ್ಚು ವಿಚಾರ ಅನಿಸಬಹುದಲ್ಲವೇ? ಮಣ್ಣಿನಿಂದ ಆದದ್ದು ಮಣ್ಣಿಗೆ ಸೇರಬೇಕು. ಮಣ್ಣು ಅಂದರೆ ಕೇವಲ ನಮ್ಮ ಹಿಡಿಗೆ ಸಿಗುವುದಷ್ಟೇ ಅಲ್ಲ. ಪಂಚಭೂತಗಳು ಸೇರಿ ಮಣ್ಣು. ಇದು ಒಂದನ್ನು ಬಿಟ್ಟು ಮತ್ತೊಂದಿಲ್ಲ. ನಾವು ಪಂಚಭೂತಗಳಿಂದ ಆದೆವು. ಪಂಚಭೂತಗಳಲ್ಲಿ ಲೀನವಾಗುವೆವು. ಈ ಮಧ್ಯದ್ದು ಅದ್ಭುತ ಅವಧಿ. ಬದುಕು. ಓಹ್! ಎಷ್ಟೊಂದು ನಿಗೂಢ ರಹಸ್ಯಗಳನ್ನು ತನ್ನೊಳಗೆ ಇಟ್ಟುಕೊಂಡಿದೆ ಈ ಬದುಕು! ಈ ಭೂಮಿ ಅದೆಷ್ಟು ರೀತಿಯ ಲೋಹಗಳನ್ನು, ಕಲ್ಲು ಹರಳು ಮಣಿಗಳನ್ನು, ಸಸ್ಯ, ಪ್ರಾಣಿ, ಕ್ರಿಮಿ ಕೀಟಗಳನ್ನು ತನ್ನೊಳಗೆ ಅಡಗಿಸಿಕೊಂಡಿದೆ? ಇದರೊಳಗೆಲ್ಲ ಮನುಷ್ಯ ಪ್ರಾಣಿಗೆ ಬುದ್ಧಿ-ಅರಿವಿದೆ. ಇದೇ ಅರಿವು ನಮ್ಮ ವಿಕಾಸಕ್ಕೂ, ವಿನಾಶಕ್ಕೂ ಕಾರಣವಾಗಿದೆ. ರಾಜ್ಯ, ಕೋಶ, ಸೈನ್ಯ, ಸಾವು, ಹುಟ್ಟು, ಹಿಂಸೆ, ಅಹಿಂಸೆ, ಧರ್ಮ, ಅಧರ್ಮ, ಪಾಪ, ಪುಣ್ಯ, ಶಾಂತಿ ಅಶಾಂತಿ – ಓ ದೇವರೇ! ಬಗೆಹರಿಯದ ಎಷ್ಟೊಂದು ವಿಷಯಗಳು. ಗೊಂದಲಗಳೇ, ದ್ವಂದ್ವಗಳೇ, ಎಲ್ಲದಕ್ಕೂ ಇಲ್ಲಿದೆ ಬನ್ನಿ ಉತ್ತರ. ಗೀತೆಯನ್ನು ಹೇಳುತ್ತೇನೆ. ಕೇಳು. ಯೋಗಿಯಾಗು. ಬದುಕು ಎಂದು ಕೃಷ್ಣ ಹೇಳಿದಂತೆ ಅನಿಸುತ್ತಿದೆ. ಆದರೆ ಯುದ್ಧ ಮಾಡೆಂದು ಅರ್ಜುನನಿಗೆ ಕೃಷ್ಣ ಏಕೆ ಹೇಳುತ್ತಿರುವನು? ಹೀಗೆ ಹೇಳುವುದು ಸರಿಯೇ?

ನಾವೀಗ ಯುದ್ಧದ ಭೀತಿಯಲ್ಲಿದ್ದೇವೆ. ಈ ಭೂಮಿ ಯುದ್ಧದಿಂದ ಮುಕ್ತವಾಗಿಲ್ಲ. ಇತಿಹಾಸ ಗಮನಿಸಿ. ಭೂಮಿಯ ಯಾವುದಾದರೂ ಭಾಗದಲ್ಲಿ ಯುದ್ಧ ನಡೆಯುತ್ತಲೇ ಇರುತ್ತದೆ. ಕಳೆದ ಐದಾರು ವರ್ಷಗಳಿಂದ ಯುದ್ಧಗಳು ಹೆಚ್ಚಾಗಿವೆ. ಇರಾಕ್ x ಇರಾನ್, ಭಾರತ x ಪಾಕಿಸ್ತಾನ, ಅಮೆರಿಕ x ಅಫ್ಘಾನಿಸ್ತಾನ, ಅಮೆರಿಕ x ಇರಾಕ್ – ಹೀಗೆ ರಾಷ್ಟ್ರ ರಾಷ್ಟ್ರಗಳು ಯುದ್ಧ ಮಾಡುತ್ತಿವೆ. ನಮ್ಮ ದೇಶದಲ್ಲಂತೂ ಭಯೋತ್ಪಾದಕರು ನಾಗರಿಕರನ್ನು ಕೊಲ್ಲುತ್ತಲೇ ಇದ್ದಾರೆ. ಇದೂ ಒಂದು ರೀತಿಯ ಯುದ್ಧ ತಾನೇ? ಹಾಗಾದರೆ ರಾಷ್ಟ್ರವೊಂದರ ಆಡಳಿತ ವರ್ಗಕ್ಕೆ ಬುದ್ಧಿ ಇಲ್ಲವೇ? ಪ್ರಜೆಗಳ ರಕ್ಷಣೆ ಎಲ್ಲಾ ರಾಷ್ಟ್ರಗಳ ಅಂತಿಮ ಗುರಿ. ಆದರೆ ಯುದ್ಧ ಮಾಡುತ್ತಿವೆ. ಯುದ್ಧದಿಂದ ಪ್ರಜೆಗಳ ಸಾವಾಗುತ್ತದೆ. ನಷ್ಟವಾಗುತ್ತದೆ. ತಮಾಷೆಯೆಂದರೆ ಯುದ್ಧ ಮಾಡುವುದರ ಅಂತಿಮ ಗುರಿ ಪ್ರಜೆಗಳ ರಕ್ಷಣೆ!

ಯುದ್ಧದ ನಂತರವೇ ಶಾಂತಿ ನೆಲಸುತ್ತದೆ. ಶಾಂತಿ ಇದ್ದಾಗ ಅಶಾಂತಿ ಉಂಟಾಗುತ್ತದೆ. ಪುನಃ ಶಾಂತಿ ನೆಲಸಲು ಯುದ್ಧವೇ ಆಗಬೇಕಾಗುತ್ತದೆ ಎಂದು ಹೇಳುವುದುಂಟು. ಕಾಲಚಕ್ರ ತಿರುಗಿದಂತೆ ಯುದ್ಧ ಶಾಂತಿ ಅಶಾಂತಿಗಳದ್ದೂ ಒಂದು ಚಕ್ರವೇ? ಯುದ್ಧ ಮಾಡು ಎಂದು ಅರ್ಜುನನಿಗೆ ಕೃಷ್ಣ ಹೇಳುವಾಗ ಹುಟ್ಟು, ಸಾವುಗಳು, ಶಾಂತಿ, ಯುದ್ಧ, ಕರ್ಮ, ಅಕರ್ಮ, ವಿಶ್ವರೂಪದರ್ಶನದ ಮೂಲಕ ಬ್ರಹ್ಮಾಂಡ ಮುಂತಾದ ರಹಸ್ಯಗಳನ್ನು ತಿಳಿಸುತ್ತಿರುವನೇ?

ಕಲ್ಲಿಗೆ ಜೀವವಿದೆ ಅಂದಾಗ ರೇಣುಕಾ ಕಣ್ಣರಳಿಸಿ ಬೆರಗಾಗಿದ್ದು ನೆನಪಾಗುತ್ತದೆ. ಈ ಭೂಮಿಯ ಮೇಲಿನ ಎಲ್ಲ ವಸ್ತುಗಳಿಗೂ ಜೀವವಿದೆ. ನಮ್ಮ ವಿಜ್ಞಾನಿ ಜಗದೀಶ್ ಚಂದ್ರ ಬೋಸ್ ಅವರು ತಗಡು ಬಡಿದು ತೋರಿಸಿದ್ದಾರೆ. ತಗಡನ್ನು ಬಡಿಯುತ್ತ ಹೋದಂತೆ ಅದಕ್ಕೆ ಸುಸ್ತಾಗುವುದಂತೆ! ವಿಶ್ರಾಂತಿಯಿಂದ ಅದರ ಸುಸ್ತು ತಣಿದು ಪುನಃ ಸರಿಯಾಗಿ ಶಬ್ದ ನೀಡಲು ತಯಾರಾಗುವುದಂತೆ. ಈ ವಿಷಯ ಹೇಳಿದಾಗ ರೇಣುಕಾ ಇನ್ನೂ ಬೆರಗಾಗಿದ್ದಳು. ನೀರಿನ ಬಗ್ಗೆ ಪ್ರಾರಂಭವಾದ ಪಾಠ ಜಡ, ಜೀವನ, ಭೂ ಮಂಡಲ, ಬ್ರಹ್ಮಾಂಡದ ಕಡೆ ತಿರುಗಿದೆ. ಹೀಗೆ ತಿರುಗಿದ್ದು ಅನಿರೀಕ್ಷಿತವಲ್ಲ. ಈ ಲೇಖನವನ್ನು ಮುಗಿಸುವ ವೇಳೆಯಲ್ಲಿ ಬದುಕಿನಲ್ಲಿ ಕಣ್ಣು ಬಿಡಬೇಕಾದ ರೇಣುಕಾಳ ಮುಗ್ಧ ಕಣ್ಣುಗಳು ಪುನಃ ನೆನಪಾಗುತ್ತಿವೆ. ಈ ಭೂಮಿಯ ಬಗ್ಗೆ ಬೆರಗು ತುಂಬಿದ ಕಣ್ಣುಗಳು. ಅವಳಿಗೆ ಬದುಕು ಅರ್ಥವಾಗಲಿ.

ಬಂದಗದ್ದೆ ರಾಧಾಕೃಷ್ಣ
ಕೆಳದಿ - ೫೭೭ ೪೦೧, ಸಾಗರ-ಶಿವಮೊಗ್ಗ

ಜಿ. ಆರ್. ಪರಿಮಳಾ ರಾವ್ ಅವರ ಮೂರು ಕಾವ್ಯ ಕೃತಿಗಳು



ಪುಟ : ೪೦ ರೂ. ೨೫
ಹೈಕುಗಳು




ಪುಟ : ೪೮ ರೂ. ೨೫
ಹನಿಗವನಗಳು



ಪುಟ : ೬೨ ರೂ. ೨೦
ಹೈಕುಗಳು

ಸ್ಥಳೀಯ ಪುಸ್ತಕದಂಗಡಿಯಲ್ಲಿ ವಿಚಾರಿಸಿ ಇಲ್ಲವೇ ಅಂಚೆ ವೆಚ್ಚ
ರೂ. ೨೦ ಸೇರಿಸಿ ನಮಗೆ ಎಂ.ಓ/ಡಿ.ಡಿ. ಕಳಿಸಿ

ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್
೧೧, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ : ೫೧೯೫, ಬೆಂಗಳೂರು-೧
ದೂರವಾಣಿ : ೨೨೨೦೩೫೮೦/೮೧/೮೨ e-mail : nkp@bgl.vsnl.net.in
website : www.navakarnatakabooks.com

ಶಾಖೆಗಳು
ಬೆಂಗಳೂರು-9 ✆ 22251382 ❏ ಮಂಗಳೂರು-1 ✆ 2441016
ಮೈಸೂರು-24 ✆ 2424094 ❏ ಗುಲ್ಬರ್ಗಾ-2 ✆ 424302

# ಧೂಮಕೇತುಗಳ ಭೇಟಿ



**ಈ** ತಿಂಗಳಲ್ಲಿ ಪ್ರತಿ ರಾತ್ರಿಯೂ ಆಕಾಶದಲ್ಲೊಂದು ಘಟನೆ ಇದ್ದೇ ಇದೆ ಎನ್ನಬಹುದು. ಹಾಗಾಗಿ ಬಿಡುವಿಲ್ಲದ ಕಾರ್ಯಕ್ರಮ ಎಂದು ಕರೆಯಲೂ ಅಡ್ಡಿ ಇಲ್ಲ.

ಈವರೆಗೆ ಸಂಜೆಯ ಆಕಾಶದಲ್ಲಿ ಬೆಳಗುತ್ತಿದ್ದ ಗ್ರಹಗಳಲ್ಲಿ ಮೂರು ಈಗ ದಿಗಂತದ ಅಂಚಿಗೆ ಸರಿದು 'ಬೈ, ಬೈ' ಹೇಳುತ್ತಿವೆ. ಆದ್ದರಿಂದ ಅವುಗಳನ್ನು ನೋಡುವ ತವಕ. ಬಿಟ್ಟರೆ ಇನ್ನೆರಡು ತಿಂಗಳ ನಂತರ ಬೆಳಗಿನ ಜಾವವೇ ನೋಡಲು ಸಿಕ್ಕುತ್ತವೆ. ಅಲ್ಲಿಯವರೆಗೂ ಕಾಯಬೇಕಲ್ಲಾ!

ಆರು ತಿಂಗಳ ಕಾಲ ರಾಜನಂತೆ ಮೆರೆದ ಶುಕ್ರಗ್ರಹ ಈಗ ಮುಂದಿನ ತಿಂಗಳು ವಿಶೇಷ ಕಾರ್ಯಕ್ರಮ –ಸಂಕ್ರಮಣ – ಕ್ಕಾಗಿ ಸಿದ್ಧತೆ ನಡೆಸುತ್ತಿದೆ. ದಿನದಿಂದ ದಿನಕ್ಕೆ ಅದು ಪಶ್ಚಿಮದ ದಿಗಂತದತ್ತ ಓಡುತ್ತಿದೆ. ಹಿನ್ನಡೆ ಎಂದರೆ ಹಿಂದಕ್ಕೆ ಓಡುತ್ತಿರುವಂತೆ ತೋರುವ ಅದರ ಚಲನೆ. ಇದು ೧೮ರಂದು ಆರಂಭ. ಇದಕ್ಕೆ ಮುನ್ನ ೨ರಂದು ಅದರ ಪ್ರಕಾಶ ಗರಿಷ್ಠವಾಗುತ್ತದೆ. ದುರ್ಬಿನು, ದೂರದರ್ಶಕಗಳಿಂದ ನೋಡಿದರೆ ಅದರ ಆಕಾರದ ಬದಲಾವಣೆ ಸ್ಫುಟವಾಗಿ ಗೋಚರಿಸುತ್ತದೆ. ಬಾಲಚಂದ್ರದ ಆಕಾರದಲ್ಲೀಗ ಅದು ಕಾಣುತ್ತದೆ.



೨೧ರಂದು ಆಕಾಶ ನೋಡಿದಿರಾದರೆ ಶುಕ್ರ ಎಲ್ಲಿ? ಎಂದು ಹುಡುಕಾಡುವಂತಾಗಬಹುದು. ಶುಕ್ರ ಕಳೆದುಹೋಯಿತೇ? ಇಲ್ಲ. ಚಂದ್ರನನ್ನು ಗಮನವಿಟ್ಟು ನೋಡಿ. ಗೆರೆಯಂತೆ ಕಾಣುವ ಬಾಲಚಂದ್ರನಿಗೆ ಅಂಟಿಕೊಂಡಂತೆ ಕಾಣುವುದೇ ಶುಕ್ರ. ಬಾಲಚಂದ್ರ-ಬಾಲಶುಕ್ರನನ್ನು ಒಟ್ಟಿಗೆ ನೋಡಲು, ಫೋಟೋ ತೆಗೆಯಲು ಇದೊಂದು ಅಪೂರ್ವ ಅವಕಾಶ. ಉತ್ತರ ಭಾರತ, ರಷ್ಯಾ ಈ ಭೂಭಾಗದಿಂದ ನೋಡಿದವರಿಗೆ ಶುಕ್ರ ಚಂದ್ರನ ಹಿಂದೆ ಮರೆಯಾದಂತೆ ಕಾಣುತ್ತದೆ. ಇದಕ್ಕೆ ಆಚ್ಛಾದನೆ ಎಂದು ಹೆಸರು. ಅಂದರೆ ಸಂಜೆಯಾಗುವಾಗ ಶುಕ್ರ ''ತಪ್ಪಿಸಿಕೊಂಡಿದೆ'' ಎಂದು ಅವರು ಹುಯಿಲೆಬ್ಬಿಸಬಹುದು. ಅರ್ಧ ಗಂಟೆಯ ನಂತರ ಚಂದ್ರನ ಹಿಂದಿನಿಂದ ಮೆಲ್ಲಗೆ ಶುಕ್ರ ಇಣಿಕುವಾಗ, ಎರಡೂ ಕಾಯಗಳು ಸಂಜೆಗೆಂಪಿನಲ್ಲಿ ಕರಗಿಹೋಗುತ್ತಿರುತ್ತವೆ.

ಶನಿ, ಮಂಗಳ ಇವೂ ಕ್ರಮೇಣ ದಿಗಂತದ ಅಂಚಿಗೆ ಸರಿಯುತ್ತವೆ. ಸಂಜೆಗೆಂಪಿನಲ್ಲಿ ಕರಗಿಹೋಗುತ್ತವೆ. ೨೨ರಂದು ಚಂದ್ರನಿಂದ ೩ ಡಿಗ್ರಿ ಅಂತರದಲ್ಲಿ ಇವೆರಡನ್ನೂ ಕಾಣಬಹುದು. ಆ ಮುಂದೆ ಗುರುತಿಸುವುದೇ ಕಷ್ಟವಾದೀತು.

ಹೀಗಾಗಿ ಗುರು ಸಂಜೆಯ ಆಕಾಶದಲ್ಲಿ ಉಳಿಯುವ ಏಕಮಾತ್ರ ಗ್ರಹವಾಗುತ್ತದೆ.

ಪ್ರಕಾಶಮಾನವಾದ ಪುಂಜಗಳೂ ಪಶ್ಚಿಮಕ್ಕೆ ಸರಿದಿರುವುದರಿಂದ ಆಕಾಶ ಖಾಲಿಯಾದಂತೆ ಕಾಣುತ್ತದೆ. ಒರೈಯನ್ (ಮಹಾವ್ಯಾಧ) ಮತ್ತು ಸಿರಿಯಸ್ ಭಾಗವನ್ನು ಗಮನಿಸುತ್ತಿದ್ದ ಹಾಗೆ ಅಲ್ಲೆರಡು ಹೊಸ ಚುಕ್ಕೆಗಳು ಮೂಡುವುದನ್ನು ನೋಡಬಹುದು. ಇವೇ ಲೀನಿಯರ್ ಮತ್ತು ನೀಟ್ ಧೂಮಕೇತುಗಳು. ಚುನಾವಣೆಯ ರಂಪ ರಾದ್ಧಾಂತಗಳ ನಡುವೆಯೂ ಮುಖಪುಟದ ಸುದ್ದಿಯಾಗುವ ಈ ಧೂಮಕೇತುಗಳನ್ನು ಬರಿಗಣ್ಣಿನಿಂದಲೇ ನೋಡುವುದು ಸಾಧ್ಯ ಎಂಬುದು ನಿರೀಕ್ಷೆ. ಆರು ವರ್ಷದ ಹಿಂದೆ ಬಂದು ಹೋದ ಹೇಲ್‌ಬಾಪ್‌ನಂತೆ ಕಾಣಬಹುದು. ಅಂದರೆ ನಗರವಾಸಿಗಳಿಗೆ ನಿರಾಸೆ ಕಟ್ಟಿಟ್ಟ ಬುತ್ತಿ. ನಕ್ಷೆಯಲ್ಲಿ ಎರಡೂ ಧೂಮಕೇತುಗಳ ಚಲನೆಯನ್ನು ಸೂಚಿಸಲಾಗಿದೆ. ಇದರ ಸಹಾಯದಿಂದ ಗುರುತಿಸಲು ಪ್ರಯತ್ನಿಸಿ.

ನೀಟ್ ಮತ್ತು ಲೀನಿಯರ್ ಎಂಬವು ಯಾವುದೇ ಖಗೋಳ ವಿಜ್ಞಾನಿಗಳ ಹೆಸರಲ್ಲ. ಸ್ವಯಂಚಾಲಿತ ದೂರದರ್ಶಕಗಳನ್ನೊಳಗೊಂಡ ಯೋಜನೆಗಳು. ಲಿಂಕನ್ ನಿಯರ್ ಅರ್ತ್ ಆಸ್ಟೆರ್ಯಾಡ್ ರಿಸರ್ಚ್ ಎಂಬುದರ ಹ್ರಸ್ವ ರೂಪ ಲೀನಿಯರ್; ನಿಯರ್ ಅರ್ತ್ ಆಸ್ಟೆರ್ಯಾಡ್ ಟ್ರಾಕಿಂಗ್ ಎಂಬುದರ ಹ್ರಸ್ವರೂಪ ನೀಟ್. ಪೂರ್ಣ ಹೆಸರು ಲೀನಿಯರ್ ೨೦೦೨ ಟಿ೭ ಎಂದಿದೆ. ಅಂದರೆ ೨೦೦೨ರ ಸೆಪ್ಟೆಂಬರ್‌ನಲ್ಲಿ ಕಂಡುಹಿಡಿಯಲಾದ ಏಳನೆಯ ಧೂಮಕೇತು ಎಂದರ್ಥ. ನೀಟ್ ೨೦೦೧ ಕ್ಯೂ೪ ಅಂದರೆ ೨೦೦೧ರ ಆಗಸ್ಟ್‌ನಲ್ಲಿ ಕಂಡುಹಿಡಿಯಲಾದ ನಾಲ್ಕನೆಯ ಧೂಮಕೇತು ಎಂದರ್ಥ. (ಎ ಎಂದರೆ ಜನವರಿ ಮೊದಲರ್ಧ; ಬಿ ಎಂದರೆ ಜನವರಿಯ ಉತ್ತರಾರ್ಧ; ಸಿ ಎಂದರೆ ಫೆಬ್ರವರಿಯ ಮೊದಲರ್ಧ.... ಹೀಗೆ.... ಎಲ್ ಮತ್ತು ಪಿ ಅಕ್ಷರಗಳನ್ನು ಬಳಸಿಲ್ಲ).

ಈ ನಭಾವಲೋಕನವನ್ನು ಸಿದ್ಧಪಡಿಸುತ್ತಿರುವಾಗ ಇನ್ನೊಂದು ಹೊಸ ಧೂಮಕೇತುವಿನ ಆಗಮನದ ಸುದ್ದಿ ತಿಳಿಯಿತು. ಖಗೋಳ ವಿಜ್ಞಾನದ 'ಭೀಷ್ಮ' ಎನಿಸಿಕೊಂಡಿರುವ ೮೬ರ 'ಹರೆಯ'ದ ಬ್ರಾಡ್‌ಫೀಲ್ಡ್ ಇದನ್ನು ಕಂಡುಹಿಡಿದದ್ದು ಏಪ್ರಿಲ್ ೧೨ರಂದು. ದಿಗಂತಕ್ಕೆ ತೀರಾ ಸಮೀಪವಿದ್ದ ಇದನ್ನು ಹುಡುಕುವುದು ಕಷ್ಟವೇ ಆಯಿತು. ಆದರೂ ಹವ್ಯಾಸಿಗಳ ಪರಿಶ್ರಮದಿಂದ ಇದರ ಕಕ್ಷೆಯನ್ನು ಲೆಕ್ಕ ಹಾಕುವುದು ಸಾಧ್ಯವಾಯಿತು. ಏಪ್ರಿಲ್ ೧೭ರಂದು ಇದು ಸೂರ್ಯನನ್ನು ಸಮೀಪಿಸಲಿದೆ. ಬುಧಗ್ರಹಕ್ಕಿಂತ ಹತ್ತಿರದಿಂದ ಹಾದು ಹೋಗುವ ಇದರ ಗತಿ ಏನಾಗಬಹುದು? ಎಂದು ಎಲ್ಲರೂ ಕುತೂಹಲದಿಂದ ಕಾಯುತ್ತಿದ್ದಾರೆ. 'ಸೂರ್ಯಸ್ಪರ್ಶಿ' ಎಂಬ ವರ್ಗದ ಇಂತಹ ಧೂಮಕೇತುಗಳು ಒಡೆದು ತುಂಡಾಗಿ ಬಿಡುವುದು ಅಪರೂಪವೇನಲ್ಲ. ಮೇ ತಿಂಗಳ ಮೊದಲ ವಾರದಲ್ಲಿ ಇದು ಸುದ್ದಿಯಾಗಬಹುದು.

ಡಾ|| ಬಿ. ಎಸ್. ಶೈಲಜಾ

*೩೦ನೇ ಪುಟಕ್ಕೆ*

# ಅಮೆರಿಕ ಅಪಪ್ರಚಾರದ ಫಲ ಸರ್ವನಾಶವಾದ ಇರಾಕ್

ಡಾ. ಜಯಪ್ರಕಾಶ ಮಾವಿನಕುಳಿ

**ಕೊ**ನೆಗೂ ಅಮೆರಿಕಾದವರು ಸದ್ದಾಂನನ್ನು ಸೆರೆಹಿಡಿದರು. ಇರಾಕಿನ ಪದಚ್ಯುತ ಅಧ್ಯಕ್ಷನನ್ನು ಬಿಲದ ಹೊಂಡದಿಂದ ಹೊರಗೆಳೆದು ತಂದರು.

ತನ್ನ ಅಧಿಕಾರದ ಮದದಿಂದ, ವಿಪರೀತದ ದುರಹಂಕಾರದಿಂದ ಇರಾನ್ ಮೇಲೆ ಎಂಟು ವರುಷ ಯುದ್ಧ ಮಾಡಿದ. ಅವರಿಗೆ ಸಹಾಯ ಮಾಡಿದರು ಎಂಬ ಗುಮಾನಿಯ ಮೇಲೆ ಕುರ್ದಿಶ್ ಅಲ್ಪಸಂಖ್ಯಾತರ ಮೇಲೆ ಅನಿಲ ಪ್ರಯೋಗಿಸಿ ಅವರನ್ನು ನಾಶಮಾಡಲೆತ್ನಿಸಿದ. ತನ್ನ ನೆರೆಯ ಸಣ್ಣ ರಾಷ್ಟ್ರವಾದ ಕುವೈತ್ ಮೇಲೆ ಯುದ್ಧ ಸಾರಿದ. ಮಾನವ ಜನಾಂಗದ ಮಹಾಕ್ರೂರಿ ಎಂಬಂತೆ ಚರಿತ್ರೆಯಲ್ಲಿ ಕಾಣಿಸಿಕೊಂಡ. ಅವನ ಆಡಳಿತದ ದೇಶದಲ್ಲಿ ಪ್ರೇತಗಳೂ ಪಿಸು ಮಾತಾಡಲು ಅಂಜುತ್ತವೆ ಎಂಬ ಮಾತು ಲೋಕ ಕೇಳಿಸಿಕೊಂಡಿತು.

ಅಮೆರಿಕಾ ಮತ್ತು ಬ್ರಿಟನ್‌ನ ಎಡೆಬಿಡದ ಪ್ರಚಾರಕ್ಕೆ ಭೂಲೋಕ ಮರುಳಾಗಿಬಿಟ್ಟಿದೆ.

ಅಮೆರಿಕಾದ ಅಧ್ಯಕ್ಷರು ಸದ್ದಾಂ ಸೆರೆಸಿಕ್ಕ ಹುಮ್ಮಸ್ಸಿನಿಂದ ಹೊಸತೇಜದಿಂದ ಚುನಾವಣೆ ಎದುರಿಸಲು ಸನ್ನದ್ಧರಾಗಿದ್ದಾರೆ. ರಿಪಬ್ಲಿಕನ್‌ರಿಗೆ ಖುಷಿಯೋ ಖುಷಿ. ಜನಾಭಿಪ್ರಾಯದ ಸಮೀಕ್ಷೆಯಲ್ಲಿ ಈಗ ಬುಷ್ ಮೇಲೇರುತ್ತಿದ್ದಾರೆ. ಆದರೆ ಇದು ಅವರಿಗೆ ಈ ವರ್ಷದ ಅಂತ್ಯದಲ್ಲಿ ನಡೆಯುವ ಅಧ್ಯಕ್ಷ ಚುನಾವಣೆಯಲ್ಲಿ ಗೆಲುವು ತರುತ್ತದೆ ಎಂದು ಹೇಳಲು ಕಾಲ ಇನ್ನೂ ಪಕ್ವವಾಗಿಲ್ಲ.

ಅಮೆರಿಕನ್ನರು ಸದ್ದಾಂನನ್ನು ಸೆರೆ ಹಿಡಿದದ್ದು ಅಮೆರಿಕಾ, ಇರಾಕ್‌ನಲ್ಲಿ ಮಾತ್ರವಲ್ಲ ಇಡೀ ಅರಬ್ ಲೋಕವನ್ನು ದ್ವಂದ್ವಕ್ಕೆ ಸಿಕ್ಕಿಸಿದೆ. ಅರಬ್‌ರಿಗೆ ಸದ್ದಾಂ ಕೇವಲ ಇರಾಕಿನ ದೊರೆಯಾಗಿ ಕಾಣಿಸಿರಲಿಲ್ಲ, ಆತ ಇಡೀ ಅರಬ್ ಜನಾಂಗದ ಗೌರವವನ್ನು ಹೆಚ್ಚಿಸಿದ ಮಹಾಪುರುಷನಾಗಿ ಕಾಣಿಸಿದ್ದ. ಭೂಲೋಕದ ಬಹುದೊಡ್ಡ ಶಕ್ತಿ ರಾಷ್ಟ್ರವಾದ ಅಮೆರಿಕಾವನ್ನು ಯುದ್ಧದಲ್ಲಿ ಎದುರಿಸಿದ ಸತ್ವ, ಶಕ್ತಿ ಪಡೆದುಕೊಂಡಿದ್ದ ಸದ್ದಾಂ ಅರಬ್ ದೇಶಗಳ ಕಣ್ಮಣಿಯಾಗಿದ್ದ. ಎರಡು ನಾಗರಿಕತೆಗಳ ಸಂಘರ್ಷ (clash of two civilizations)ದಲ್ಲಿ ಸದ್ದಾಂ ಹೀರೋ ಆಗಿದ್ದ.

ಇಂಥಾ ಸದ್ದಾಂನನ್ನು ಅಮೆರಿಕಾದವರು ಹಿಡಿದು ಹಾಕಿದ್ದರು. ಪದೇ ಪದೇ ಬೇರೆ ಬೇರೆ ಮಾಧ್ಯಮಗಳಲ್ಲಿ ಆತನನ್ನು ತೋರಿಸಿ, ಆತ ಬಾಯಿ ಕಳೆದದ್ದು, ಶರಣಾಗತಿಯಾದದ್ದು, ಕೃಶನಾಗಿದ್ದು ತೋರಿಸಿ ತೋರಿಸಿ ಅರಬರ ಮರ್ಮ ಸ್ಥಾನಕ್ಕೆ ಇರಿದಿದ್ದರು. ಪಶ್ಚಿಮದ ಈ ವರ್ತನೆ ಕಂಡು ಅರಬರು ನಪುಂಸಕರಾದವರಂತೆ ಮಿಸುಕಾಡಿದರು.

ಬ್ರಿಟನ್, ಆಸ್ಟ್ರೇಲಿಯ, ಸ್ಪೇನ್ ಮತ್ತು ಜಪಾನ್ ರಾಷ್ಟ್ರಗಳು ಸದ್ದಾಂ ಬಂಧನವನ್ನು ಸಂತೋಷದಿಂದ ಸ್ವಾಗತಿಸಿದವು. ಇವೆಲ್ಲವೂ ಅಮೆರಿಕಾದ ಸ್ನೇಹ ರಾಷ್ಟ್ರಗಳು. ತಮಾಷೆ ಎಂದರೆ ಇರಾಕ್‌ನ ಮೇಲಿನ ಆಕ್ರಮಣವನ್ನು ವಿರೋಧಿಸಿದ್ದ ಫ್ರಾನ್ಸ್, ಜರ್ಮನಿ ಮತ್ತು ರಶಿಯಾ ರಾಷ್ಟ್ರಗಳು ಸದ್ದಾಂ ಬಂಧನವನ್ನು ಸ್ವಾಗತಿಸಿದ್ದು. ಇವೆಲ್ಲವೂ ಗೆದ್ದೆತ್ತಿನ ಬಾಲ ಹಿಡಿದವೇ. ಇಲ್ಲ ನಾಳಿನ ಇರಾಕ್‌ನ ನವ ನಿರ್ಮಾಣದಲ್ಲಿ ಗುತ್ತಿಗೆಯ ಪಾಲುಗಾರಿಕೆಗೆ ಸಿಗಲಾರದೆಂಬ ಅನನ್ಯ ಭಯವೇ! ಅರಬ್ ರಾಷ್ಟ್ರಗಳಾದ ಕುವೈತ್, ಬೆಹರಿನ್ ಮತ್ತು ಸೌದಿ ಅರೇಬಿಯಾಗಳು ತಮ್ಮದೇ ಆದ ರಾಜಕೀಯ ಒತ್ತಡ ಮತ್ತು ಹಿಂದಿನ ಆಕ್ರಮಣದ ಕಾರಣಗಳಿಂದ ಸದ್ದಾಂ ಬಂಧನವನ್ನು ಸ್ವಾಗತಿಸಿದವು.

ಯಾವ ಮಹತ್ವದ ಕಾರಣಗಳಿಗಾಗಿ ಅಮೆರಿಕಾ ಯುದ್ಧ ಮಾಡಿತು ? ಈ ಆಕ್ರಮಣವನ್ನು ಮಾಡಲು, ವಿಶ್ವ ಶಾಂತಿಯನ್ನು ಹಾಳುಮಾಡಲು ಅಮೆರಿಕಾಕ್ಕೆ ಯಾರು ಗುತ್ತಿಗೆ ನೀಡಿದವರು ? ವಿಶ್ವಸಂಸ್ಥೆಯೆಂಬುದು ೧೮೯ ರಾಷ್ಟ್ರಗಳು ಕೂಡುವ ಮನೋರಂಜನಾ ವೇದಿಕೆಯೇ ? ಇಂದು ಜಗತ್ತಿನ ಜನರು ಅಮೆರಿಕಾವನ್ನು ಕೇಳುತ್ತಿದ್ದಾರೆ.

''ಇರಾಕಿನ ಸದ್ದಾಂ ಹುಸೇನ್‌ನಲ್ಲಿ ಸಮೂಹ ಮಾರಕ ಶಸ್ತ್ರಾಸ್ತ್ರಗಳಿವೆ. ಇದು ಜಾಗತಿಕ ಶಾಂತಿಗೆ ಅಪಾಯ ಆದುದರಿಂದ ಇದನ್ನು ನಾಶಪಡಿಸಲೇಬೇಕು'' ಎಂಬ ಸಿಹಿಲೇಪ ಅಮೆರಿಕಾಕ್ಕೆ. ಇದಕ್ಕೊಂದು ನೆವ ಬೇಕಿತ್ತು. ೧೯೯೦ರಲ್ಲಿ ಕುವೈತ್‌ನನ್ನು ಸದ್ದಾಂ ಆಕ್ರಮಿಸಿದ. ಒಳ್ಳೆಯ ನೆವ ಸಿಕ್ಕಿತು. ಕೇಳಬೇಕೇ ಅಮೆರಿಕಾ – ಪ್ರಜಾಪ್ರಭುತ್ವ, ವಿಶ್ವಸಂಸ್ಥೆಯ ಉಳಿವಿಗಾಗಿ – ಕುವೈತ್‌ನನ್ನು ವಿಮೋಚನೆಗೊಳಿಸಲು ವಿಶ್ವಸಂಸ್ಥೆಯ ಆದೇಶದೊಂದಿಗೆ ಯುದ್ಧ ಸಾರಿತು. ಇರಾಕ್ ಕಾಲ್ತೆಗೆಯಿತು. ಕುವೈತ್ ವಿಮೋಚನೆಯಾಯಿತು. ಈಜಿಪ್ಟ್‌ನ ನಾಸೆರ್ ಕಾಲದಿಂದಲೂ ಅರಬ್ ದೇಶಗಳ ಮೇಲೆ ಹಿಡಿತ ಸಾಧಿಸಲು ಹೊಂಚು ಹಾಕುತ್ತಿದ್ದ ಅಮೆರಿಕಾಕ್ಕೆ ಒಂದು ಒಳ್ಳೆಯ ಪಿಳ್ಳೆ ನೆವ ಸಿಕ್ಕಿತು. ಹೀಗಾಗಿ

ಯಾವ ಮಹತ್ವದ ಕಾರಣಗಳಿಗಾಗಿ ಅಮೆರಿಕಾ ಯುದ್ಧ ಮಾಡಿತು ? ಈ ಆಕ್ರಮಣವನ್ನು ಮಾಡಲು, ವಿಶ್ವ ಶಾಂತಿಯನ್ನು ಹಾಳು ಮಾಡಲು ಅಮೆರಿಕಾಕ್ಕೆ ಯಾರು ಗುತ್ತಿಗೆ ನೀಡಿದವರು ? ವಿಶ್ವಸಂಸ್ಥೆಯೆಂಬುದು ೧೮೯ ರಾಷ್ಟ್ರಗಳು ಕೂಡುವ ಮನೋರಂಜನಾ ವೇದಿಕೆಯೇ ? ಇಂದು ಜಗತ್ತಿನ ಜನರು ಅಮೆರಿಕವನ್ನು ಕೇಳುತ್ತಿದ್ದಾರೆ.



ಕುವೈತ್ ಮತ್ತು ಸೌದಿ ಅರೇಬಿಯಾಗಳನ್ನು ರಕ್ಷಿಸಲು ಅಮೆರಿಕಾ ಸೇನೆ ಸೌದಿಯಲ್ಲಿ ನೆಲೆ ನಿಂತಿತು. ಸೌದಿ ಮತ್ತು ಕುವೈತ್‌ನನ್ನು ಅಮೆರಿಕಾ ಆಕ್ರಮಿಸಿಕೊಂಡಿದೆಯೋ ಇಲ್ಲ ರಕ್ಷಣೆ ನೀಡುತ್ತದೆಯೋ ಎಂಬುದನ್ನು ಇತಿಹಾಸ ಹೇಳಬೇಕು. ಅಮೆರಿಕಾ ಸೇನೆ ಈ ಎರಡೂ ರಾಷ್ಟ್ರಗಳಿಗೆ ಬಿಸಿ ತುಪ್ಪವಾಗಿದೆ. ಉಗುಳುವಂತಿಲ್ಲ, ನುಂಗುವಂತಿಲ್ಲ.

ಮೊದಲ ಬಾರಿಗೆ – ಎರಡನೇ ಮಹಾಯುದ್ಧದ ನಂತರ – ವಿಶ್ವಸಂಸ್ಥೆಯ ರಚನೆಯ ನಂತರ – ಎರಡು ವಿಶ್ವಸಂಸ್ಥೆಯ ಭದ್ರತಾ ಸಮಿತಿಯ ಖಾಯಂ ರಾಷ್ಟ್ರಗಳಾದ ಅಮೆರಿಕಾ ಮತ್ತು ಬ್ರಿಟನ್ ವಿಶ್ವ ಸಂಸ್ಥೆಯ ಚಾರ್ಟರ್‌ನ ಪರಿಚ್ಛೇದ ಎರಡರಲ್ಲಿನ ಮೂಲ ಧ್ಯೇಯವನ್ನು ಮುರಿದುಹಾಕಿದವು. ಹೀಗೆ ಮಾಡುವುದರ ಮೂಲಕ ವೆಸ್ಟ್‌ಫೇಲಿಯನ್ ನಿಯಮವನ್ನು ಉಲ್ಲಂಘಿಸಿ ವಿಶ್ವಸಂಸ್ಥೆಯನ್ನು ಅತ್ಯಂತ ಕೀಳಾಗಿಸಿತು. ಜಗತ್ತಿನ ಸಾರ್ವಜನಿಕ ಅಭಿಪ್ರಾಯವನ್ನು ಕಡೆಗಣಿಸಿತು. ಇದು ವಿಶ್ವಸಂಸ್ಥೆಯ ಅಸ್ತಿತ್ವಕ್ಕೆ ಧಕ್ಕೆ ತಂದಿತು.




ಒಂದು ರಾಷ್ಟ್ರದ ಮೇಲೆ ಆಕ್ರಮಣ ಮಾಡುವಾಗ ಆ ರಾಷ್ಟ್ರದಲ್ಲಿ ಆಗಬಹುದಾದ ಸ್ಥಿತ್ಯಂತರಗಳನ್ನು ಊಹಿಸಿಕೊಳ್ಳಲಾರದಷ್ಟು ದಡ್ಡ ದೇಶವಲ್ಲ ಅಮೆರಿಕಾ. ಇರಾಕಿನಲ್ಲೂ ಸದ್ದಾಂ ಹುಸೇನ್‌ನಿಗೆ ಗೆಳೆಯರಿದ್ದಾರೆ, ಶತ್ರುಗಳಿದ್ದಾರೆ. ಇರಾಕು ಮೂರು ಪಂಗಡಗಳೊಡನೆ ಹಂಚಿಹೋಗಿದೆ – ಶಿಯಾ, ಸುನ್ನಿ ಮತ್ತು ಕುರ್ದಿಷ್. ಶೇಕಡಾ ೬೨ ಇರುವ ಶಿಯಾದವರೆಲ್ಲ ಅಧಿಕಾರವಿಲ್ಲದೇ ಸುನ್ನಿಯಾದ ಸದ್ದಾಂ ಹುಸೇನ್‌ನಲ್ಲಿ ಸುಮಾರು ೨೫ ವರುಷಗಳು ಅಧಿಕಾರ ಇದ್ದಿದ್ದು ಶಿಯಾದವರಿಗೆ ಉಗ್ರ ಕೋಪ ಇದೆ. ಮೂಲನಿವಾಸಿಗಳೆಂದೇ ಖ್ಯಾತರಾದ ಕುರ್ದಿಷ್‌ರವರು ಸುನ್ನಿಗಳಾಗಿದ್ದರೂ, ಅವರಿಗೆ ಸದ್ದಾಂ ಮೇಲೆ ವಿಪರೀತ ಸಿಟ್ಟಿದೆ. ೧೯೮೮ರಲ್ಲಿ ಕುರ್ದಿಷ್ ಪಟ್ಟಣದ ಹಲಾಟ್ಟಾ ಮೇಲೆ ರಾಸಾಯನಿಕ ಅಸ್ತ್ರ ದಾಳಿ ನಡೆಸಿ ಐದು ಸಾವಿರ ಜನರನ್ನು ಕೊಂದ ಸದ್ದಾಂನನ್ನು ಅವರೆಂದೂ ಕ್ಷಮಿಸುವುದಿಲ್ಲ. ಇಂಥ ವೈರುಧ್ಯಗಳ ನಡುವೆ ಇರಾಕಿದೆ. ೨೪೫ ಮಿಲಿಯನ್ ಜನರಿಗೆ ಹಸಿವು ಕಾಡಿದೆ.

ಪೂರ್ಣ ಅಧಿಕಾರಕ್ಕೆ ಬಂದ ಒಂದು ವರ್ಷದಲ್ಲೇ ೧೯೮೦ ಸೆಪ್ಟೆಂಬರ್ ೨೨ರಂದು ಇರಾನ್ ಮೇಲೆ ದಾಳಿಗೆ ಆದೇಶ ನೀಡಿದ ಸದ್ದಾಂ. ಹತ್ತು ಲಕ್ಷ ಜನರು ಈ ಎಂಟು ವರುಷಗಳ ಯುದ್ಧದಲ್ಲಿ ಸತ್ತರು ಎಂದು ಅಂದಾಜು ಮಾಡಲಾಗಿದೆ. ಆಗ ಸದ್ದಾಂಗೆ ಬೆಂಬಲವಾಗಿ ನಿಂತಿದ್ದೇ ಅಮೆರಿಕಾ. ಆಗ ಸದ್ದಾಂ ಅಮೆರಿಕಾದ ಅಚ್ಚುಮೆಚ್ಚಿನ ಮನುಷ್ಯ. ಹೀಗಾಗಿ ಅಮೆರಿಕಾವೇ ಇರಾಕಿಗೆ ಸ್ಕಡ್‌ಗಳನ್ನು, ಅತ್ಯುತ್ತಮ ಯುದ್ಧಾಸ್ತ್ರಗಳನ್ನು ಸರಬರಾಜು ಮಾಡಿತು. ಯಾವ ನಿರ್ಧಾರಕ್ಕೂ ಬರಲು ಈ ಯುದ್ಧದಲ್ಲಿ ಸಾಧ್ಯವಾಗದೇ ಯುದ್ಧ ಸಂಪೂರ್ಣ ನಿಷ್ಫಲವಾಯಿತು. ಆದರೆ ಅಮೆರಿಕಾದ ಯುದ್ಧಾಸ್ತ್ರಗಳ ವ್ಯಾಪಾರ ನೀತಿಯಿಂದ ಆರ್ಥಿಕ ಸಂಕಟಕ್ಕೆ ಇರಾಕು ಸಿಕ್ಕಿಕೊಂಡಿತು. ಸದ್ದಾಂ ತಳಮಳಿಸತೊಡಗಿದ. ಯುದ್ಧಾಸ್ತ್ರಗಳಿಂದ ಏನು ಮಾಡುವುದು, ಗಲ್ಫ್ ದೇಶಗಳಲ್ಲಿ ಇರುವುದೆಂದರೆ ಎಣ್ಣೆ ಮಾತ್ರ. ಶಸ್ತ್ರಾಸ್ತ್ರಗಳಿಂದಾಗಲಿ, ಕೊಳವೆ ಎಣ್ಣೆಗಳಿಂದಾಗಲಿ ಜನರ ಮೂಲಭೂತ ಅವಶ್ಯಕತೆಗಳು ಪೂರೈಸಲು ಸಾಧ್ಯವಾಗುವುದಿಲ್ಲ. ಅದಕ್ಕಾಗಿ ವಿಶ್ವ ಮಾರುಕಟ್ಟೆಯಲ್ಲಿ ತಮ್ಮ ದೇಶದ ಎಣ್ಣೆಗೆ ಉತ್ತಮ ದರ ದೊರಕಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಅಮೆರಿಕಾ ೧೯೯೦ರಲ್ಲಿ ಒಂದು ಬಿಲಿಯನ್ ಸಾಲ ಕೊಟ್ಟಿದ್ದು ಈಗ ಮಾತನಾಡುತ್ತಿರಲಿಲ್ಲ. ಒಪೆಕ್‌ನ ಸಭೆಯಲ್ಲಿ ಎಣ್ಣೆಯ ದರ ಏರಿಸೋಣ ಎಂದರೆ ಉಳಿದವರು ಒಪ್ಪುವುದಿಲ್ಲ. ಇಷ್ಟೇ ಸಾಲದೆಂದು ಕುವೈತ್ ಇರಾಕಿನ ಭೂ ಪ್ರದೇಶದಿಂದ ಕದ್ದು ಕನ್ನ ಹೊಡೆದು ಎಣ್ಣೆ ಉತ್ಪಾದಿಸಿ ಕಳ್ಳ ದಾರಿಯಲ್ಲಿ ವಿಶ್ವಮಾರುಕಟ್ಟೆಗೆ ತಲುಪಿಸುತ್ತಿತ್ತು. ಕುವೈತ್‌ನ ಮೇಲೆ ಇರಾಕ್ ಆಕ್ರಮಣ ಮಾಡುವುದು ಅನಿವಾರ್ಯವಾಯಿತು. ೧೯೯೦ರ ಆಗಸ್ಟ್‌ನಲ್ಲಿ ಈ ದಾಳಿ ನಡೆಯಿತು. ಒಂದು ಬ್ಯಾರೆಲ್ ಎಣ್ಣೆ ವಿಶ್ವ ಮಾರುಕಟ್ಟೆಯಲ್ಲಿ ೧೨ ಡಾಲರ್‌ಗಿಳಿದು ಇರಾಕ್ ಕಂಗಾಲಾಯಿತು. ಬ್ಯಾರೆಲ್‌ಗೆ ಇಪ್ಪತ್ತೈದು ಡಾಲರ್ ಬರಬೇಕು ಎನ್ನುವುದು ಇರಾಕ್ ವಾದ. ಆದರೆ ಈ ವಾದ ಒಪೆಕ್‌ನಲ್ಲಿ (OPEC) ಬಿದ್ದುಹೋಯಿತು. ಅದಕ್ಕೆ ಮುಖ್ಯವಾಗಿ ಅಸಮ್ಮತಿ ಸೂಚಿಸಿದ್ದು ಕುವೈತ್. ತನ್ನ ಸುತ್ತಮುತ್ತಲಿನ ರಾಷ್ಟ್ರಗಳು ತನ್ನ ಸಂಕಷ್ಟಕ್ಕೆ ಸಹಾಯ ಮಾಡದ್ದನ್ನು ಕಂಡು ಇರಾಕ್ ಕಂಗಾಲಾಯಿತು. ಆರ್ಥಿಕ ಘೋರ ವಿಪತ್ತಿನಿಂದ ಪಾರಾಗಲು ಅದಕ್ಕೆ ಇದ್ದಿದ್ದು ಒಂದೇ ಅಖಂಡ ಇರಾಕ್ ಕಲ್ಪನೆ, ಅದಕ್ಕಾಗಿ ಕುವೈತ್‌ನ ಮೇಲೆ ಯುದ್ಧ.

ಅಮೆರಿಕಾಕ್ಕೆ ಬೇಕಾಗಿದ್ದೇ ಇದು. ಯುದ್ಧದ ಪೂರ್ವ ಸೂಚನೆ ಗೊತ್ತಿದ್ದರೂ ಇದು 'ಅರಬ್ಬರ ನಡುವಿನ ಸಮಸ್ಯೆ' ಎಂದು ತೆಪ್ಪೇ ಸಾರಿ ಮೌನವಾಗಿ ಕುಳಿತಿತ್ತು. ಈಗ ಯುದ್ಧ ಘೋಷಣೆ ಆದಕೂಡಲೇ ಅದು ತೀವ್ರ ನಿದ್ದೆಯಿಂದ ಎಚ್ಚೆತ್ತವರಂತೆ ವಿಶ್ವಸಂಸ್ಥೆಯ ನಿಯಮಗಳು ನೆನಪಾಗಿ ರಾಷ್ಟ್ರವನ್ನು ಉಳಿಸಬೇಕು ಎಂದು ಬೊಬ್ಬೆ ಶುರು ಮಾಡಿತು. ವಾಸ್ತವವಾಗಿ ಇರಾಕ್ ಏನಾದರೂ ಕುವೈತ್‌ನನ್ನು ಆಕ್ರಮಿಸಿ ಎಲ್ಲ ಎಣ್ಣೆ ಬಾವಿಗಳನ್ನು ತನ್ನ ವಶಕ್ಕೆ ತೆಗೆದುಕೊಂಡಿತೋ, ಸದ್ದಾಂ ಅಲ್ಲಿಗೆ ನಿಲ್ಲುವುದಿಲ್ಲ; ಪಕ್ಕದ ಸೌದಿ ಅರೇಬಿಯಾಕ್ಕೆ ಮುತ್ತಿಗೆ ಹಾಕಬಹುದು. ಹಾಗೇನಾದರೂ ಆದರೆ ಜಗತ್ತಿನ ಎಣ್ಣೆ ಉತ್ಪಾದನೆಯ ಶೇ.೬೫ರಷ್ಟು ಸದ್ದಾಂನ ವಶದಲ್ಲಿ. ವಿಶ್ವದ ಹೆಚ್ಚು ಎಣ್ಣೆ ಉಪಯೋಗಿಸುವ ಅಮೆರಿಕಾ ತತ್ತರ ನಡುಗಿದ್ದು ಆಗಲೇ. ಇದು ಅಮೆರಿಕಾದ ಅಳಿವು-ಉಳಿವಿನ ಪ್ರಶ್ನೆಯಾಯಿತು. ಅಧ್ಯಕ್ಷ ಸೀನಿಯರ್ ಬುಷ್‌ನ ಪ್ರಚಾರ ಮುಗಿಲು ಮುಟ್ಟಿತು. ಅದಕ್ಕೊಂದು ತಾತ್ವಿಕ ನೆಲೆಗಟ್ಟಿತ್ತು. ಇರಾಕ್ ವಿಶ್ವಸಂಸ್ಥೆಯ ಮೂಲ ಧ್ಯೇಯದ ೨ನೇ ಪರಿಚ್ಛೇದವನ್ನು ಮುರಿದಿದೆ. ಆದುದರಿಂದ ವಿಶ್ವಸಂಸ್ಥೆಯ ಉಳಿದ ೧೮೯ ರಾಷ್ಟ್ರಗಳೂ ಸೇರಿ ಇರಾಕ್‌ನನ್ನು ಕುವೈತ್‌ನಿಂದ ಹೊರಗೆ ಹಾಕಬೇಕು. ಇದು ವಿಶ್ವಸಂಸ್ಥೆಯ ಅಂತಃಸತ್ವದ ಪ್ರಶ್ನೆ. ಹೀಗೆ ಇರಾಕ್ ಮಾಡಿದ ಮೊದಲ ಐತಿಹಾಸಿಕ ತಪ್ಪು ಘೋರ ದುರಂತಕ್ಕೆ ಕಾರಣವಾಯಿತು. ಅಮೆರಿಕ ನೇತೃತ್ವದ ಮಿತ್ರ ಪಡೆಯಿಂದ ಸುಮಾರು ಐದು ತಿಂಗಳ ಕುವೈತ್ ಸೆರೆ ಬಿಡುಗಡೆಯಾಯಿತು. ಇರಾಕ್ ಮತ್ತು ಅಮೆರಿಕ ಎದುರು ಬದರು ನಿಂತುಕೊಂಡವು.

ಕುವೈತ್‌ನ ಯುದ್ಧ ನೆಪವಾಗಿ ಅಮೆರಿಕಾ ವಿಶ್ವಶಾಂತಿಯ ಜಪ ಶುರುಮಾಡಿತು. ಅದಕ್ಕಾಗಿ "ಇರಾಕ್‌ನಲ್ಲಿ ರಾಸಾಯನಿಕ ಶಸ್ತ್ರಾಸ್ತ್ರಗಳಿವೆ. ಅವುಗಳನ್ನು ನಾಶ ಮಾಡದೆ ವಿಶ್ವಶಾಂತಿಯಿಲ್ಲ" ಎಂಬ ಅಪಪ್ರಚಾರ ಎಷ್ಟು ವ್ಯವಸ್ಥಿತವಾಗಿತ್ತು ಎಂದರೆ ಇಡೀ ಜಗತ್ತು ನಂಬುವಷ್ಟು. ಆದರೆ ವಿಶ್ವದ ಆರ್ಥಿಕ ತಜ್ಞರಿಗೆ ಗೊತ್ತಿತ್ತು : ಅಮೆರಿಕ ಯಾವತ್ತು ಆರ್ಥಿಕ ಸಂಕಟಕ್ಕೆ ಸಿಕ್ಕಿ ಹಾಕಿಕೊಳ್ಳುತ್ತದೋ ಆಗೆಲ್ಲಾ ಅದು ಯುದ್ಧ ಪ್ರೇರೇಪಿಸುತ್ತದೆ, ಇಲ್ಲ ಯುದ್ಧಕ್ಕೆ ಇಳಿಯುತ್ತದೆ. ಈಗಲೂ ಅಷ್ಟೇ ಆದದ್ದು. ಆಗ ಅದಕ್ಕೆ ವಿಶ್ವಸಂಸ್ಥೆಯ ಅಧಿನಿಯಮಗಳ ಪ್ರಕಾರ ಒಂದು ಸ್ವತಂತ್ರ ರಾಷ್ಟ್ರದ ಆಂತರಿಕ ವಿಚಾರದಲ್ಲಿ ಮೂಗು ತೂರಿಸಬಾರದು ಎಂಬುದು ನೆನಪಾಗಲಿಲ್ಲ!

---

೪೮ನೇ ಪುಟದಿಂದ

ಈ ಬಾರಿಯ ಹುಣ್ಣಿಮೆಯ ಚಂದ್ರನ ಪಕ್ಕ ಕಾಣುವ ಕ್ಷೀಣ ನಕ್ಷತ್ರ ವಿಶಾಖಾ. ಆದ್ದರಿಂದ ಈ ತಿಂಗಳ ಹೆಸರು ವೈಶಾಖ. ಈ ಹುಣ್ಣಿಮೆಗೆ ಬುದ್ಧ ಪೂರ್ಣಿಮಾ ಎಂದೂ ಹೆಸರಿದೆ. ಸಾಮಾನ್ಯವಾಗಿ ವಿಶಾಖಾ ನೋಡಲು ಹುಣ್ಣಿಮೆಯ ಚಂದ್ರನ ಬೆಳಕೇ ಅಡ್ಡಿಯಾಗಬಹುದು. ಈ ಬಾರಿ ಚಂದ್ರಗ್ರಹಣವಿದೆ. ಭೂಮಿಯ ನೆರಳಲ್ಲಿ ಚಂದ್ರ ಕರಗಿ ಹೋದಾಗ ನಕ್ಷತ್ರಗಳು ಸ್ಫುಟವಾಗಿ ಕಾಣುವುವು. ಆದ್ದರಿಂದ ವಿಶಾಖಾ ನಕ್ಷತ್ರವನ್ನು ಪತ್ತೆಮಾಡಬಹುದು. ಪೂರ್ಣಗ್ರಹಣವಾದಾಗ ಚಂದ್ರ ಕಾಣುವುದೇ ಇಲ್ಲವೇ ? ಕಂಡರೆ ಹೇಗೆ ಕಾಣಬಹುದು ? ಪರೀಕ್ಷಿಸಿ ನೋಡಲು ಇದೊಂದು ಒಳ್ಳೆಯ ಅವಕಾಶ.

### ಖಗೋಳ ದಿನಚರಿ

೨ ಶುಕ್ರದ ಪ್ರಕಾಶ ಗರಿಷ್ಠ

೪ ಹುಣ್ಣಿಮೆ - ವಾಸ್ತವವಾಗಿ ೫ರ ಬೆಳಗಿನ ಜಾವ ೨ ಗಂಟೆ ೩ ನಿಮಿಷಕ್ಕೆ - ಚಂದ್ರಗ್ರಹಣ ೨೩:೨೧ ರಿಂದ ೪:೪೦ರವರೆಗೆ

೫ ಗುರುಗ್ರಹದ ಹಿನ್ನಡೆ ಮುಕ್ತಾಯವಾಗಿ ಅದು ಕನ್ಯಾರಾಶಿಯತ್ತ ಚಲಿಸತೊಡಗುವುದು. ಅಕ್ವಾರಿಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ.

೧೧ ಚಾಂದ್ರಮಾಸದ ಕೊನೆಯ ಪಾದ - ಚಂದ್ರೋದಯ ನಡುರಾತ್ರಿಯಲ್ಲಿ

೧೬ ಬುಧ-ಚಂದ್ರರ ನಡುವೆ ೩ ಡಿಗ್ರಿ ಅಂತರ (ಬೆಳಗಿನ ಜಾವ ಬಾಲಚಂದ್ರನ ಪಕ್ಕ ಕಾಣುವ ಚುಕ್ಕೆಯೇ ಬುಧ)

೧೮ ಶುಕ್ರಗ್ರಹದ ಹಿನ್ನಡೆ ಆರಂಭ.

೧೯ ಅಮಾವಾಸ್ಯೆ ೧೦ ಗಂಟೆ ೧೨ ನಿಮಿಷಕ್ಕೆ

೨೨ ಶನಿ, ಮಂಗಳಗಳನ್ನು ಗುರುತಿಸಲು ಕೊನೆಯ ಅವಕಾಶ. ಚಂದ್ರನ ಪಕ್ಕದಲ್ಲೇ ಇವು ಕಾಣುತ್ತವೆ.

೨೭ ಚಾಂದ್ರಮಾಸದ ಮೊದಲ ಪಾದ ;
ಗುರುಗ್ರಹದ ಪಕ್ಕ ಚಂದ್ರನ ಸ್ಥಾನ.

■ ಬಿ. ಎಸ್. ಶೈಲಜಾ
ಜವಹರಲಾಲ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

ಇರಾಕ್ ವಿರುದ್ಧ ಯುದ್ಧಕ್ಕೆ ಅಣಿಯಾಗಿದ್ದ ಅಮೆರಿಕಾಕ್ಕೆ ವಿಶ್ವಸಂಸ್ಥೆ ಯಾವ ಲೆಕ್ಕ. ಉಳಿದ ಸದಸ್ಯರ ಮೌನ ವಿರೋಧ ಯಾವ ಲೆಕ್ಕ. ಕಟ್ಟಾ ವಿರೋಧಿಸಲು ಸೋವಿಯತ್ ಯೂನಿಯನ್ ಇರಲಿಲ್ಲ. ಜಗತ್ತಿನ ಸರ್ವಾಧಿಕಾರಿಗಳನ್ನು ಹಿಡಿತದಲ್ಲಿಟ್ಟು ವಿಶ್ವದ ಸಮತೋಲನವನ್ನು ಕಾಯ್ದುಕೊಳ್ಳುತ್ತಿದ್ದ ಸೋವಿಯತ್ ಯೂನಿಯನ್ ಛಿದ್ರವಾಗಿತ್ತು. ಬಹಳ ರಾಷ್ಟ್ರಗಳಿಗೆ ಆಗ ನೆನಪಿಗೆ ಬಂದಿದ್ದು ಸೋವಿಯತ್ ಯೂನಿಯನ್.

ಬುಷ್ ಯುದ್ಧದಾಹಕ್ಕೆ ಬ್ಲೇರ್ ತಿದಿಯೊತ್ತಿದರು. ಇಬ್ಬರೂ ಪ್ರಜಾಪ್ರಭುತ್ವ ರಾಷ್ಟ್ರಗಳ ಅಧಿನಾಯಕರು; ೧೨೧ ಲೇಬರ್ ಪಕ್ಷದ ಸಂಸದರು ಬ್ಲೇರ್ ನೀತಿಯನ್ನು ವಿರೋಧಿಸಿದರೂ ೧೯೮ ಮತಗಳ ಬೆಂಬಲದಿಂದ ಬ್ಲೇರ್ ಬುಷ್‌ರೊಂದಿಗೆ ಕೈ ಜೋಡಿಸಿ ಇರಾಕ್‌ನ ಸರ್ವನಾಶಕ್ಕೆ ಕಾರಣವಾದರು. ರಶಿಯಾ, ಫ್ರಾನ್ಸ್, ಜರ್ಮನಿಗಳ ವಿರೋಧ ಯಾವ ಲೆಕ್ಕ? ಸ್ವಲ್ಪ ಕೊಸರಾಟದ ನಂತರ ಇರಾಕ್ ಶಸ್ತ್ರಾಸ್ತ್ರ ತಪಾಸಣೆಗೆ ಒಪ್ಪಿಕೊಂಡಿತು. ಇರಾಕ್‌ನಲ್ಲಿ ಸಮೂಹನಾಶಕ ಶಸ್ತ್ರಾಸ್ತ್ರಗಳಿಲ್ಲ ಎಂದು ಮುಖ್ಯ ತಪಾಸಕ ಹ್ಯಾನ್ಸ್ ಬ್ಲಿಕ್ಸ್ ಹೇಳಿದರು. ಅದ್ಯಾವುದೂ ಮುಖ್ಯ ಅಜೆಂಡಾ ಅಲ್ಲ. ಅಮೆರಿಕಾಕ್ಕೆ ಬೇಕಾದ್ದು ಯುದ್ಧ.

ಕೊನೆಗೂ ಯುದ್ಧ ಸಂಭವಿಸಿತು. ೨೦೦೩ ಮಾರ್ಚ್ ೧೯ ಬಾಗ್ದಾದಿನ ಮೇಲೆ ಅಮೆರಿಕ ಪಡೆಗಳಿಂದ ಕ್ಷಿಪಣಿ ದಾಳಿ ಆರಂಭ. ಇರಾಕಿನಲ್ಲಿ ಕೃಷಿ ಕ್ಷೇತ್ರ ಬರಿದಾಯಿತು. ೨೪೫ ಮಿಲಿಯನ್ ಜನರಿಗೆ ಹಸಿವು ಕಾಡಿತು. ೨೦೦೩ ಜುಲೈ ೨೨ರಂದು ಅಮೆರಿಕ ಪಡೆಗಳಿಂದ ಸದ್ದಾಂ ಹುಸೇನ್‌ನ ಪುತ್ರರಾದ ಉದ್ಯೆ ಮತ್ತು ಕುಸ್ಸೆ ಹತ್ಯೆ. ಜುಲೈ ೩೧ರಂದು ಸದ್ದಾಂ ಇಬ್ಬರು ಪುತ್ರಿಯರಿಗೆ ಮತ್ತು ಅವರ ೯ ಮಕ್ಕಳಿಗೆ ಜೋರ್ಡಾನಿನ ಎರಡನೇ ದೊರೆ ಅಬ್ದುಲ್ಲಾ ಅವರಿಂದ ರಾಜಾಶ್ರಯ. ೨೦೦೩ ಡಿಸೆಂಬರ್ ೧೪ರಂದು ತಿರ್ಕಿತ್ ಬಳಿಯ ಮಣ್ಣಿನ ಗುಂಡಿಯಲ್ಲಿ ಅಮೆರಿಕ ಪಡೆಗಳಿಂದ ಸದ್ದಾಂ ಬಂಧನ. ಈಗ ಆತ ಯುದ್ಧ ಖೈದಿ. ಅಮೆರಿಕದ ರಹಸ್ಯ ಸ್ಥಳದಲ್ಲಿ ಆತ ಇದ್ದಾನೆ. ಒಂದು ರಾಷ್ಟ್ರಕ್ಕೆ ಆರ್ಥಿಕ ದಿಗ್ಬಂಧನ ಹಾಕಿ, ಶಸ್ತ್ರಾಸ್ತ್ರ ಪರಿಶೀಲನೆ ನೆಪ ಒಡ್ಡಿ ಅಲ್ಲಿ ಶಸ್ತ್ರಾಸ್ತ್ರಗಳಿಲ್ಲ ಎಂದು ತಜ್ಞರ ತಂಡವೇ ಹೇಳಿದಾಗಲೂ ''ತೋರಿಸಿ ತೋರಿಸಿ'' ಎಂದು ಕಾಲು ಕೆರೆಯುವುದು ಯಾವ ನಾಗರಿಕ ಸಮಾಜದ ಲಕ್ಷಣ? ಅರಬ್‌ನಲ್ಲಿ ಒಂದು ಗಾದೆ ಇದೆ 'ಇಲ್ಲದನ್ನು ತೋರಿಸುವುದು ಹೇಗೆ ?!'

ಈಗ ಇರಾಕ್ ಇಡಿಯಾಗಿ ಅಮೆರಿಕ ಕೈಯಲ್ಲಿ ಬಂದಿದೆ. ರಾಸಾಯನಿಕ ಶಸ್ತ್ರಾಸ್ತ್ರಗಳು ಎಲ್ಲೆಲ್ಲಿ ಅಡಗಿವೆಯೋ ಅಲ್ಲೆಲ್ಲ ಹುಡುಕಬಹುದು. ಯುದ್ಧದಲ್ಲಿ ಸತ್ತಿರಬಹುದೆಂದು ಅಂದಾಜು ಮಾಡಿದ ಹದಿನೈದು ಸಾವಿರ ನಾಗರಿಕರ ಹೆಣಗಳ ಮಧ್ಯೆಯೂ ಹುಡುಕಬಹುದು. ಅಮೆರಿಕ ಸೈನಿಕರು ೩೦೦೦ಕ್ಕಿಂತ ಹೆಚ್ಚಿನ ಶವಗಳನ್ನು ದಕ್ಷಿಣ ಬಾಗ್ದಾದ್‌ದ ಬೆಬಿಲೋನಿನ ನಗರ ಹಿಲ್ಲಾದ ಬಳಿ ಬೇಕಾಬಿಟ್ಟಿಯಾಗಿ ಎಸೆದಿದ್ದರು. ಇಂಥ ರಾಷ್ಟ್ರಗಳೇ ಮಾನವಹಕ್ಕುಗಳ ಅಧಿಕೃತ ಪೋಷಕರು !!

ಯಾವಾಗ ರಾಸಾಯನಿಕ ಶಸ್ತ್ರಾಸ್ತ್ರಗಳು ಸಿಗಲಿಲ್ಲವೋ ಸಿಗುವ ಆಸೆಯೂ ಇಲ್ಲವೋ ಆಗ ಅಮೆರಿಕಾ ತನ್ನ ರಾಜಕೀಯ ಪರಿಭಾಷೆಯನ್ನು ಬದಲಿಸಿತು. ಆಗ ಶುರುವಾಯಿತು, ನಾವು ಆ ರಾಷ್ಟ್ರದ ಜನರನ್ನು ಸರ್ವಾಧಿಕಾರಿಯ ಕ್ರೂರ ಹಿಂಸೆಯಿಂದ ಮುಕ್ತಿಗೊಳಿಸಲು ಯುದ್ಧ ಸಾರಿದ್ದೇವೆ ಎಂಬ ಹೊಸ ಘೋಷಣೆ. ಆದರೆ ಮುಕ್ತಿ ಆದದ್ದು ಏನು ಮತ್ತು ಯಾರಿಗೆ? ಜಗತ್ತಿನ ಅತ್ಯಂತ ಮಹತ್ವದ ಪ್ರಾಚೀನ ವಸ್ತುಸಂಗ್ರಹಾಲಯವಾಗಿದ್ದ ಇರಾಕಿನ ವಸ್ತು ಸಂಗ್ರಹಾಲಯವನ್ನು ಅಮೆರಿಕಾ ಸೈನಿಕರ ಉಸ್ತುವಾರಿಯಲ್ಲಿ ನಾಶಪಡಿಸಲಾಯಿತು. ವಿಶ್ವಸಂಸ್ಥೆಯ ಆರ್ಥಿಕ ದಿಗ್ಬಂಧನದಿಂದ ೧೯೯೧ರಲ್ಲಿ ಸಾಯುವವರ ಒಂದು ಸಾವಿರದಲ್ಲಿ ೫೦ ಇದ್ದಿದ್ದು ೨೦೦೨ರ ಹೊತ್ತಿಗೆ ಸಾವಿರಕ್ಕೆ ೧೨೫ರಷ್ಟಾಯಿತು. ೨೦೦೨ರ ಹೊತ್ತಿಗೆ ಸುಮಾರು ೧೧ಲಕ್ಷ ಮಕ್ಕಳು ಜೀವಸತ್ವ ಆಹಾರದ ಕೊರತೆಯಿಂದ ಅಸುನೀಗಿದರು. ಒಂದು ದೇಶವನ್ನು ಹಾಳು ಮಾಡಬೇಕಾದರೆ ಅಲ್ಲಿನ ಸಂಸ್ಕೃತಿಯನ್ನು ಹಾಳುಗೆಡವಬೇಕು; ಸಂಸ್ಕೃತಿಯ ಸ್ಮರಣೆಗಳ ದಾಖಲೆಗಳನ್ನು ನಾಶ ಮಾಡಬೇಕು. ಅಮೆರಿಕಾ ಮಾಡಿದ್ದೂ ಇದೇ. ಇನ್ನೆಂದು ಪಡೆದಿಟ್ಟುಕೊಳ್ಳಲಾಗದ ವಸ್ತುಸಂಗ್ರಹಾಲಯವನ್ನು ನಾಶಮಾಡಿತು. ಯುದ್ಧದಲ್ಲಿ ಅಮೆರಿಕಾ ಸುರಿದ ೮೮,೫೦೦ ಟನ್ ಬಾಂಬ್‌ಗಳಲ್ಲಿ ಶೇಕಡಾ ೭೦ರಷ್ಟು ಬಾಂಬುಗಳು ನಾಗರಿಕರು ಇರುತ್ತಿದ್ದ ನಗರಗಳ ಮೇಲೆ ಬಿದ್ದವು. ಸತ್ತವರನ್ನು ಹೂಳಲು ೭೦ ಮೈಲು ಉದ್ದದಷ್ಟು ಕಾಲುವೆ ತೋಡಲಾಯಿತು.

## ಕಾರಣ

ನಾ ನಗುವುದೇ ಇಲ್ಲ
ಬುದ್ಧ ನಕ್ಕಂತೆ
ಯಾಕೆಂದರೆ, ಬುದ್ಧ ನಕ್ಕಾಗ
ಈ ಭೂಮಿಯ ಮೇಲೆ
ಬಂದೂಕು, ಬಾಂಬುಗಳು
ಇರಲಿಲ್ಲ.

ಶಿ. ಕಾ. ಬಡಿಗೇರ
ಸಾ. ಯತ್ನಟ್ಟ - ಭಾಗ್ಯನಗರ,
ಪಿನ್ - ೫೮೩ ೨೩೮, ಕೊಪ್ಪಳ ಜಿಲ್ಲೆ



ನಾಗರಿಕರ ಮೇಲೆ ಯುದ್ಧದ ತೀವ್ರ ದುಷ್ಪರಿಣಾಮಗಳ ಬಗ್ಗೆ ಅಮೆರಿಕಾಕ್ಕೆ ಕಿಂಚಿತ್ತು ಆಲೋಚನೆ ಇರಲಿಲ್ಲವೇ? ಯುದ್ಧದ ಆರಂಭದ ದಿನದ ಬಾಂಬ್‌ನಲ್ಲಿ ವಿದ್ಯುತ್ ಸಂಪರ್ಕ ನಾಶವಾಯಿತು. ವಿದ್ಯುತ್ ಇಲ್ಲದೇ ಗ್ಯಾಸ್, ಪಂಪ್, ನೀರು, ರೆಫ್ರಿಜಿರೇಟರ್ ಏನೂ ಇಲ್ಲದೇ ಜನ ಒದ್ದಾಡಿಹೋದರು. ಯುದ್ಧದ ಮೊದಲ ಪರಿಣಾಮ ಮಹಿಳೆಯರ ಮೇಲೆ. ಮಹಿಳೆಯರನ್ನು ಬಲಾತ್ಕಾರ ಮಾಡಲಾಯಿತು. ಅವರ ಪೋಷಕರು ಇದನ್ನು ಕಂಡು ಅವರಿಗೆ ಗೌರವಯುತ ಸಾವು (honour killing) ನೀಡಿದರು. ಬರಿಯ ವ್ಯವಸ್ಥಿತವಾದ ದರೋಡೆಯನ್ನು ನಾಗರಿಕ ಸಮಾಜದ ಮೇಲೆ ಅವ್ಯಾಹತವಾಗಿ ಯಾವ ಲಗಾಮಿಲ್ಲದೆ ಅಮೆರಿಕಾದ ಸೈನಿಕರು ನಡೆಸಿದರು.

ಸದ್ದಾಂನ ಅನೇಕ ವೈಪರೀತ್ಯಗಳ ನಡುವೆಯೇ ಆತ ಇರಾಕನ್ನು ಕಟ್ಟಿದ್ದ. ರಸ್ತೆ, ಶಾಲೆ, ಕಾಲೇಜು, ಆಸ್ಪತ್ರೆಗಳನ್ನು ಕಟ್ಟಿ ಇರಾಕನ್ನು ಮೊದಲ ಜಗತ್ತಿನ ಮಟ್ಟಕ್ಕೆ ತಂದಿದ್ದ. ಯಾವ ಮೂಲಭೂತವಾದಿಗಳ ಹಂಗೂ ಇಲ್ಲದೇ ಕಾಲೇಜು, ವಿಶ್ವವಿದ್ಯಾಲಯಕ್ಕೆ ಹುಡುಗಿಯರು ಹೋಗಿ ಬರುತ್ತಿದ್ದರು. ಉಳಿದ ಗಲ್ಫ್ ದೇಶದವರಂತೆ ಆತ ಹೊರಗಿನವರನ್ನು ಕರೆಸಿ ಇರಾಕ್ ಕಟ್ಟಿರಲಿಲ್ಲ. ತನ್ನ ಜನರಿಗೇ ತಾಂತ್ರಿಕವಾಗಿ ತರಬೇತಿ ಕೊಟ್ಟು ಇರಾಕು ದೇಶವನ್ನು ಕಟ್ಟಿದ್ದ. ಅದು ಬರೇ ದೇಶವಾಗಿರಲಿಲ್ಲ. ಅದೊಂದು ನಾಗರಿಕತೆಯಾಗಿತ್ತು.

ಇಂಥ ನಾಗರಿಕತೆಯನ್ನು – ಸದ್ದಾಂ ಎಷ್ಟು ಹೇಳಿದರೂ – ತನ್ನಲ್ಲಿ ಮಾರಕಾಸ್ತ್ರಗಳಿಲ್ಲ ಎಂದು ಎಷ್ಟು ಗೋಗರೆದರೂ – ೧೨೦೦೦ ಪುಟಗಳ ಅರೆಬಿಕ್‌ನಲ್ಲಿ ವಿವರವಾಗಿ ಬರೆದು ಕೊಟ್ಟರೂ – ವಿಶ್ವಸಂಸ್ಥೆಯ ಶೇಕಡಾ ೯೦ರಷ್ಟು ರಾಷ್ಟ್ರಗಳು ಯುದ್ಧವನ್ನು ವಿರೋಧಿಸಿದರೂ ಅಮೆರಿಕಾದ ಶಸ್ತ್ರಾಸ್ತ್ರ ತಪಾಸಣೆಯ ನಾಯಕ ಹ್ಯಾನ್ಸ್ ಬ್ಲಿಕ್ಸ್ ಅಮೆರಿಕ ತನ್ನ ಉಪಗ್ರಹದಿಂದ ತೆಗೆದ ೪೦೦ ಸ್ಥಳಗಳಲ್ಲಿ ೬೭೫ ಬಾರಿ ತಪಾಸಣೆ ಮಾಡಿ ಮಾರಕಾಸ್ತ್ರಗಳು ಇರಾಕಿನಲ್ಲಿ ಕಂಡು ಬಂದಿಲ್ಲ ಎಂದು ವರದಿ ಮಾಡಿದರೂ – ಬ್ರಿಟನ್‌ನ ವಿಜ್ಞಾನಿ ಡೇವಿಡ್ ಕೆಲ್ಲಿ ನಾಯಕತ್ವದ ತಂಡವೂ ಇದೇ ರೀತಿ ವರದಿ ಮಾಡಿದರೂ (ಆತ ಕೊನೆಗೆ ಆತ್ಮಹತ್ಯೆ ಮಾಡಿಕೊಂಡ, ವರದಿ ನೀಡುವ ಮೊದಲು) – ಮಿಲಿಯಾಂತರ ವಿವಿಧ ದೇಶದ ಮಾನವಹಕ್ಕುಗಳ ಪ್ರೇಮಿಗಳು, ಶಾಂತಿಪ್ರಿಯ ಜನಸಮುದಾಯದವರು ಯುದ್ಧವನ್ನು ವಿರೋಧಿಸಿ ಮುಷ್ಕರ, ಮೆರವಣಿಗೆ ಮಾಡಿದರೂ – ಯಾವ ಲಜ್ಜೆಯೂ ಇಲ್ಲದೇ ಇರಾಕ್ ದೇಶವನ್ನು – ಇರಾಕ್ ನಾಗರಿಕತೆಯನ್ನು ಅಮೆರಿಕ ಮತ್ತು ಬ್ರಿಟನ್ ಹಾಳುಮಾಡಿ – ಪ್ರಥಮ ಜಗತ್ತಿನ ವೈಭವ, ಅವಕಾಶಗಳಿದ್ದವರನ್ನು ಮೂರನೇ ಜಗತ್ತಿನ ದಟ್ಟ ದರಿದ್ರರನ್ನಾಗಿ ಮಾಡಿದ್ದು ಮಾನವಕುಲಕ್ಕೆ ಮಾಡಿದ ಮಹಾದ್ರೋಹವಾಗಿದೆ. ಹನ್ನೆರಡು ವರುಷಗಳಿಂದ ನಿರಂತರವಾಗಿ ಅಮೆರಿಕ ಮಾಡಿದ ಅಪಪ್ರಚಾರಕ್ಕೆ ಜಯ ಸಿಕ್ಕಿದೆ. ವಿಶ್ವಸಂಸ್ಥೆ ತನ್ನ ಜೀವಶಕ್ತಿಯನ್ನು ಕಳೆದುಕೊಂಡಿದ್ದು ಜಗತ್ತಿನ ಪ್ರಜ್ಞಾವಂತ ಜನರನ್ನು ಚಿಂತಾಕ್ರಾಂತರನ್ನಾಗಿಸಿದೆ.

ಡಾ. ಜಯಪ್ರಕಾಶ ಮಾವಿನಕುಳಿ
[illegible]



**ಪ್ರತಿರೋಧ**

ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅನು: ಜಿ. ಕುಮಾರಪ್ಪ

**ಪುಟ : ೧೪೪** **ಬೆಲೆ : ರೂ. ೫೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಇವು ದೇವಿಪ್ರಸಾದ್ ಚಟ್ಟೋಪಾಧ್ಯಾಯ ಸಂಪಾದಿಸಿದ ಬಂಗಾಳದ ಶ್ರೇಷ್ಠ ವಿಚಾರವಾದಿಗಳ ಹಾಗೂ ಕೆಲವು ವಿಜ್ಞಾನಿಗಳ ವಿದ್ವತ್ಪೂರ್ಣ ಲೇಖನಗಳು. ವೇದಕಾಲೀನ ಸಮಾಜದ ನೈಜ ಚಿತ್ರಣವನ್ನು ಸಾಕಷ್ಟು ಓದಿನಿಂದ ಸಂಗ್ರಹಿಸಿ ಜನಸಾಮಾನ್ಯನವರೆಗೂ ತಲುಪಿಸಿ ವೈಚಾರಿಕ ಆಂದೋಲನವೊಂದಕ್ಕೆ ಕಾರಣರಾದವರಲ್ಲಿ ಬಂಗಾಳದ ಪ್ರತಿಭಾವಂತರು ಸೇರಿದ್ದಾರೆ. ಮೂಢ ಆಚರಣೆಗಳ ಬಗ್ಗೆ ಬೌದ್ಧಿಕ ಅಂಧಕಾರದ ಬಗ್ಗೆ ಪ್ರತಿರೋಧ ವ್ಯಕ್ತಪಡಿಸುತ್ತಲೇ ಜನರನ್ನು ಎಚ್ಚರಿಸಿದ್ದಾರೆ. ಪ್ರಾಚೀನ ಭಾರತದ ತತ್ವಶಾಸ್ತ್ರ - ಇತಿಹಾಸದ ಬಗ್ಗೆ ಒಂದು ಚರ್ಚೆಯನ್ನೊಳಗೊಂಡ ಲೇಖನಗಳು.

**ಆಷಾಢದ ಮಳೆ** (ಕಥಾ ಸಂಕಲನ)



ಕೆ. ಎಸ್. ಭಗವಾನ್

**ಪುಟ : ೧೪೩** **ಬೆಲೆ : ರೂ. ೬೦**

**ಧಾತ್ರಿ ಪ್ರಕಾಶನ**, 'ಚೈತ್ರ', ೧೫೫೫, ಪೂರ್ವಾಂತ್ಯ ರಸ್ತೆ, ೯ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೬೯

ಈ ಲೋಕದ ವ್ಯವಹಾರಗಳು ತನ್ನ ಪಾಡಿಗೆ ತಾನು ನಡೆಯುತ್ತಲೇ ಇರುತ್ತವೆಯೋ ನಾವೇ ನಮಗೆ ಬೇಕಾದಂತೆ ನಡೆಸಿಕೊಳ್ಳುತ್ತೇವೆಯೋ ಎಂಬ ಪ್ರಶ್ನೆ ಇಲ್ಲಿನ ಕಥೆಗಳಲ್ಲಿ ಇಣುಕು ಹಾಕುತ್ತದೆ. ಮನುಷ್ಯ ಸಂಬಂಧಗಳು ಎಲ್ಲೋ ಪ್ರಾರಂಭವಾಗಿ ಪ್ರವಾಹದಂತೆ ಎಲ್ಲಿಯೋ ಗುರಿಮುಟ್ಟುತ್ತವೆ. ಮಧ್ಯಮ ವರ್ಗದ ಜನರ ಬದುಕಿನ ಮಧ್ಯದಿಂದಾರಿಸಿದ ಸಾಂಸಾರಿಕ ಚಿತ್ರಣಗಳು ಕಥೆಗಳಾಗಿ ಉಳಿಯದೆ ಅಲ್ಲಿಯ ಇಲ್ಲಿಯ ನೈಜ ಘಟನೆಗಳೇ ಆಗಿಬಿಡುತ್ತವೆ. ಬದುಕನ್ನೇ ಕಥಾ ರೂಪದಲ್ಲಿ ತೋರಿಸುವ ಎಂಟು ಕಥೆಗಳ ಸಂಕಲನವಿದು.



**ನೆರಳು** (ಸಣ್ಣ ಕಥೆಗಳು)

ಭಾರತೀಪುತ್ರ

**ಪುಟ : ೯೮** **ಬೆಲೆ : ರೂ.೮೦**

**ಭಾರತೀಯ ಸಾಹಿತ್ಯ**, ಹಳೇ ಅಂಚೆ ಕಛೇರಿ ರಸ್ತೆ ನಾಗಮಂಗಲ - ೫೭೧ ೪೩೨

ಇದು ಹತ್ತು ಸಣ್ಣ ಕಥೆಗಳನ್ನೊಳಗೊಂಡ ಸಂಕಲನ. ಸಾಮಾನ್ಯವಾಗಿ ಯಾವುದೇ ಉದ್ವೇಗವಿಲ್ಲದೆ ನಿಧಾನವಾಗಿ ಓದಿಸಿಕೊಂಡು ಹೋಗುವ ಕಥೆಗಳಿವು. ವಿವಿಧ ಬಗೆಯ ಮನೋಭಾವನೆಯ ಜನರ ರೀತಿನೀತಿಗಳು ಸ್ಪಷ್ಟವಾಗಿ ಗೋಚರಿಸುತ್ತ ಸಾಗುತ್ತವೆ. ಈ ಕಥೆಗಳಿಗೆ ಪೂರಕವಾದ ಸಾಮಗ್ರಿಯನ್ನು ಹಿಮಾಲಯ - ಕಾಶ್ಮೀರ ಮುಂತಾದ ಉತ್ತರ ಭಾರತದ ತಮ್ಮ ಪ್ರವಾಸದ ಕಾಲದಲ್ಲಿ ದೊರಕಿಸಿಕೊಂಡರೆಂದು ಲೇಖಕರು ತಿಳಿಸುತ್ತಾರೆ. ಅಲ್ಲಿನ ನಿಸರ್ಗದ ರಮ್ಯತೆಗೆ ಶಾಂತ ಪರಿಸ್ಥಿತಿಗೆ ಮಾತ್ರ ಇಲ್ಲಿನ ಕಥೆಗಳು ಸ್ಪಂದಿಸಿವೆ ಮತ್ತು ರೂಪುಗೊಂಡಿವೆ.

**ಉರ್ವಿ** (ನಾಟಕ)



ಆನಂದ್ ಋಗ್ವೇದಿ

**ಪುಟ : ೫೬** **ಬೆಲೆ : ರೂ. ೨೫**

**ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್**, ಕೃಷ್ಣಾಪುರ ದೊಡ್ಡಿ, ನಂ. ೧೧೯, ೩ನೇ ತಿರುವು, ೮ನೇ ಮುಖ್ಯರಸ್ತೆ, ಬೆಂ - ೪೦

ಪುರಾಣಗಳಲ್ಲಿ ನಾವು ಓದುತ್ತಿರುವ ವಿಷಯಗಳಿಗೂ ಇಂದಿನ ಈ ನಮ್ಮ ನೆಲದ ಮೇಲೆ ನಡೆಯುವ ಘಟನೆಗಳಿಗೂ ಸಾಮ್ಯತೆ ಇದೆಯೇ ? ಅವುಗಳೆಲ್ಲಾ ಮರುಕಳಿಸುವಂತೆ ನಮಗೆ ಅನ್ನಿಸುತ್ತಿದೆಯೇ ? ಕ್ರೌರ್ಯ-ಹಿಂಸೆ-ಶಾಂತಿ-ಪ್ರೇಮ ಮಾತ್ರವಲ್ಲ ಉತ್ತಮ ಹಾಗೂ ಅಧಮ ವಿಚಾರಗಳೆಲ್ಲವೂ ಎಲ್ಲ ಕಾಲದಲ್ಲೂ ಮನುಷ್ಯನನ್ನು ಕಾಡಿವೆ. ದುರಹಂಕಾರ ದರ್ಪ ಯಾವ ರಾಜಮನೆತನದವರನ್ನೂ ಬಿಟ್ಟಿಲ್ಲವಾದ್ದರಿಂದಲೇ ಖಾಂಡವ ದಹನ ರಾಜಸೂಯದಂಥ ಅತಿರೇಕಗಳು ವಿಜೃಂಭಿಸಿದವು. ಪುರಾಣದ ಪಾತ್ರಗಳನ್ನು ಮುಂದಿಟ್ಟು ವಾಸ್ತವವನ್ನೂ ತಿಳಿಸುವ ಒಂದು ನಾಟಕ.

**ಜಾಜಿ ಗಿಡದ ಗುಬ್ಬಿಗಳು** (ಪ್ರಬಂಧಗಳು)



ಜಯಾ ಯಾಜಿ ಶಿರಾಲಿ

**ಪುಟ : ೧೦೭** **ಬೆಲೆ : ರೂ. ೪೫**

**ಸೀತಾಕೃಷ್ಣ ಪ್ರಕಾಶನ**, ಹೌಸಿಂಗ್ ಬೋರ್ಡ್, ಜ್ಯೋತಿ ನಗರ, ಚಿಕ್ಕಮಗಳೂರು - ೫೭೭ ೧೦೨

ನಮ್ಮಂತೆಯೇ ಪ್ರಕೃತಿಯ ಭಾಗವಾಗಿರುವ ಗಿಡ ಮರ ಪ್ರಾಣಿ ಪಕ್ಷಿಗಳ ಜೊತೆಗೆ ಒಡನಾಟ ಅದೆಷ್ಟು ಸಂತೋಷ ಕೊಡಬಲ್ಲ ವಿಷಯವೆಂದು ನಮಗೆ ಈ ಪುಸ್ತಕದ ಮೂಲಕ ಖಂಡಿತ ಅರಿವಾಗಬಹುದು. ಪ್ರಕೃತಿ ಪ್ರೇಮ ಸಹಬಾಳ್ವೆ ಪರಸ್ಪರ ಸಹಕಾರ ಇವು ಮನುಷ್ಯನಿಂದ ದೂರವಾಗುತ್ತಿರುವ ಇಂದಿನ ಸನ್ನಿವೇಶಗಳಿಂದ ನೊಂದು ಬರೆದ ಈ ಪ್ರಬಂಧಗಳು ಒಂದು ಮಾನವೀಯ ನೆಲೆಯಲ್ಲಿ ಯೋಚಿಸುವಂತೆ ಮಾಡಬಲ್ಲವು. ಗುಬ್ಬಿಮರಿಗೆ ಒಂದು ಕಾಳು ಎಸೆಯಲು ಹಿಂತೆಗೆಯುವ ಮನುಷ್ಯನ ಗುಣದ ಬಗ್ಗೆ ಗಂಭೀರವಾದ ಚಿಂತನೆ ಅವಶ್ಯವಾಗಿದೆ.



**ತಿಂಗಳ ಬೆಳಕು** (ಕಥಾ ಸಂಕಲನ)

ಶಾಂತಾರಾಮ ಸೋಮಯಾಜಿ

**ಪುಟ : ೧೫೮** **ಬೆಲೆ : ರೂ. ೪೦**

**ಪುಸ್ತಕ ನಿಧಿ**, ಲಕ್ಷ್ಮೀ ಸದನ, ಗಾವಳಿ, ಹಳ್ನಾಡಿ-ಹರ್ಕಾಡಿ ಅಂಚೆ, ಕುಂದಾಪುರ - ೫೭೬ ೨೧೦

ಮೋಹಕ ಭಾಷೆ ಮಂಗಳೂರು ಕನ್ನಡದಲ್ಲಿ ಇಲ್ಲಿನ ಕಥೆಗಳನ್ನೋದುವುದೇ ಒಂದು ಸೊಗಸು. ಪ್ರಖರ ಸೂರ್ಯನ ಬೆಳಕನ್ನು ಚಂದ್ರ ತಣಿಸಿಕೊಟ್ಟಂತೆ ಸೋಮಯಾಜಿ ತನ್ನ ಕಥೆಗಳಲ್ಲಿನ ತೀಕ್ಷ್ಣ ಸಾಮಾಜಿಕ ತುಮುಲಗಳನ್ನು ತಿಂಗಳ ಬೆಳಕಿನಂತೆ ಆವೇಶವಿಲ್ಲದೆ ಪರಿಚಯಿಸಬಲ್ಲರು. ಕ್ರೌರ್ಯದ ಸುತ್ತ ಹೆಣೆದ ಇಲ್ಲಿನ ಒಂದು ಕಥೆ ''ಎಂದೂ ಬೆಳೆಯದ ಹುಡುಗ'' ಮನ ಕಲಕುವಂತಿದ್ದು ಎಂದೂ ತೊಲಗದ ಮೌಢ್ಯಕ್ಕೆ ದನಿಯಾಗಿ ಎಂದೆಂದಿಗೂ ಮರೆಯಲಾಗದ ಕಥೆಯಾಗಿ ನಮ್ಮೊಂದಿಗಿರುತ್ತದೆ. ವೈವಿಧ್ಯಮಯ ಬದುಕಿನ ನೈಜ ಅನಾವರಣ.

**ಕರ್ನಾಟಕದ ಹಿಂದುಸ್ತಾನಿ ಸಂಗೀತಗಾರರು**



ಸದಾನಂದ ಕನವಳ್ಳಿ

**ಪುಟ : ೨೩೮** **ಬೆಲೆ : ರೂ. ೧೦೦**

**ಅಲ್ಲಮ ಪ್ರಭು ಜನಕಲ್ಯಾಣ ಸಂಸ್ಥೆ**, ಸಿದ್ಧ ಸಂಸ್ಥಾನ ಮಠ, ಚಿಂಚಣಿ - ೫೯೧ ೨೭೨, ತಾ। ಚಿಕ್ಕೋಡಿ, ಜಿ। ಬೆಳಗಾವಿ

ಹಿಂದುಸ್ತಾನಿ ಸಂಗೀತ ಕ್ಷೇತ್ರದಲ್ಲಿ ಸಿದ್ಧಿ-ಪ್ರಸಿದ್ಧಿಯನ್ನು ಪಡೆದು ಅನೇಕ ಬಿರುದುಗಳನ್ನೂ ಸನ್ಮಾನ ಪ್ರಶಸ್ತಿಗಳನ್ನೂ ವಿಶೇಷ ಪರಿಶ್ರಮದಿಂದ ಗಳಿಸಿದ ಕರ್ನಾಟಕದ ಮಹಾನ್ ಪ್ರತಿಭೆಗಳನ್ನು ಪರಿಚಯಿಸಲಾಗಿದೆ. ಸಂಗೀತವನ್ನು ಯಾವುದೇ ದೇಶ ಪ್ರದೇಶದ ಗಡಿಭಾಗಗಳು ಬಂಧಿಸಿಡಲಾರವು. ಅವೆಲ್ಲವನ್ನೂ ಮೀರಿ ಸಂಗೀತ ಬೆಳೆಯುತ್ತದೆ ಮತ್ತು ಪ್ರತಿಭೆಗೆ ಒಲಿಯುತ್ತದೆ. ಇಲ್ಲಿ ಕೇವಲ ಸಂಗೀತಗಾರರನ್ನು ಮಾತ್ರ ಕರ್ನಾಟಕದವರೆಂದು ಗುರುತಿಸಿ ಅವರ ಸಾಧನೆಯೊಂದಿಗೆ ಸಂಗೀತದ ಘರಾಣೆಗಳನ್ನು ಸಹ ವಿವರವಾಗಿ ನೀಡಲಾಗಿದೆ.



**ಹತ್ತಿರದ ಮಾತು** (ಕವನ ಸಂಕಲನ)

ಸತ್ಯನ್ ದೇರಾಜೆ

**ಪುಟ : ೭೬** **ಬೆಲೆ : ರೂ. ೬೦**

**ಸುಮನಸಾ ವಿಚಾರ ವೇದಿಕೆ** , ಚೊಕ್ಕಾಡಿ - ೫೭೪ ೨೧೨ ಸುಳ್ಯ ತಾಲೂಕು, ದ.ಕ.

ಮೂವತ್ತು ವರ್ಷಗಳಿಂದಲೂ ಪದ್ಯ ಬರೆಯುತ್ತಿರುವ ಸತ್ಯನ್ ದೇರಾಜೆ ಅವರ ಪ್ರಥಮ ಕವನ ಸಂಕಲನ ಇತ್ತೀಚೆಗಷ್ಟೇ ಪ್ರಕಟವಾಗಿದೆ. ಭೂಮಿ ತಾಯಿ ಸೇವೆಗೈಯುತ್ತ ವೃತ್ತಿಯಲ್ಲಿ ಕೃಷಿಕರಾಗಿದ್ದು ಪ್ರವೃತ್ತಿಯಲ್ಲಿ ಸಾಹಿತ್ಯ ಸೇವೆಯನ್ನೂ ಮಾಡುತ್ತಿರುವ ದೇರಾಜೆ ಅವರದ್ದು ತುಂಬ ಸಂಕೋಚದ ಮನೋಭಾವ. ಪ್ರಕೃತಿಯ ಮಡಿಲಲ್ಲಿ ನೈಜ ಪರಿಸರದಲ್ಲಿ ಸಹಜವಾಗಿ ಮೂಡಿಬಂದ ಭಾವನೆಗಳನ್ನಷ್ಟೇ ಅವರು ತಮ್ಮ ಕವಿತೆಗಳಲ್ಲಿ ಹಿಡಿದಿಟ್ಟು ತೃಪ್ತಿಗೊಂಡಿದ್ದಾರೆ. ಇಲ್ಲಿನ ಕವಿತೆಗಳೇ ತನ್ನ ಕಣ್ಣುಗಳೆಂದು ಅವರು ಹೇಳಿಕೊಂಡಿದ್ದಾರೆ. — **ಇಂದಿರಾ ಕುಮಾರಿ**

# ಅನುಪಮಾ

## ಒಂದು ನೆನಪು



ಡಾ|| ಸಿ. ವಿ. ವತ್ಸಲಾ

**ಹ**ತ್ತು, ಹನ್ನೆರಡು ವರ್ಷಗಳ ಹಿಂದಿನ ಘಟನೆ ಇರಬೇಕು. ವರ್ಷ, ತಿಂಗಳು, ದಿನ ಎಲ್ಲವೂ ಮರೆತಂತಿದೆ. ಬೆಂಗಳೂರು ದೂರದರ್ಶನದಲ್ಲಿ ಕನ್ನಡ ಕಾರ್ಯಕ್ರಮಗಳು ಪ್ರಾರಂಭವಾದ ದಿನಗಳು. ದೂರದರ್ಶನದಿಂದ ನನಗೆ ''ಮಹಿಳಾ ಸಾಹಿತ್ಯದ ನೆಲೆ ಬೆಲೆ'' – ವಿಷಯವನ್ನು ಕುರಿತು 'ಭಗಿನಿ' ಕಾರ್ಯಕ್ರಮದಲ್ಲಿ ಕನ್ನಡದ ಪ್ರಮುಖ ಲೇಖಕಿಯ ಸಂದರ್ಶನ ನಡೆಸಬೇಕೆಂಬ ಸೂಚನೆ ಬಂದಿತು. ಈ ಸಂದರ್ಭದಲ್ಲಿ ಯಾರನ್ನು ಸಂದರ್ಶಿಸಬೇಕೆಂಬ ತೀರ್ಮಾನವನ್ನು ನನಗೇ ಬಿಟ್ಟಿದ್ದರು. ನಾನು ದೂರದರ್ಶನದವರಿಗೆ 'ಅನುಪಮಾ ನಿರಂಜನ'ರ ಹೆಸರನ್ನು ಸೂಚಿಸಿದೆ. 'ಹಾಗೆಯೇ ಆಗಲಿ, ನೀವು ಭೇಟಿಯಾಗಿ ಅವರಿಗೆ ಅನುಕೂಲವಾದ ವೇಳೆ, ದಿನಾಂಕ ಗೊತ್ತುಪಡಿಸಿ, record ಮಾಡಿಕೊಳ್ಳೋಣ' ಎಂದರು.

ನಾನು ವೃತ್ತಿಯಲ್ಲಿ ಕನ್ನಡ ಉಪನ್ಯಾಸಕಿ. ವಿದ್ಯಾರ್ಥಿ ದೆಸೆಯಿಂದಲೂ ಅನುಪಮಾ ನಿರಂಜನರ ಸಾಹಿತ್ಯವನ್ನು ತಪ್ಪದೆ ಓದುತ್ತಿದ್ದವಳು. ಒಂದು ರೀತಿಯಲ್ಲಿ ಅವರ ಅಭಿಮಾನಿಯೇ. ಅದರಲ್ಲಿಯೂ ಅನುಪಮಾರ 'ಮಾಧವಿ', ನಿರಂಜನರ 'ಮೃತ್ಯುಂಜಯ', 'ಚಿರಸ್ಮರಣೆ' ಕಾದಂಬರಿಗಳನ್ನು ವಿದ್ಯಾರ್ಥಿಗಳಿಗೆ ಪಾಠ ಮಾಡುವಾಗ ಆ ದಂಪತಿಗಳನ್ನು ಕಾಣಬೇಕೆಂಬ ಅದಮ್ಯ ಬಯಕೆ ನನ್ನ ಮನದಲ್ಲಿ ಮೂಡಿತ್ತು. ಯೋಗಾಯೋಗವೆಂಬಂತೆ ಅವರನ್ನು ಭೇಟಿಯಾಗುವ ಸಂದರ್ಭ ತಾನಾಗಿ ಒದಗಿಬಂದಿತ್ತು.

'ಅನುಪಮಾ'ರ ವಿಳಾಸ ಹಿಡಿದು ಅವರ ಮನೆ 'ಕಥೆ'ಯನ್ನು ಹುಡುಕಿಕೊಂಡು ಮಧ್ಯಾಹ್ನದ ಉರಿಬಿಸಿಲಿನಲ್ಲಿ ಜಯನಗರದ ರಸ್ತೆಗಳಲ್ಲಿ ಅಲೆದೆ. ಕೊನೆಗೂ ಅವರ ಮನೆ ಪತ್ತೆ ಹಚ್ಚಿದೆ. ಮನೆಯ ಸುತ್ತ ಅಚ್ಚುಕಟ್ಟಾಗಿ ಸುಂದರವಾಗಿ ಬೆಳೆದ ಹೂ ಗಿಡಗಳು.

ಮನೆಯ ಬಾಗಿಲು ತೆರೆದೇ ಇತ್ತು. ಮನೆಯಲ್ಲಿ ಎತ್ತ ನೋಡಿದರೂ ಎಲ್ಲವೂ ಅಚ್ಚುಕಟ್ಟು, ಶಿಸ್ತಿನಿಂದ ಕೂಡಿದಂತೆ ಇತ್ತು. ನಾನು ಮನೆಯ ಒಳಗೆ ಪ್ರವೇಶಿಸುತ್ತಿದ್ದಂತೆ ಮುಂಬಾಗಿಲಿನ ಎದುರು ಕೋಣೆಯಿಂದ ನಿಧಾನವಾಗಿ ಗಾಲಿ ಕುರ್ಚಿಯನ್ನು ದೂಡಿಕೊಂಡು ನಿರಂಜನರು ಹೊರಗೆ ಬಂದರು. ಮಧ್ಯಾಹ್ನದ ಹೊತ್ತಿನಲ್ಲಿ ಮನೆಯ ಹೊರಗಿನ ಮರಗಿಡಗಳಿಂದ ಕೋಗಿಲೆಯ ಮಧುರ ಧ್ವನಿ ಬಿಟ್ಟರೆ ಎಲ್ಲವೂ ನೀರವ ; ನಿಶ್ಚೇಷ್ಟಿತ. ಒಂದು ರೀತಿಯ ಉಸಿರುಗಟ್ಟುವ ವಾತಾವರಣ. ಒಂದೆರಡು ನಿಮಿಷ, ಇಲ್ಲಿ ಯಾರನ್ನು ಹೇಗೆ ಮಾತನಾಡಿಸಬೇಕೆಂಬ ದಿಕ್ಕೇ ತೋಚದೆ ಅಲ್ಲಿಯೇ ನಿಂತಿದ್ದೆ. 'ನಿರಂಜನ'ರು ತಾವು ಕುಳಿತಿದ್ದ ಕುರ್ಚಿಗೇ ಒಮ್ಮೆ ಕೋಲಿನಿಂದ ಬಡಿದು ತಮ್ಮ ಮಗಳನ್ನು ಕರೆದಂತೆನಿಸಿತು. ಒಂದೆರಡು ಸೆಕೆಂಡಿನಲ್ಲಿಯೇ ಅವರ ಮಗಳು ಸೀಮಂತಿನಿ ಹೊರಗೆ ಬಂದು ''ಯಾರನ್ನು ಕಾಣಲು ಬಂದಿದ್ದೀರಿ'' ಎಂದು ಪ್ರಶ್ನಿಸಿದಾಗ ಸಂಕ್ಷಿಪ್ತವಾಗಿ ನಾನು ಬಂದ ಉದ್ದೇಶ ತಿಳಿಸಿದೆ. ಪಕ್ಕದ ಕೋಣೆಯಲ್ಲಿ ಮಂಚದ ಮೇಲೆ ಕುಳಿತಿದ್ದ 'ಅನುಪಮಾ'ರ ಬಳಿಗೆ ಆಕೆ ಕರೆದುಕೊಂಡು ಹೋದಳು. ಅಲ್ಲಿಯೇ ಸಮೀಪ ಇದ್ದ ಕುರ್ಚಿಯ ಮೇಲೆ ಕುಳಿತುಕೊಳ್ಳುವಂತೆ ಸೂಚಿಸಿದಳು. ಈಗಾಗಲೇ ಅವರ ಆರೋಗ್ಯ ತೀರ ಹದಗೆಟ್ಟಿದ್ದು ಕೈತುಂಬಾ ಮಾತ್ರೆಗಳನ್ನು ನುಂಗುವುದಕ್ಕಾಗಿ ಹಿಡಿದಿದ್ದರು. ಮಗಳು ಕೊಟ್ಟ ನೀರಿನೊಂದಿಗೆ ಮಾತ್ರೆಗಳನ್ನು ನುಂಗಿದರು.

ಇಂತಹ ಮಧ್ಯಾಹ್ನ ಅವರ ಈ ಸ್ಥಿತಿಯಲ್ಲಿ ನಿದ್ದೆಗೆ, ವಿಶ್ರಾಂತಿಗೆ ಅವರಿಗೆ ತೊಂದರೆ ಕೊಟ್ಟೆನೇನೋ ಎಂಬ ಚಿಂತೆ ನನಗೆ. ಅದನ್ನು ಅರ್ಥ ಮಾಡಿಕೊಂಡವರಂತೆ ''ನೀವು ಯಾಕೆ ಬಂದದ್ದು? ಯಾವ ಸಂಕೋಚವಿಲ್ಲದೆ ಮಾತಾಡಿ'' ಎಂದು ಮಗಳನ್ನು ಹತ್ತಿರ ಕರೆದು ಕಿವಿಯಲ್ಲಿ ಏನೋ ಪಿಸುಗುಟ್ಟಿದರು. ಆಕೆ ಅಲ್ಲಿಂದ ಹೊರಟುಹೋದಳು.

ನಾನು ''ಮಹಿಳಾ ಸಾಹಿತ್ಯದ ನೆಲೆ ಬೆಲೆ'' ಸಂದರ್ಶನಕ್ಕಾಗಿ ತಮ್ಮನ್ನು ಭೇಟಿಯಾಗಲು ಬಂದದ್ದು ಎಂದಾಗ ''ಈ ಸ್ಥಿತಿಯಲ್ಲಿ ನಾನು ಯಾವ ಸಂದರ್ಶನಕ್ಕೂ ಬರಲಾರೆ. ಬೇಕಿದ್ದರೆ ದೂರದರ್ಶನದವರು ಇಲ್ಲಿಗೇ ಬಂದು record ಮಾಡಿಕೊಳ್ಳಲಿ. ಅವರಿಗೆ ಹೇಳಿಬಿಡಿ'' ಎಂದವರೇ ತಕ್ಷಣ – ''ಇದರಿಂದ ನಿಮಗೇನೂ ಬೇಸರ ಬೇಡ. ಈ ವಿಚಾರಕ್ಕೆ ಸಂಬಂಧಿಸಿದ ಪ್ರಶ್ನೆಗಳಿದ್ದರೆ ನೀವು ನನಗೆ ಕೊಡಿ. ಅದಕ್ಕೆ ನನಗೆ ತಿಳಿದಂತೆ ಉತ್ತರಿಸುತ್ತೇನೆ. ನನ್ನ ಅಭಿಪ್ರಾಯಗಳನ್ನು ನೀವು ಯಾರಿಗೆ ಬೇಕಾದರೂ ಹೇಳಬಹುದು'' ಎಂದರು. ಅವರ ಔದಾರ್ಯಕ್ಕೆ ನಾನು ದಂಗಾದೆ ! ಅವರ ಅಭಿಪ್ರಾಯ ದಾಖಲಿಸುವುದಕ್ಕೆ ಇದೊಂದು ಸದವಕಾಶವೆಂದೇ ಅವರ ಮಾತುಗಳು ನನ್ನ ನೆನಪಿನಲ್ಲಿ ಉಳಿದಿರುವುದನ್ನು ದಾಖಲಿಸುವ ಪ್ರಯತ್ನ ಮಾಡಿದ್ದೇನೆ.

ನಾನು ಅವರ ಎಲ್ಲ ಕಾದಂಬರಿಗಳನ್ನು ಓದಿರುವುದಾಗಿ ತಿಳಿಸಿದೆ. ''ಮಹಿಳೆಯರ ಸಾಹಿತ್ಯ ಅಡಿಗೆ ಮನೆಯ ಸಾಹಿತ್ಯ ಎಂದು ಟೀಕಿಸುವ ವಿಮರ್ಶಕರೇ ಬಹಳ ಮಂದಿ ಈಗ ಇದ್ದಾರೆ. ನೀವು ಮೊದಲಿನಿಂದಲೂ ಸಮಾಜದಲ್ಲಿ ಮಹಿಳೆಯ ಸ್ಥಾನಮಾನದ ಬಗ್ಗೆ, ಆಕೆಯು ಸಮಾಜದಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ, ಆಕೆಗೆ ಸಮಾಜದಿಂದ ಆಗುತ್ತಿರುವ ಶೋಷಣೆ ಬಗ್ಗೆ, ಆಕೆಯ ದೌರ್ಬಲ್ಯಗಳ ಬಗ್ಗೆ ತುಂಬಾ ಯಥಾವತ್ತಾಗಿ ಬರೆಯುತ್ತಿದ್ದರೂ ನಿಮ್ಮಂತಹ ಲೇಖಕಿಯರ ಕಾದಂಬರಿಗಳನ್ನು ಹೈಲೈಟ್ ಮಾಡದೆ ಇರುವುದೇಕೆ ?'' ಎಂದು ಪ್ರಶ್ನಿಸಿದೆ. ಈ ಪ್ರಶ್ನೆಗೆ ಅವರ ಮುಖ ತುಂಬಾ ಗಂಭೀರವಾಯಿತು.

''ಎಂತಹ ಒಳ್ಳೆಯ ಪ್ರಶ್ನೆ ಇದು ವತ್ಸಲಾ... ನಿಮ್ಮ ಮಾತು ನೂರಕ್ಕೆ ನೂರು ನಿಜ. ಮಹಿಳಾ ಸಾಹಿತ್ಯ ಅಡಿಗೆ ಮನೆ ಸಾಹಿತ್ಯ ಎಂದು ಮೂಗು ಮುರಿಯುವ ವಿಮರ್ಶಕರು ಬಹುಮಂದಿ ಇದ್ದಾರೆ. ಆದರೆ ಅವರಿಗೆ ಭಾರತೀಯ ಪರಿಸರದಲ್ಲಿ ಗೃಹಿಣಿಯಾದ ಮಹಿಳೆ ತನ್ನ ಇತಿಮಿತಿಯಲ್ಲಿಯೇ, ತನ್ನ ಕೌಟುಂಬಿಕ ಅನುಭವಗಳನ್ನು ಯಥಾವತ್ತಾಗಿ, ಸಹಜವಾಗಿ, ಪ್ರಾಮಾಣಿಕವಾಗಿ ಬರೆದಿದ್ದಾಳೆ ಎಂಬುದನ್ನೇ ಮರೆತುಬಿಡುತ್ತಾರೆ. ಇದು ಪುರುಷ ಪ್ರಧಾನ ವಿಮರ್ಶಕರಿಂದ ಲೇಖಕಿಯರಿಗೆ ಆಗುತ್ತಿರುವ ಅನಾದರ, ಪೂರ್ವಗ್ರಹ... ಲೇಖಕಿಯರ ಬರಹಗಳಿಗೆ ಅವರು ಕೊಡುತ್ತಿರುವ ಉಡುಗೊರೆ !'' ಎಂದು ಖಾರವಾಗಿಯೇ ಹೇಳಿದಾಗ ಅವರ ಮನಸ್ಸಿನ ನೋವು ನನಗೆ ಅರಿವಾಗಿ ಬಹಳ ಬೇಸರವಾಯಿತು. ಅವರ ಮಾತಿನಲ್ಲಿ ಎಂತಹ ಕಟು ವಾಸ್ತವ ಅಡಗಿದೆ ಎಂಬುವುದನ್ನು ಎಲ್ಲ ವಿಮರ್ಶಕರೂ, ಲೇಖಕರೂ ತಿಳಿಯಬೇಕು.

ನಿಜ ; ಅನುಪಮಾ ಅವರು ಬಹುಮಟ್ಟಿಗೆ ನಿರಂಜನ ಅವರ 'ಕಮ್ಯುನಿಸಂ'ನಿಂದ ಪ್ರೇರಿತರಾಗಿ ತಮ್ಮ ಬರವಣಿಗೆಯ ಉದ್ದಕ್ಕೂ ಸಮಾಜದಲ್ಲಿ ಮಹಿಳೆಯರಿಗೆ ಆಗುತ್ತಿರುವ ಅನ್ಯಾಯದ ವಿರುದ್ಧ ಪ್ರತಿಭಟನೆಯ ಧ್ವನಿ ಎತ್ತಿದವರು. ಅವರ 'ಎಳೆ', 'ಘೋಷ', 'ಆಳ' ಕೃತಿಗಳಲ್ಲಿ ಕಂಡುಬರುವ ಮಧ್ಯಮ ಮತ್ತು ಕೆಳವರ್ಗದ ಜನ ಶೋಷಣೆಗೆ ಗುರಿಯಾಗುವ ಚಿತ್ರಣಗಳು ಎಷ್ಟು ಸಮರ್ಥವಾಗಿ ಚಿತ್ರಿತವಾಗಿವೆ !

ಅವರು ಮಾತು ಮುಂದುವರೆಸುತ್ತಾ ''ನೋಡಿ ಕನ್ನಡದ ಪ್ರತಿಷ್ಠಿತ ಪತ್ರಿಕೆಗೆ ನನ್ನ ಕಾದಂಬರಿಯನ್ನು ವಿಮರ್ಶೆಗೆ ಕಳಿಸಿದರೆ ವಿಮರ್ಶೆ ಮಾಡಿಸುವಷ್ಟು ಸೌಜನ್ಯ ಅವರಿಗಿರಲಿಲ್ಲ. ಆ ಪತ್ರಿಕೆಗೆ ಬರೆಯುವ ವಿಮರ್ಶಕರಿಗೆ ನಮ್ಮಂತಹವರ ಕಾದಂಬರಿಗಳು ಕಾದಂಬರಿಗಳೇ ಅಲ್ಲ. ಇಂತಹ ವಾತಾವರಣದಲ್ಲಿ ಮಹಿಳೆಯ ಸಾಹಿತ್ಯದ ನೆಲೆಯನ್ನು ಮಹಿಳೆಯೇ

೬೧ನೇ ಪುಟಕ್ಕೆ

ಸಾಮಾಜಿಕ-ಧಾರ್ಮಿಕ ಸುಧಾರಣೆಯನ್ನೇ ಮೂಲಭಿತ್ತಿಯನ್ನಾಗಿಸಿಕೊಂಡಿದ್ದ ವಚನ ಚಳುವಳಿ, ಈ ನಾಡಿನ ಸಾಂಸ್ಕೃತಿಕ ಚರಿತ್ರೆಯಲ್ಲಿಯೇ ಇನ್ನಿಲ್ಲದ ಬದಲಾವಣೆಗಳನ್ನು ತಂದದ್ದು ಈಗ ಇತಿಹಾಸ. ಜೈನಧರ್ಮದ ಉತ್ಕರ್ಷಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಈ ಶರಣ ಚಳುವಳಿ ಆ ಕಾಲದ ಪ್ರಬಲ ಧರ್ಮವಾಗಿ ತನ್ನ ನೆಲೆಗಟ್ಟನ್ನು ಕಂಡುಕೊಂಡದ್ದು ಹೇಗೆ ಎಂಬುದು ನಿಜಕ್ಕೂ ಕುತೂಹಲದ ಅಷ್ಟೇಕೆ ಅಚ್ಚರಿಯ ಸಂಗತಿಯೂ ಆಗಿದೆ.

ಜೈನಧರ್ಮದ ಕಟ್ಟುನಿಟ್ಟಿನ ಬ್ರಹ್ಮಚರ್ಯ – ಆ ಕಾಲಕ್ಕೆ – ಬಹುಶಃ ಬಹಳಷ್ಟು ಜನತೆಗೆ ಸವಾಲಿನ ಸಂಗತಿಯಾಗಿದ್ದಂತೆ ತೋರುತ್ತದೆ; ಮತ್ತು ವಾಸ್ತವವಾಗಿ ಆಚರಣೆಗೆ ತರಲಾರದಷ್ಟು ತೀವ್ರ ಕಷ್ಟಕಾರಿ ವಿಷಯವೂ ಆಗಿತ್ತೆಂದು ಕಾಣುತ್ತದೆ. ಇಂಥ ಇಕ್ಕಟ್ಟಿನ ಸಂದರ್ಭದಲ್ಲಿ ಅಸ್ತಿತ್ವಕ್ಕೆ ಬಂದ ವೀರಶೈವ ಧರ್ಮ ಸಾಂಸಾರಿಕ ಬದುಕಿನಲ್ಲಿ ಜೈನಧರ್ಮದಷ್ಟು ಕಟ್ಟುನಿಟ್ಟುಗಳನ್ನು ವಿಧಿಸದೆ ಕಾಲದ ಅಗತ್ಯತೆ ಹಾಗೂ ಜನತೆಯ ಸಂಕಷ್ಟವನ್ನು ಸರಿಯಾಗಿಯೇ ಅರ್ಥೈಸಿಕೊಂಡಂತೆ ಭಾಸವಾಗುತ್ತದೆ ಮತ್ತು ಆ ವರೆಗಿನ ಧರ್ಮಗಳು ಪ್ರಬೋಧಿಸಿದಂತೆ ವೈರಾಗ್ಯ ಸಾಧನೆಗೆ ದಾಂಪತ್ಯ ಧರ್ಮ ಒಂದು ತೊಡಕು ಎಂಬ ಕಟ್ಟುಪಾಡನ್ನು ಸಾರಾಸಗಟಾಗಿ ತಿರಸ್ಕರಿಸಿದ್ದು, ಪ್ರಾಯಶಃ ವೀರಶೈವ ಧರ್ಮ ಬಹಳ ಕಡಿಮೆ ಅವಧಿಯಲ್ಲಿ ಆದರೆ ಅನೂಹ್ಯ ಪ್ರಮಾಣದಲ್ಲಿ ಪ್ರಸಾರವಾಗಲು ಕಾರಣವಾಗಿರಬೇಕು.

ಆಧ್ಯಾತ್ಮಿಕ ಸಾಧನೆಗೆ ದಾಂಪತ್ಯ ಒಂದು 'ತೊಡಕು' ಎಂದು ಪ್ರಬೋಧಿಸುತ್ತಿದ್ದ ಕಾಲದಲ್ಲಿ ಬಸವಣ್ಣನವರ ವ್ಯಕ್ತಿಕೇಂದ್ರದಲ್ಲಿ ರೂಪುಗೊಂಡ ಶರಣ ಚಳುವಳಿ ಸಂಸಾರದ ಮೂಲಕವೇ ಮುಕ್ತಿ ಸಂಪಾದನೆಯ ಮಾರ್ಗವನ್ನು ಕಂಡುಕೊಂಡಿತು ; ಮತ್ತು ಒತ್ತಾಯದ ಸಂಸಾರ ವರ್ಜನೆ ಹೇಗೆ ವ್ಯರ್ಥ ಸಾಹಸವಾಗಬಲ್ಲುದು ಎಂಬುದನ್ನು ಸ್ಥಿರೀಕರಿಸಿತು.

# ವಚನ ಚಳುವಳಿಯ ಎರಡು ಭಿನ್ನ ಸ್ವರಗಳು

ಆಧ್ಯಾತ್ಮಿಕ ಸಾಧನೆಗೆ ದಾಂಪತ್ಯ ಒಂದು 'ತೊಡಕು' ಎಂಬುದನ್ನು ಬಹುಶಃ ಸರ್ವಧರ್ಮಗಳೂ ಒಪ್ಪಿದ್ದಂತೆ ತೋರುತ್ತದೆ. ಇದನ್ನು ಗ್ರಹಿಸಿಯೇ ಶರಣರನೇಕರು ಇದಕ್ಕೆ ಪ್ರತಿಕ್ರಿಯೆಯಾಗಿ ಹೀಗೆ ಹೇಳಿದ್ದು:

*ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ*
*ಸತಿಪತಿಗಳೊಂದಾಗದವನ ಭಕ್ತಿ*
*ಅಮೃತದೊಳು ವಿಷ ಬೆರೆದಂತೆ ಕಾಣಾ ರಾಮನಾಥ*
*(ಜೇ.ದಾ.ವ.ಸಂ - ೮೭೯)*

*ಇಂದ್ರಿಯ ನಿಗ್ರಹವ ಮಾಡಿದಡೆ ಹೊಂದುವವು ದೋಷಂಗಳು,*
*ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು.*
*ಸತಿಪತಿ ರತಿಸುಖ ಭೋಗೋಪಭೋಗವ, ವಿಳಾಸವ*
*ಬಿಟ್ಟನೆ ಸಿಂಧುಬಲ್ಲಾಳನು ?*
*ನಿಮ್ಮ ಮುಟ್ಟಿ ಪರಧನ-ಪರಸತಿಯರಿಗೆಳಸಿದಡೆ*
*ನಿಮ್ಮಾಚರಕ್ಕೆ ದೂರ, ಕೂಡಲಸಂಗಮದೇವಾ*
*(ಬ.ವ.ಸಂ - ೬೩೯)*

*ಕೊಟ್ಟಕುದುರೆಯನೇರಲರಿಯದೆ*
*ಮತ್ತೊಂದು ಕುದುರೆಯನೇರಬಯಸುವರು,*
*ವೀರರೂ ಅಲ್ಲ, ಧೀರರೂ ಅಲ್ಲ, ಇದು ಕಾರಣ -*
*ನೆರೆ ಮೂರು ಲೋಕವೆಲ್ಲವೂ ಹಲ್ಲಣವ ಹೊತ್ತುಕೊಂಡು,*
*ತೊಳಲುತ್ತ ಇದ್ದಾರೆ.*
*ಗುಹೇಶ್ವರನೆಂಬ ಲಿಂಗವನವರೆತ್ತ ಬಲ್ಲರು ?*
*(ಅ.ವ.ಸಂ - ೧೨೨)*

ಈ ಮೇಲಿನ ಉಕ್ತಿಗಳು ದಾಂಪತ್ಯ ಧರ್ಮ ಆಧ್ಯಾತ್ಮಿಕ ಸಾಧನೆಗೆ ಒಂದು 'ತೊಡಕಲ್ಲ' ಎಂಬುದನ್ನು ಪ್ರತಿಪಾದಿಸುವುದರ ಜೊತೆಗೆ ದಾಂಪತ್ಯ ಅನುಭಾವಿಕ ಸಾಧನೆಯ ಒಂದು ನೆಲೆಗಟ್ಟೆಂಬುದನ್ನು ಪ್ರಚುರಪಡಿಸುತ್ತವೆ. ಅಂತೆಯೇ ಶರಣರೆಲ್ಲರೂ ದಾಂಪತ್ಯ ಧರ್ಮವನ್ನು ಪಾಲಿಸಿದವರೇ ; ಅಷ್ಟೇಕೆ ಅವರೂ ಸಂಸಾರಿಗಳೇ, ಗೃಹಸ್ಥರೇ.

ತುಂಬಾ ಅಚ್ಚರಿಯ ಸಂಗತಿಯೆಂದರೆ ಈ ಚಳುವಳಿಯ ಕೇಂದ್ರ ವ್ಯಕ್ತಿಗಳಾದ ಅಲ್ಲಮ ಹಾಗೂ ಅಕ್ಕ ಈರ್ವರೂ ಈ ಚಳುವಳಿಯೊಂದಿಗೆ ಗುರುತಿಸಿಕೊಂಡೂ ಆ ಚಳುವಳಿಯ ಮೂಲ ನೆಲೆಗಟ್ಟಾದ ದಾಂಪತ್ಯ ಧರ್ಮವನ್ನು ವರ್ಜಿಸಿದ್ದು. ಮತ್ತೂ ಸೋಜಿಗದ ಸಂಗತಿ ಎಂದರೆ ಸಂಸಾರವಿಮುಖಿಗಳಾದ ಈ ಈರ್ವರನ್ನು ಚಳುವಳಿ ಹೇಗೆ ಅರಗಿಸಿಕೊಂಡಿತೆಂಬುದು.

ಎರಡನೆಯದಾಗಿ, ಅಲ್ಲಮ ಶೂನ್ಯಸಿಂಹಾಸನದ ಒಡೆಯನಾಗಿ ನಿರ್ದೇಶನ ನೀಡಿದಾಗಲೂ ಸಿಂಹಾಸನಾಧೀಶನ ಸಂಸಾರವರ್ಜನೆಯನ್ನು ಇಡೀ ಶರಣಸಂಕುಲ ಹೇಗೆ ಪ್ರಶ್ನಿಸಲಿಲ್ಲವೋ ಹಾಗೂ ದಾಂಪತ್ಯ ಧರ್ಮ ವರ್ಜನೆಯಲ್ಲಿ ಅಲ್ಲಮನ ಆಲೋಚನೆಯೊಂದಿಗೆ ಸಂಗತವಾಗುವ ಅಕ್ಕನ ಅಲೌಕಿಕತೆಯನ್ನು ಹೇಗೆ ಶರಣ ಸಂದೋಹ ಒಪ್ಪಿಕೊಂಡಿತೋ ಎಂಬಿತ್ಯಾದಿ ಪ್ರಶ್ನೆಗಳು ಇಂದಿಗೂ ನಿಗೂಢವೇ.

ಶರಣ ಚಳುವಳಿಯ ಮತ್ತೊಂದು ಮುಖ್ಯಲಕ್ಷಣವೆಂದರೆ ಸಮನ್ವಯತೆ. ಅಂತರಂಗ-ಬಹಿರಂಗ ಸಮನ್ವಯ, ಲೌಕಿಕ-ಅಲೌಕಿಕ ಸಮನ್ವಯ, ಇಹ-ಪರ ಸಮನ್ವಯ ಇತ್ಯಾದಿ ಸಮನ್ವಯದೊಂದಿಗೆ ವೀರಶೈವ ಧರ್ಮ ತನ್ನತನವನ್ನು ಸ್ಥಾಪಿಸಿಕೊಂಡಿದೆ. ಇಹದ ಮೂಲಕವೇ ಪರ ಅರ್ಥಾತ್ ಪರಕ್ಕಾಗಿ ಇಹ ವರ್ಜನೀಯವಲ್ಲ ಹಾಗೂ ಅಲೌಕಿಕತೆಗಾಗಿ ಲೌಕಿಕತೆಯನ್ನು ತೊರೆಯಬೇಕಾಗಿಲ್ಲ. ಇದು ಶರಣಧರ್ಮದ ತಿರುಳು. ಅಂತೆಯೇ ಅಲ್ಲಮ ಹೇಳುವ

'ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದ ಬಯಸುವವರು
ವೀರರೂ ಅಲ್ಲ, ಧೀರರೂ ಅಲ್ಲ'

ಎಂಬ ಮಾತುಗಳು ತುಂಬಾ ಪ್ರಸ್ತುತವೆನಿಸುತ್ತವೆ. 'ಕೊಟ್ಟ ಕುದುರೆ'ಯ ರೂಪಕದ ಮೂಲಕ ಅಲ್ಲಮ ಲೌಕಿಕತೆಯ ಪ್ರಸ್ತುತತೆಯನ್ನು ಪ್ರತಿಪಾದಿಸಿದ್ದಾನೆ. ಅಷ್ಟೇಕೆ, ವೀರವಿರಾಗಿಣಿ ಆಗಿದ್ದ ಅಕ್ಕ 'ಹಾವಿನ ಬಾಯ ಹಲ್ಲಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು' ಎಂದು ಹೇಳುವ ಮುಖೇನ ಸಂಸಾರದ ಶ್ರೇಷ್ಠತೆಯನ್ನು ಒತ್ತಿ ಹೇಳಿದ್ದಾಳೆ.

ಅಕ್ಕ-ಅಲ್ಲಮರೀರ್ವರು ಅನುಭಾವಿಗಳು ; ಶರಣ ಚಳುವಳಿಯಲ್ಲಿ ತೀವ್ರವಾಗಿ ತಮ್ಮನ್ನು ತೊಡಗಿಸಿಕೊಂಡವರು ; ಸಾಮಾಜಿಕತೆಗಾಗಿ ಅಷ್ಟಾಗಿ ತುಡಿದವರಲ್ಲ. ಹೀಗೆ ಆಲೋಚನೆಯಲ್ಲೂ ಸಾಧನಾಮಾರ್ಗದಲ್ಲೂ ಒಂದಾಗುವ ಅಕ್ಕ-ಅಲ್ಲಮರೀರ್ವರು ಒಂದು ಸೋಜಿಗವೆನಿಸದೆ ಇಡೀ ಶರಣ ಚಳುವಳಿಯ ವೈರುಧ್ಯವೆಂಬಂತೆ ಭಾಸವಾಗುತ್ತದೆ. ಅಥವಾ ದ್ವಂದ್ವತೆಯನ್ನು ಪ್ರತಿಪಾದಿಸುತ್ತಿದೆಯೇ ಎಂಬ ಸಂಶಯಕ್ಕೂ ಎಡೆಮಾಡಿಕೊಡುತ್ತದೆ.

ಅಕ್ಕ-ಅಲ್ಲಮರ ಈ ವಿಕ್ಷಿಪ್ತ ನಡವಳಿಕೆಯನ್ನು ಕೇವಲ ವ್ಯಕ್ತಿನಿಷ್ಠ ಪ್ರತಿಕ್ರಿಯೆ ಎಂಬಂತೆ ಪರಿಭಾವಿಸಿದರೆ ಮಾತ್ರ ಸಮಸ್ಯೆಗೆ ಪರಿಹಾರ ದೊರೆತೀತು ! ಸಂದರ್ಭದ ಒತ್ತಡಗಳೋ ಅಥವಾ ಅನಿವಾರ್ಯತೆಗಳೋ ಅವರನ್ನು ಸಾಂಸಾರಿಕರನ್ನಾಗಿಸಲು ಸಾಧ್ಯವಾಗಿರಿಸಿರಲಿಕ್ಕಿಲ್ಲ.

ಕೇವಲ ಓರ್ವ ವ್ಯಕ್ತಿಯ ವೈಯಕ್ತಿಕ ಅನಿಸಿಕೆಯೇ ಧರ್ಮವೊಂದರ ಸಾರ್ವತ್ರಿಕ ಧೋರಣೆಯಾಗದು. ಅವರಿಗೆ ಇಷ್ಟವಿಲ್ಲದ ಸಾಂಸಾರಿಕ ಬದುಕನ್ನು ಹೇರುವುದು ಹೇಗೆ ಪ್ರಶ್ನಾರ್ಹವೋ ಹಾಗೆಯೇ ಅವರ ವ್ಯಕ್ತಿಗತ ಅಲೌಕಿಕ ಬದುಕನ್ನು ಇಡೀ ಶರಣ ಸಂದೋಹದ ಮೇಲೆ ಹೇರುವುದು ಆಕ್ಷೇಪಣೀಯವಾಗುತ್ತದೆ. ಅಂತೆಯೇ ಅಕ್ಕ-ಅಲ್ಲಮರೀರ್ವರನ್ನು ಸಂಸಾರವಿಮುಖಿಗಳೆಂದು ವ್ಯಾಖ್ಯಾನಿಸುವುದು ಶುದ್ಧ ಪ್ರಮಾದವಾಗುವುದು ಮಾತ್ರವಲ್ಲದೆ ಏಕಪಕ್ಷೀಯ ವಿಮರ್ಶೆಯಾಗುವ ಅಪಾಯವೂ ಇದೆ.

ಅಕ್ಕ ಮತ್ತು ಅಲ್ಲಮರಿಗೆ ಲೌಕಿಕ ಬದುಕಿನ ಬಗ್ಗೆ ಶ್ರದ್ಧೆಯಿದೆ. ಅಂತೆಯೇ ಲೌಕಿಕರೊಂದಿಗೆ ತಮ್ಮನ್ನು ಗುರುತಿಸಿಕೊಂಡಿದ್ದಾರೆ ಮತ್ತು ದಾಂಪತ್ಯ ಧರ್ಮ, ಲೌಕಿಕತೆ ಇತ್ಯಾದಿಯನ್ನು ಒಂದು ಧಾರ್ಮಿಕ ಧೋರಣೆ ಎನ್ನುವಷ್ಟರಮಟ್ಟಿಗೆ ತೀವ್ರವಾಗಿ ಪ್ರತಿಪಾದಿಸಿದ್ದಾರೆ. ಆದ್ದರಿಂದ ಅಕ್ಕ ಹಾಗೂ ಅಲ್ಲಮರ ಈ ವಿಲಕ್ಷಣ ನಡವಳಿಕೆಯನ್ನು ಕೇವಲ ವ್ಯಕ್ತಿಗತ ಪ್ರತಿಕ್ರಿಯೆ ಎಂದಷ್ಟೇ ಪರಿಗಣಿಸುವುದು ತಕ್ಕುದು. ಅಷ್ಟಕ್ಕೂ ಧರ್ಮವೆನ್ನುವುದು ಕೂಡಾ ಕೇವಲ ವೈಯಕ್ತಿಕತೆಗೆ ಸೀಮಿತವಾದುದು. ಅವರ ಈ ವರ್ತನೆಯನ್ನು ವ್ಯಕ್ತಿ ವಿಶಿಷ್ಟಗುಣವೆಂದು ಪರಿಭಾವಿಸುವುದು ಉಚಿತ. ಈ ವಿಶಿಷ್ಟತೆಯ ಜೊತೆಗೂ ವಚನ ಚಳುವಳಿಯೊಂದಿಗೆ ಸಂಗತರಾಗಿದ್ದುದು ತೀರಾ ಗಮನೀಯ ಅಂಶವಾಗಿದೆ.

**ಡಾ॥ ಬಿ. ಶರಣಪ್ಪ**
ಸತ್ಯಂಪೇಟೆ, ಕಲ್ಬುರ್ಗಿ ಜಿಲ್ಲೆ

**ಕರ್ನಾಟಕಕ್ಕೆ ಸ್ಪಷ್ಟ ಗಡಿಯಿದೆ. ಏಕೀಕರಣ ಸಂದರ್ಭದಲ್ಲಿಯೇ ೯ ಜಿಲ್ಲೆಗಳನ್ನು ಕಳೆದುಕೊಂಡ ಕರ್ನಾಟಕ, ಆಕ್ರಮಣಕಾರಿ ಮನೋಭಾವದ ನೆರೆ ರಾಜ್ಯಗಳಿಂದ ತನ್ನ ಗಡಿಯನ್ನು ಕಾಯ್ದುಕೊಳ್ಳಲು ಹೆಣಗಾಡುತ್ತಿದೆ. ಇದಕ್ಕೆ ವಿರುದ್ಧವಾಗಿ ಬೆಂಗಳೂರು ಸೀಮಾತೀತವಾಗಿ ಬೆಳೆಯುತ್ತಿದೆ. ನಗರದ ಹೊರ-ಒಳ ಸ್ವರೂಪ ಕ್ಷಿಪ್ರಗತಿಯಲ್ಲಿ ಬದಲಾಗುತ್ತಿದೆ.**

**ಬೆಂ**ಗಳೂರು-ಕರ್ನಾಟಕಗಳ ಆರ್ಥಿಕ, ಸಾಮಾಜಿಕ ಅಭಿವೃದ್ಧಿಯ ವಿದ್ಯಮಾನಗಳನ್ನು ಬೆಳವಣಿಗೆಯ ಆಯಾಮಗಳನ್ನು ಒಂದು ಚೌಕಟ್ಟಿನಲ್ಲಿ ವಿಶ್ಲೇಷಿಸುವುದು, ವಿವರಿಸುವುದು ಸ್ವಲ್ಪಮಟ್ಟಿಗೆ ಸಂದಿಗ್ಧದ ಕೆಲಸ. ಒಂದು ಪ್ರದೇಶದ ಪ್ರಗತಿಯು ಆ ಪ್ರದೇಶದ ಪ್ರಾಕೃತಿಕ ಸಂಪನ್ಮೂಲಗಳನ್ನು ಅವಲಂಬಿಸಿರುತ್ತದೆ ಎಂಬುದು ಸಾಮಾನ್ಯ ಅಭಿಪ್ರಾಯ. ಆದರೆ, ಪ್ರಪಂಚದ ಸಿರಿವಂತ ರಾಷ್ಟ್ರಗಳ ಸಾಲಿನಲ್ಲಿ ಇರುವ ಜಪಾನ್, ಇಸ್ರೇಲ್‌ಗಳು ಪ್ರಾಕೃತಿಕವಾಗಿ ಸಂಪದ್ಭರಿತವಾಗಿಲ್ಲ. ಅದೇರೀತಿ ಕನಿಷ್ಠ ಪ್ರಾಕೃತಿಕ ಸಂಪನ್ಮೂಲಗಳನ್ನು ಹೊಂದಿರುವ ಬೆಂಗಳೂರು ಬೃಹತ್ತಾಗಿ ಬೆಳೆದಿದೆ. ಇದಕ್ಕೆ ಪ್ರತಿಯಾಗಿ ಹೇರಳ ಸಂಪನ್ಮೂಲಗಳನ್ನು ಪಡೆದಿರುವ ಕರ್ನಾಟಕ ನಿರೀಕ್ಷಿತ ಪ್ರಗತಿ ಸಾಧಿಸಲು ವಿಫಲವಾಗಿದೆ.

**ಬೆಳೆದಿವೆ ನೋಡ ಬೆಂಗಳೂರು ನಗರ**

ಕರ್ನಾಟಕಕ್ಕೆ ಸ್ಪಷ್ಟ ಗಡಿಯಿದೆ. ಏಕೀಕರಣ ಸಂದರ್ಭದಲ್ಲಿಯೇ ೯ ಜಿಲ್ಲೆಗಳನ್ನು ಕಳೆದುಕೊಂಡ ಕರ್ನಾಟಕ, ಆಕ್ರಮಣಕಾರಿ ಮನೋಭಾವದ ನೆರೆ ರಾಜ್ಯಗಳಿಂದ ತನ್ನ ಗಡಿಯನ್ನು ಕಾಯ್ದುಕೊಳ್ಳಲು ಹೆಣಗಾಡುತ್ತಿದೆ. ಇದಕ್ಕೆ ವಿರುದ್ಧವಾಗಿ ಬೆಂಗಳೂರು ಸೀಮಾತೀತವಾಗಿ ಬೆಳೆಯುತ್ತಿದೆ. ನಗರದ ಹೊರ-ಒಳ ಸ್ವರೂಪ ಕ್ಷಿಪ್ರಗತಿಯಲ್ಲಿ ಬದಲಾಗುತ್ತಿದೆ. ನಗರ ಜಿಲ್ಲೆಯಿಂದ ಹೊರಗುಳಿದಿರುವ ನೆಲಮಂಗಲ ತಾಲ್ಲೂಕಿನ ಬಹಳಷ್ಟು ಭಾಗ ಬೆಂಗಳೂರಿನ ಭಾಗವಾಗಿಯೇ ಬೆಳೆಯುತ್ತಿದೆ. ಆದರೆ ಇದರ ಲೆಕ್ಕವೆಲ್ಲ ಗ್ರಾಮಾಂತರ ಜಿಲ್ಲೆಗೆ. ಕೆಂಪೇಗೌಡನ ಕಾಲದಲ್ಲಿ ೨೧ ಚ.ಕಿ.ಮೀ. ಇದ್ದ ನಗರ, ಇಂದು ಅಧಿಕೃತವಾಗಿ ೩೬೮ ಚ.ಕಿ.ಮೀ.ನಷ್ಟಾಗಿದೆ. ವಾಸ್ತವಾಗಿ ೫೦೦ ಚ.ಕಿ.ಮೀ. ದಾಟಿದೆ ಎಂದು ತಜ್ಞರು ಹೇಳುತ್ತಾರೆ. ಮಿತಿಮೀರಿ ಬೆಳೆಯುತ್ತಿದ್ದ 'ದೊಡ್ಡ ಬಸವಣ್ಣ'ನ ಬೆಳವಣಿಗೆ ನಿಲ್ಲಿಸಲು ಅದರ ಬೆನ್ನಿಗೆ ತ್ರಿಶೂಲ ನೆಟ್ಟರಂತೆ. ಆದರೆ, ಬೆಂಗಳೂರಿನ ಬೆಳವಣಿಗೆ ತಡೆಯಲು ಅಂತಹ ಅಂಕೆ ಸಾಧ್ಯವಾಗಲೇ ಇಲ್ಲ. ಕೆಂಪೇಗೌಡ ನಾಲ್ಕು ದಿಕ್ಕುಗಳಲ್ಲಿ ನಿರ್ಮಿಸಿದ ಗಡಿಗೋಪುರಗಳು ಇಂದು ನಗರದ ಮಧ್ಯಭಾಗದಲ್ಲಿವೆ. ಶಿಸ್ತಿಲ್ಲದೆ ಬೆಳೆಯುತ್ತಿದ್ದ ಬೆಂಗಳೂರಿನ ಬೆಳವಣಿಗೆಗೆ ತಡೆ ಒಡ್ಡಲು ೧೯೮೫ರಲ್ಲಿ ನಗರದ ಸುತ್ತ ಹಸಿರು ಪಟ್ಟಿ ಗುರುತಿಸಿ ಅಲ್ಲಿ ಕಾಡು ಬೆಳೆಸಿ, ಅದರ ಒಳ ಅಂಚಿನಲ್ಲಿ ವರ್ತುಲ ರಸ್ತೆ ನಿರ್ಮಿಸುವ ಕೆಲಸ ಆಯಿತು. ಇಂದು ಹಸಿರು ಪಟ್ಟಿ ಮಾಯವಾಗಿ ಅದರಾಚೆಗೆ ಎರಡನೆಯ ವರ್ತುಲ ರಸ್ತೆ ನಿರ್ಮಾಣವಾಗಿದೆ. ಅದರಾಚೆಗೂ ಬೆಂಗಳೂರು ಬೆಳೆಯುತ್ತಲೇ ಇದೆ. ಹೀಗೆ ವಿಭಿನ್ನ ಪ್ರವೃತ್ತಿಯುಳ್ಳ 'ರಾಜ್ಯ-ರಾಜಧಾನಿ'ಗಳ ಅಭಿವೃದ್ಧಿಯನ್ನು ಇಲ್ಲಿ ತೌಲನಿಕವಾಗಿ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ.

**'ಮಿಲೇನಿಯಂ ಸಿಟಿ'**

ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮ ೨೦೦೧ರ ವರದಿಯಲ್ಲಿ ಬೆಂಗಳೂರನ್ನು ವಿಶ್ವದ ೪ನೆಯ ಅತ್ಯುತ್ತಮ ತಂತ್ರಜ್ಞಾನ ಕೇಂದ್ರ ಎಂದು ಗುರುತಿಸಿದೆ. ಇದೇ ವರದಿಯ ತಂತ್ರಜ್ಞಾನ ಸಾಧನೆ ಸೂಚಿಯನ್ವಯ ಭಾರತ ೬೩ನೇ ಸ್ಥಾನದಲ್ಲಿದೆ. ಪ್ರಪಂಚದ ಬೆಳೆಯುತ್ತಿರುವ ತಂತ್ರಜ್ಞಾನ ನಗರಗಳಲ್ಲಿ ಬೆಂಗಳೂರು ೬ನೇ ಸ್ಥಾನದಲ್ಲಿದೆ ಎಂದು ವಿಶ್ವದ ಪ್ರತಿಷ್ಠಿತ ರಿಯಲ್ ಎಸ್ಟೇಟ್ ಸಂಸ್ಥೆ 'ಜೋನ್ಸ್ ಲ್ಯಾಂಗ್ ಲಸಾಲ್ ಅಂಡ್ ಲಸಾಲ್ ಇನ್ವೆಸ್ಟ್‌ಮೆಂಟ್ ಮ್ಯಾನೇಜ್‌ಮೆಂಟ್' ಹೇಳಿದೆ. ಅಮೆರಿಕದ ಪ್ರಸಿದ್ಧ ತಾಂತ್ರಿಕ ಪತ್ರಿಕೆ 'ಟೆಕ್ನೋರಿವ್ಯೂ' ವಿಜ್ಞಾನ-ತಂತ್ರಜ್ಞಾನ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ವಿಶ್ವದ ೧೦೦ ಸ್ಥಳಗಳನ್ನು ಪ್ರಕಟಿಸಿದೆ. ಆ ಪಟ್ಟಿಯಲ್ಲಿ ಬೆಂಗಳೂರು ೧೧ನೆಯ ಸ್ಥಾನದಲ್ಲಿದೆ. ಇದಕ್ಕಿಂತ ಮಹತ್ವದ ಸಂಗತಿಯೆಂದರೆ ಜರ್ಮನಿಯ 'ಡೆಝೀಟ್' ಪತ್ರಿಕೆ ೧೯೯೯ರಲ್ಲಿ ಬೆಂಗಳೂರನ್ನು 'ಮಿಲೇನಿಯಂ ಸಿಟಿ' ಎಂದು ಆಯ್ಕೆ ಮಾಡಿದ್ದು; 'ಭಾರತದ ಸಿಲಿಕಾನ್ ಕಣಿವೆ', 'ತೀವ್ರೋತ್ಕರ್ಷ ನಗರ', 'ರಾಷ್ಟ್ರದ ತಂತ್ರಜ್ಞಾನ ರಾಜಧಾನಿ', 'ಮಾಹಿತಿ ತಂತ್ರಜ್ಞಾನದ ತವರು', 'ಬಯೋಟೆಕ್ ಕ್ಯಾಪಿಟಲ್' ಹೀಗೆ ಹಲವು ಹೆಗ್ಗಳಿಕೆಗೆ ಪಾತ್ರವಾಗಿರುವ ಬೆಂಗಳೂರು ಕರ್ನಾಟಕದ ರಾಜಧಾನಿ. ೧೮೩೧ರಲ್ಲಿಯೇ ಬ್ರಿಟಿಷರು ಬೆಂಗಳೂರನ್ನು ಮೈಸೂರು ಸಂಸ್ಥಾನದ ರಾಜಕೀಯ ರಾಜಧಾನಿಯಾಗಿ ಸ್ವೀಕರಿಸಿದ ಪರಿಣಾಮವಾಗಿ ದಿವಾನರು ಬೆಂಗಳೂರಿನಲ್ಲಿಯೇ ವಾಸಿಸುತ್ತಿದ್ದರು. ಇದರಿಂದಾಗಿ ಹಲವು ಸವಲತ್ತುಗಳು ಬೆಂಗಳೂರಿಗೆ ಆಯಾಚಿತವಾಗಿ ದೊರೆತವು. ರಾಷ್ಟ್ರದಲ್ಲೇ ವಿದ್ಯುತ್ ರಸ್ತೆ ದೀಪ ಪಡೆದ ಮೊದಲ ನಗರ ಬೆಂಗಳೂರು. ೧೯೦೯ರಲ್ಲೇ ವೈಜ್ಞಾನಿಕ ಸಂಶೋಧನೆ ಮತ್ತು ವಿಕಾಸಕ್ಕೆ 'ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್' (ಭಾರತೀಯ ವಿಜ್ಞಾನ ಮಂದಿರ) ಪ್ರಾರಂಭವಾಯಿತು. ಸ್ವಾತಂತ್ರ್ಯಪೂರ್ವದಲ್ಲೇ HAL ಸೇರಿದಂತೆ ಹಲವು ಪ್ರತಿಷ್ಠಿತ ಉದ್ಯಮಗಳು ಬೆಂಗಳೂರಿನಲ್ಲಿ ನೆಲೆಗೊಂಡಿದ್ದವು.

# ಬೆಂಗಳೂರು ಕರ್ನಾಟಕ
## ಅಂಕಿ-ಸಂಖ್ಯೆಗಳ ಕಿರುನೋಟ



✧ ರಾ. ನಂ. ಚಂದ್ರಶೇಖರ ✧ ರಾ. ಪ್ರಭುಶಂಕರ

ಕರ್ನಾಟಕದ ೨೭ ಜಿಲ್ಲೆಗಳಲ್ಲಿ ಒಂದಾದ ಬೆಂಗಳೂರು ನಗರ ವಿಸ್ತೀರ್ಣದ ದೃಷ್ಟಿಯಿಂದ ಅತ್ಯಂತ ಚಿಕ್ಕದು. ರಾಜ್ಯದ ೧.೧೪%ರಷ್ಟು ಮಾತ್ರ ಇರುವ ಬೆಂಗಳೂರು, ರಾಜ್ಯದ ೧೨.೩೭%ರಷ್ಟು ಜನಸಂಖ್ಯೆ ಹೊಂದಿ ಅತ್ಯಧಿಕ ಜನಸಂಖ್ಯೆ ಇರುವ ಜಿಲ್ಲೆ ಎನಿಸಿದೆ. ರಾಜ್ಯದ ಜನಸಾಂದ್ರತೆ ೨೭೫ ಆದರೆ, ಬೆಂಗಳೂರು ಜಿಲ್ಲೆಯದು ೨,೯೭೯. ಕೇವಲ ನಗರ ಪ್ರದೇಶವಷ್ಟನ್ನೇ ತೆಗೆದುಕೊಂಡರೆ ೧೫,೬೮೦ ಆಗುತ್ತದೆ. ಕೆಳಗಿನ ಕೋಷ್ಟಕ ಬೆಂಗಳೂರು - ಕರ್ನಾಟಕಗಳ ಜನಸಂಖ್ಯೆ, ಸಾಕ್ಷರತೆಗಳ ವಿವರಗಳನ್ನು ನೀಡುತ್ತದೆ. ೧೯೭೧ರಲ್ಲಿ ೧೬ ಲಕ್ಷಕ್ಕಿಂತ ಸ್ವಲ್ಪ ಜಾಸ್ತಿಯಿದ್ದ ಬೆಂಗಳೂರು ನಗರದ ಜನಸಂಖ್ಯೆ ೨೦೦೧ರಲ್ಲಿ ೫೭ ಲಕ್ಷ ದಾಟಿದೆ. ಅಂದರೆ ೩೦ ವರ್ಷಗಳಲ್ಲಿ ೩೫೦% ಬೆಳೆದಿದೆ. ರಾಜ್ಯದ ಒಟ್ಟು ನಗರ ವಾಸಿಗಳಲ್ಲಿ ಬೆಂಗಳೂರಿನ ಪಾಲು ೩೨.೬% ಅಂದರೆ ಪ್ರತಿ ೩ ಜನ ನಗರವಾಸಿಗಳಲ್ಲಿ ಬೆಂಗಳೂರಿನವರು ಒಬ್ಬರಿರುತ್ತಾರೆ. ೧೯೧೧-೨೧ರ ದಶಕದಲ್ಲಿ ಕರ್ನಾಟಕದ ಜನಸಂಖ್ಯೆ - ೧.೯% (ಕಮ್ಮಿ ಆಗಿದೆ), ಬೆಂಗಳೂರು ಜನಸಂಖ್ಯೆ ೧೨.೨೫%ರಷ್ಟು ಹೆಚ್ಚಿದೆ. ೧೯೮೧ರಲ್ಲಿ ೩೪.೯ ಲಕ್ಷವಿದ್ದ ಬೆಂಗಳೂರು ನಗರ ಜಿಲ್ಲಾ ಜನಸಂಖ್ಯೆ ೨೦೦೧ರಲ್ಲಿ ೬೫.೩ ಲಕ್ಷ ಆಗಿದೆ. ಇದು ಬೆಂಗಳೂರು ಬೆಳವಣಿಗೆಯ ಪರಿಗೊಂದು ನಿದರ್ಶನ.

### ಕೈಗಾರಿಕೆಗಳ ತವರು

ಕರ್ನಾಟಕವು ದೇಶದ ಕೈಗಾರಿಕೀಕರಣದಲ್ಲಿ ಮುಂಚೂಣಿಯಲ್ಲಿರುವ ರಾಜ್ಯ ಎಂದು ನಾವು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ. ವಾಸ್ತವವಾಗಿ ಕರ್ನಾಟಕದ ಕೈಗಾರಿಕಾ ಇತಿಹಾಸವನ್ನು ಅವಲೋಕಿಸಿದರೆ ಕರ್ನಾಟಕದ ಕೈಗಾರಿಕಾ ಪ್ರಗತಿ ಅನ್ನುವುದು ಬೆಂಗಳೂರು ಕೈಗಾರಿಕಾ ಪ್ರಗತಿಯೇ ಆಗಿದೆ. ೧೮೮೩ರಲ್ಲಿ ಮೈಸೂರು ಸ್ಪಿನ್ನಿಂಗ್ ಮತ್ತು ಮ್ಯಾನುಫ್ಯಾಕ್ಚರಿಂಗ್ ಕಂಪನಿ, ಬಿನ್ನಿಮಿಲ್, ೧೮೮೪ರಲ್ಲಿ ಕಾಫಿ ಕ್ಯೂರಿಂಗ್ ವರ್ಕ್ಸ್‌ಗಳ ಪ್ರಾರಂಭದೊಂದಿಗೆ ಬೆಂಗಳೂರಿನ ಕೈಗಾರಿಕೀಕರಣಕ್ಕೆ ಚಾಲನೆ ದೊರೆಯಿತು. ಏಕೀಕರಣದ ಹೊತ್ತಿಗೆ ಬೆಂಗಳೂರಿನಲ್ಲಿ HAL, BEL, ITI, HMT, NALನಂತಹ ಪ್ರತಿಷ್ಠಿತ ಕೇಂದ್ರೋದ್ಯಮಗಳು, ಮೈಕೋ, ಕಿರ್ಲೋಸ್ಕರ್, ಜಿ.ಕೆ.ಡಬ್ಲ್ಯು. ಅಂತಹ ಹಲವು ಖಾಸಗೀ ಉದ್ಯಮಗಳು, ಸಾಬೂನು ಕಾರ್ಖಾನೆ, ಪಿಂಗಾಣಿ, ಜಿ.ಇ.ಎಫ್, ಎಂ.ಇ.ಐ. ಸೇರಿದಂತೆ ೧೬ ರಾಜ್ಯ ಸರ್ಕಾರದ ಉದ್ಯಮಗಳು ಸ್ಥಾಪನೆ ಆಗಿದ್ದವು. ೧೯೫೬ರಲ್ಲಿ ೧,೬೩೫ ಕಾರ್ಖಾನೆಗಳು, ೧.೭೨ ಲಕ್ಷ ಕಾರ್ಮಿಕರಿದ್ದು ಅದರಲ್ಲಿ ೬೬೨ ಕಾರ್ಖಾನೆಗಳು (ರಾಜ್ಯದ ೪೦.೫%) ಬೆಂಗಳೂರಿನಲ್ಲಿದ್ದವು. ನಗರದ ಕೇಂದ್ರೋದ್ಯಮಗಳಲ್ಲೇ ೪೬,೦೦೦ ಕಾರ್ಮಿಕರಿದ್ದರು. ಇಂದು ರಾಜ್ಯದ ಕೈಗಾರಿಕೆಯಲ್ಲಿ ೪೬.೫೯, ಬಂಡವಾಳ ೬೦%, ಉದ್ಯೋಗದಲ್ಲಿ ೫೮.೪೬% ಬೆಂಗಳೂರಿನಲ್ಲಿವೆ. ರಾಜ್ಯದ ಸಣ್ಣ ಕೈಗಾರಿಕಾ ಶೆಡ್ಡುಗಳಲ್ಲಿ ೩೨.೧೨%, ಘಟಕಗಳಲ್ಲಿ ೧೮.೪%, ಆದಾಯದಲ್ಲಿ ೨೭.೬೬% ಬೆಂಗಳೂರಿನ ಪಾಲಿದೆ. ಭಾರತದ ೭೫% ಜೈವಿಕ ತಂತ್ರಜ್ಞಾನ ಉದ್ಯಮ, ೩೦% ವಿದ್ಯುನ್ಮಾನ ಉದ್ಯಮ, ಒಟ್ಟು ಕೈಗಾರಿಕಾ ಉತ್ಪನ್ನದಲ್ಲಿ ೫.೩ರಷ್ಟು ಬೆಂಗಳೂರಿನದಾಗಿದೆ. ರಾಜ್ಯದಲ್ಲಿ ೧೫೦ ಕೈಗಾರಿಕಾ ಪ್ರಾಂಗಣಗಳಿದ್ದು, ಅದರಲ್ಲಿ ೧೨ ಬೆಂಗಳೂರಿನಲ್ಲಿವೆ. ನಗರದ ಪೀಣ್ಯಾ ಕೈಗಾರಿಕಾ ಪ್ರದೇಶವು ಆಗ್ನೇಯ ಏಷ್ಯದಲ್ಲೇ ದೊಡ್ಡದು. ಬೆಂಗಳೂರನ್ನು ಭಾರತ ದೇಶದ ಮಾಹಿತಿ ತಂತ್ರಜ್ಞಾನ ರಾಜಧಾನಿ ಎಂದು ಗುರುತಿಸುತ್ತಾರೆ. ಇಲ್ಲಿ ೧೦೮ ಕಮ್ಯುನಿಕೇಷನ್ ಸಾಫ್ಟ್‌ವೇರ್ ಕಂಪನಿಗಳು, ೧೬೬ ಅನ್ವಯಕ ತಂತ್ರಾಂಶ ಸಂಸ್ಥೆಗಳು ಇದ್ದು ೧.೭ ಲಕ್ಷದಷ್ಟು ಉದ್ಯೋಗಿಗಳಿದ್ದಾರೆ. ರಾಜ್ಯದ ೭೦%ರಷ್ಟು ಕಂಪ್ಯೂಟರ್ ಉದ್ಯಮಗಳು ನಗರ ಸರಹದ್ದಿನಲ್ಲೇ ಇವೆ. ಪ್ರಪಂಚದ ದೊಡ್ಡ ಕಂಪ್ಯೂಟರ್ ಕಂಪನಿಗಳಲ್ಲಿ ಒಂದಾದ ಡಿಜಿಟಲ್ ಕಂಪನಿಯ ಭಾರತದ ಲೈಜ಼ಾನ್ ಕೇಂದ್ರ ಬೆಂಗಳೂರಿನಲ್ಲಿದೆ. ಈ ಸಂಸ್ಥೆ ತನ್ನ ಕಾರ್ಯಜಾಲದಿಂದ ತಕ್ಷಣ ಪ್ರಪಂಚದ ೮೦೦ ನಗರಗಳ ಸಂಪರ್ಕವನ್ನು ಗಣಕಯಂತ್ರ ಜಾಲದ ಮೂಲಕ ಪಡೆಯಲು ಸಮರ್ಥವಾಗಿದೆ. ಕೈಗಾರಿಕೆಗಳ ಪ್ರಗತಿಗೆ ಸಂಶೋಧನೆ ಮತ್ತು ವಿಕಾಸ ಸಂಸ್ಥೆಗಳು ಅತ್ಯಗತ್ಯ. ರಾಜ್ಯದಲ್ಲಿ ಒಟ್ಟು ೩೭ ಸಂಶೋಧನ ಸಂಸ್ಥೆಗಳಿದ್ದು, ಬೆಂಗಳೂರಿನಲ್ಲಿಯೇ ೨೪ ಸಂಸ್ಥೆಗಳಿವೆ. ರಾಜ್ಯ, ರಾಷ್ಟ್ರ, ವಿಶ್ವಮಟ್ಟಗಳಲ್ಲಿ ಕೈಗಾರಿಕಾ ಕ್ಷೇತ್ರದಲ್ಲಿ ಮಹತ್ವದ ಸ್ಥಾನ ಪಡೆದಿರುವ ಬೆಂಗಳೂರು ಇಂದು ಅಸಮರ್ಪಕ ಮೂಲಭೂತ ಸೌಕರ್ಯ, ವಿದ್ಯುತ್, ನೀರಿನ ಕೊರತೆ, ಸಂಚಾರ ವ್ಯವಸ್ಥೆಯಲ್ಲಿನ ದೋಷ, ಹದಗೆಟ್ಟ ರಸ್ತೆಗಳಿಂದಾಗಿ ಹಲವು ಪ್ರತಿಷ್ಠಿತ ಉದ್ಯಮಗಳು ಬಂಡವಾಳ ಹೂಡಲು ಹಾಗೂ ಹೊಸ ಉದ್ಯಮಗಳ ಸ್ಥಾಪನೆಗೆ ಹಿಂಜರಿಯುತ್ತಿವೆ. ರಾಜ್ಯದ ಒಟ್ಟು ಆದಾಯದಲ್ಲಿ ಕೈಗಾರಿಕೆಯ ಪಾಲು ೨೪.೩% ಆಗಿದ್ದು, ಅದರಲ್ಲಿ ಬೆಂಗಳೂರಿನ ಕೊಡುಗೆ ಸುಮಾರು ೫೫%ರಷ್ಟಿದೆ. ೧೯೮೧ರಲ್ಲಿ ರಾಜ್ಯದ ೩೭.೯೩% ಕೈಗಾರಿಕೆ ಬೆಂಗಳೂರಿನಲ್ಲಿದ್ದರೆ ೨೦೦೦ದ ಹೊತ್ತಿಗೆ ೪೯.೫೫%ಕ್ಕೆ ಏರಿತು. ರಾಜ್ಯದ ಕೈಗಾರಿಕೆಗಳ ಬಂಡವಾಳ ಹೂಡಿಕೆಯಲ್ಲಿ ಬೆಂಗಳೂರಿನ ಪಾಲು ೬೦%ರಷ್ಟು ಕೆಳಗಿನ ಕೋಷ್ಟಕವು ಕೈಗಾರಿಕೆಗಳ ರಂಗದ ಸ್ಥೂಲ ಪಕ್ಷಿನೋಟ ನೀಡುತ್ತದೆ.

ಕರ್ನಾಟಕದಲ್ಲಿ ೯೭೮ ಬೃಹತ್ ಮತ್ತು ಮಧ್ಯಮ

**ಬೆಂಗಳೂರು-ಕರ್ನಾಟಕ ಸಾಮಾನ್ಯ ವಿವರ (ಕೋಷ್ಟಕ-೧)**

| ಕ್ರ. ಸಂ. ವಿವರ | ಬೆಂಗಳೂರು | ರಾಜ್ಯದಲ್ಲಿ ಸ್ಥಾನ | ಕರ್ನಾಟಕ |
|---|---|---|---|
| ೧. ವಿಸ್ತೀರ್ಣ(ಚ.ಕಿ.ಮೀ) | ೨,೧೯೦ | ೨೭ | ೧,೯೧,೭೯೧ |
| ೨. ಜನಸಂಖ್ಯೆ ೨೦೦೧ ಒಟ್ಟು | ೬೫,೨೩,೧೧೦ | ೧ | ೫,೨೭,೩೩,೯೫೮ |
| ಪುರುಷರು | ೩೪,೨೨,೭೯೭ | ೧ | ೨,೬೮,೫೬,೩೪೩ |
| ಮಹಿಳೆಯರು | ೩೧,೦೦,೩೧೩ | ೧ | ೨,೫೮,೭೭,೬೧೫ |
| ಗ್ರಾಮೀಣ | ೭,೭೭,೬೯೩ | ೨೪ | ೩,೪೮,೧೪,೧೦೦ |
| ನಗರ | ೫೭,೪೫,೪೧೭ | ೧ | ೧,೭೯,೧೯,೮೫೮ |
| ೩. ಪ್ರತಿ ಸಾವಿರ ಪುರುಷರಿಗೆ ಮಹಿಳೆಯರು | ೯೦೭ | ೨೭ | ೯೬೪ |
| ೪. ದಶಕದ ಜನಸಂಖ್ಯೆ ಬೆಳವಣಿಗೆ (೧೯೯೧-೨೦೦೧) | ೩೪.೭೯% | ೧ | ೧೭.೨೫% |
| ೫. ಅಕ್ಷರಸ್ಥರು – ಸಾಕ್ಷರತೆ (೨೦೦೧) | | | |
| ಒಟ್ಟು | ೪೮,೬೨,೩೪೩ (೮೩.೯೧) | ೧ | ೩,೦೭,೭೪,೯೮೮ (೬೭.೦೪) |
| ಪುರುಷರು | ೨೬,೯೨,೬೦೮ (೮೮.೩೬) | ೧ | ೧,೭೮,೧೭,೬೮೨ (೭೬.೨೯) |
| ಮಹಿಳೆಯರು | ೨೧,೬೯,೭೩೫ (೭೮.೯೬) | ೧ | ೧,೨೯,೫೭,೩೦೬ (೫೭.೪೫) |
| ೬. ರಾಜ್ಯದ ಅಕ್ಷರಸ್ಥರ ಪಾಲು | ೧೫.೭೯% | ೧ | ೧೦೦% |
| ೭. ರಾಜ್ಯದ ಅನಕ್ಷರಸ್ಥರ ಪಾಲು | ೬.೧೬ | – | – |
| ೮. ಜನಸಂಖ್ಯೆ ಹಿನ್ನೋಟ ೧೯೫೧ | ೨೧,೨೭,೦೬೧ | – | ೧,೯೪,೦೧,೪೭೭ |
| ೧೯೬೧ | ೨೫,೦೪,೪೬೨ | – | ೨,೩೫,೮೬,೭೭೨ |
| ೧೯೭೧ | ೩೩,೬೫,೫೧೫ | – | ೨,೯೨,೯೯,೦೧೪ |
| ೧೯೮೧ | ೩೪.೯೫ ಲಕ್ಷ | – | ೩೭೧.೩೬ ಲಕ್ಷ |
| ೧೯೯೧ | ೪೮,೩೯,೧೬೨ | – | ೪,೪೯,೭೭,೨೦೧ |

**ಬೆಂಗಳೂರು-ಕರ್ನಾಟಕ ದಶಕವಾರು ಜನಸಂಖ್ಯಾ (ಕೋಷ್ಟಕ-೨)**

| ವರ್ಷ | ೧೯೦೧-೧೧ | ೧೯೧೧-೨೧ | ೧೯೨೧-೩೧ | ೧೯೩೧-೪೧ | ೧೯೪೧-೫೧ | ೧೯೫೧-೬೧ | ೧೯೬೧-೭೧ | ೧೯೭೧-೮೧ | ೧೯೮೧-೯೧ | ೧೯೯೧-೨೦೦೧ |
|---|---|---|---|---|---|---|---|---|---|---|
| ಬೆಂಗಳೂರು | +೮.೪೭ | +೧೨.೨೫ | +೨೨.೭೯ | +೨೫.೧೧ | +೯೬.೭೭ | +೨೨.೪೫ | +೪೬.೫೫ | ೫೯.೦೮ | ೩೮ | ೩೪.೭೯ |
| ಕರ್ನಾಟಕ | +೩.೬೦ | -೧.೦೯ | +೯.೩೮ | +೧೧.೦೯ | +೧೯.೩೬ | +೨೧.೫೭ | +೨೪.೨೨ | +೨೬.೭೫ | ೨೦.೬೯ | ೧೭.೨೫ |

**ಕೈಗಾರಿಕೆ ಅಂಕಿ-ಸಂಖ್ಯೆಯ ಕಿರುನೋಟ (೨೦೦೨ ಡಿಸೆಂಬರ್‌ನಲ್ಲಿ)**

| ಕ್ರ. ಸಂ. | ವಿವರ | ಬೆಂಗಳೂರು | | ಕರ್ನಾಟಕ |
|---|---|---|---|---|
| ೧. | ಕೈಗಾರಿಕೆ ಒಟ್ಟು | ೪,೧೨೬ | (೪೬.೮೨%) | ೮,೮೧೧ |
| | ಜವಳಿ | ೫೯೮ | (೬೭.೬%) | ೮೮೪ |
| | ಇಂಜಿನಿಯರಿಂಗ್ | ೧,೨೮೩ | (೬೬.೩%) | ೧,೯೩೩ |
| | ರಾಸಾಯನಿಕ | ೧೨೭ | (೩೮.೯%) | ೩೨೬ |
| | ಇತರೆ | ೨,೧೧೮ | (೩೭%) | ೫,೬೭೨ |
| ೨. | ಕೈಗಾರಿಕೆ ಬಂಡವಾಳ (ಕೋಟಿಗಳಲ್ಲಿ) | ೫೬೦೯.೫೯ | (೫೬.೩%) | ೧೦೦೭೯.೮೭ |
| ೩. | ಕೈಗಾರಿಕಾ ಪ್ರದೇಶ | ೧೨ | (೮%) | ೧೫೫ |
| | ಕೈಗಾರಿಕಾ ಶೆಡ್ಡುಗಳು | ೧,೮೧೫ | (೩೨.೧) | ೫,೬೫೦ |
| | ಗೋದಾಮು | ೧೪೨ | (೫೭%) | ೨೪೯ |
| ೪. | ಸಣ್ಣ ಕೈಗಾರಿಕೆ ಘಟಕ | ೫೨,೨೧೯ | (೧೮%) | ೨,೮೬,೧೮೭ |
| | ಉದ್ಯೋಗ | ೪,೩೬,೧೯೮ | (೨೬%) | ೧೬,೬೪,೮೪೯ |
| | ಬಂಡವಾಳ (ಕೋಟಿಗಳಲ್ಲಿ) | ೧೩,೯೪೫ | (೨೮%) | ೫೦,೪೨೯ |
| ೫. | ಕೈಗಾರಿಕೆ ಮಧ್ಯಮ, ಭಾರಿ | ೪೫೦ | | ೧,೦೮೪ |
| | ಕೈಗಾರಿಕೆ ಬಂಡವಾಳ (ಕೋಟಿಗಳಲ್ಲಿ) | ೪೫೭೧.೬ | | ೨೭,೮೯೮ |
| | ಉದ್ಯೋಗ | ೨,೯೩,೪೩೩ | | ೪,೪೮,೨೭೩ |
| ೬. | ವಾರ್ಷಿಕ ಬೆಳವಣಿಗೆ | ೬.೦೭ | | ೩.೦೯ |

ಕೈಗಾರಿಕಾ ಘಟಕಗಳಿದ್ದು, ಇವುಗಳ ಒಟ್ಟು ಬಂಡವಾಳ ೧,೫೬,೫೪೫ ಕೋಟಿಗಳಾಗಿದ್ದು ೪ ಲಕ್ಷಕ್ಕೂ ಹೆಚ್ಚು ಉದ್ಯೋಗಿಗಳಿದ್ದಾರೆ. ಇದರಲ್ಲಿ ಅರ್ಧಕ್ಕಿಂತ ಹೆಚ್ಚು ಕೈಗಾರಿಕೆಗಳು ಬೆಂಗಳೂರಿನಲ್ಲಿವೆ. ೨೦೦೨ರ ಅಂತ್ಯಕ್ಕೆ ಬೆಂಗಳೂರಿನಲ್ಲಿ ಮಾಹಿತಿ ತಂತ್ರಜ್ಞಾನ ಕಂಪನಿಗಳು ೧೦೦೦ ದಾಟಿತು. ಜೈವಿಕ ತಂತ್ರಜ್ಞಾನ (BT)ದಲ್ಲಿ ಕರ್ನಾಟಕ ರಾಷ್ಟ್ರಕ್ಕೇ ಮಾದರಿ. ರಾಜ್ಯದ ೯೫% BT ಉದ್ಯಮ ಬೆಂಗಳೂರಿನಲ್ಲೇ ನೆಲೆಗೊಂಡಿವೆ. ನಗರದಲ್ಲಿ ೭೦ ಜೈವಿಕ ತಂತ್ರಜ್ಞಾನ ಉದ್ಯಮಗಳಿದ್ದು ಇದು ದೇಶದ ೪೦%ರಷ್ಟು ಎಂಬುದು ಮಹತ್ವದ ಸಂಗತಿ. ಬೆಂಗಳೂರಿನಲ್ಲಿ ಪ್ರತಿವರ್ಷ ನಡೆಯುವ ಮಾಹಿತಿ ತಂತ್ರಜ್ಞಾನ, ಮತ್ತು ಜೈವಿಕ ತಂತ್ರಜ್ಞಾನ ಮೇಳಗಳು ಜಾಗತಿಕ ಮಟ್ಟದಲ್ಲಿ ಮಾನ್ಯತೆ ಪಡೆದಿವೆ. ರಾಷ್ಟ್ರದ ಕೈಗಾರಿಕಾಭಿವೃದ್ಧಿ ಸೂಚಿ ಗಮನಿಸಿದಾಗ ಎಲ್ಲ ವಿಭಾಗದಲ್ಲೂ ಕರ್ನಾಟಕ ಮೊದಲ ೮ ಸ್ಥಾನಗಳಲ್ಲಿ ಸ್ಥಾನ ಪಡೆದಿದೆ ಎಂಬುದೊಂದು ಹೆಮ್ಮೆಯ ಸಂಗಾತಿಯಾದರೂ ಇದರ ಬಹುಪಾಲು ಬೆಂಗಳೂರಿನದು. ಮೂಲಭೂತವಾಗಿ ಬೆಂಗಳೂರು ಕೈಗಾರಿಕಾ ಪ್ರಧಾನವಾದದ್ದು, ಕರ್ನಾಟಕ ಕೃಷಿ ಆಧಾರಿತವಾದದ್ದು ಎಂಬುದನ್ನು ಮರೆಯುವಂತಿಲ್ಲ. ೨೦೦೩ರ ಡಿಸೆಂಬರ್ ಅಂತ್ಯದ ಹೊತ್ತಿಗೆ ಮಾಹಿತಿ ತಂತ್ರಜ್ಞಾನ ಕಂಪನಿಗಳ ಸಂಖ್ಯೆ ಬೆಂಗಳೂರಿನಲ್ಲಿ ೧೦೦೦ವನ್ನು ದಾಟಿದೆ. ಬೆಂಗಳೂರನ್ನು ಬಿಟ್ಟು ಕರ್ನಾಟಕದಲ್ಲಿ ೨೮೦ ಮಾಹಿತಿ ತಂತ್ರಜ್ಞಾನ ಕಂಪನಿಗಳು ಮಾತ್ರ ಇವೆ. ಬೆಂಗಳೂರಿನಲ್ಲಿ ವಹಿವಾಟು ೧.೬ ಶತಕೋಟಿ ಮೀರಿದ್ದು, ಮಾಹಿತಿ ತಂತ್ರಜ್ಞಾನದಲ್ಲಿ ವಿಶ್ವದರ್ಜೆಯ ಅಭಿವೃದ್ಧಿ ಹಾಗೂ ತರಬೇತಿಪೂರಕ ಸೌಲಭ್ಯವಿರುವುದು ಬೆಂಗಳೂರಿನ ಹೆಮ್ಮೆ.

**ಆರ್ಥಿಕ ಪ್ರಗತಿ : ಅಜಗಜಾಂತರ**

ಆರ್ಥಿಕ ಅಭಿವೃದ್ಧಿಯನ್ನು ಗುರುತಿಸಲು ಇರುವ ರೂಢಿಗತ ಮಾಪನವೆಂದರೆ ತಲಾ ಆದಾಯ. ಇಂದು ತಲಾ ಆದಾಯ ಗಣನೆ ಅವೈಜ್ಞಾನಿಕವೆನಿಸಿದೆ. ಆದರೂ ತಲಾ ಆದಾಯವೇ ಇಂದಿಗೂ ಬೆಳವಣಿಗೆಯ ಚಿತ್ರವನ್ನು ನೀಡಲು ಬಳಸುತ್ತಿರುವ ಪ್ರಮುಖ ಅಂಶವಾಗಿದೆ. ಕರ್ನಾಟಕದ ತಲಾ ಆದಾಯ ೧೯೭೧ರಲ್ಲಿ ರೂ. ೬೮೫/- ಇದ್ದುದು ೨೦೦೨ರಲ್ಲಿ ೧೯,೯೮೧/-ರೂ.ಗಳಿಗೆ ಏರಿದೆ. ಇದೇ ಕಾಲಮಾನದಲ್ಲಿ ಬೆಂಗಳೂರಿನ ತಲಾ ಆದಾಯ ೬೯೯/- ರಿಂದ ೩೩,೧೪೬/-ರೂಗಳಾಗಿದೆ. ರಾಜ್ಯ ಮಟ್ಟದಲ್ಲಿ ತಲಾ ಆದಾಯ ೪೮ ವರ್ಷಗಳಲ್ಲಿ ೨೯ ಪಟ್ಟು ಹೆಚ್ಚಿದ್ದರೆ, ಬೆಂಗಳೂರಿನದು ೪೭.೫ರಷ್ಟು ಹೆಚ್ಚಿದೆ. ಅಧಿಕೃತ ಅಂಕಿ-ಅಂಶಗಳ ಪ್ರಕಾರ ರಾಜ್ಯದಲ್ಲಿ ಬಡತನದ ರೇಖೆಗಿಂತ ಕೆಳಗಿರುವವರು ೨೬% ಮತ್ತು ಬೆಂಗಳೂರಿನಲ್ಲಿ ೧೫.೬೭%. ಖಾಸಗೀ ವರದಿಗಳಂತೆ ಇದು ಕ್ರಮವಾಗಿ ೩೩% ಮತ್ತು ೨೯%. ರಾಜ್ಯದ ಅಭಿವೃದ್ಧಿ ಸೂಚ್ಯಾಂಕ ೧೦೦ ಎಂದು ಗುರುತಿಸಲಾಗುತ್ತದೆ. ಬೆಂಗಳೂರಿನ ಅಭಿವೃದ್ಧಿ ಸೂಚ್ಯಾಂಕ ೧೯೬೦-೬೧ರಲ್ಲಿ ೨೧೮ ಇದ್ದುದು ೨೦೦೧-೦೨ರಲ್ಲಿ ೨೧೯ ಆಗಿದೆ. ಕರ್ನಾಟಕದ ವಲಯವಾರು ಆದಾಯದಲ್ಲಿ ಬೆಂಗಳೂರಿನ ಪಾಲು ಹೀಗಿದೆ : ಕೃಷಿ, ಅರಣ್ಯ, ಮೀನುಗಾರಿಕೆ, ಗಣಿ, ಕಲ್ಲುಗಳನ್ನೊಳಗೊಂಡ ಪ್ರಥಮ ವಲಯದಲ್ಲಿ ೧.೪೬%, ಉತ್ಪಾದನೆ, ಕೈಗಾರಿಕೆ, ನಿರ್ಮಾಣ, ಗುಡಿಕೈಗಾರಿಕೆಗಳನ್ನು ಪ್ರತಿನಿಧಿಸುವ ದ್ವಿತೀಯ ವಲಯದಲ್ಲಿ ಶೇ. ೩೩.೫, ಸಾರಿಗೆ, ಸಾಫ್ಟ್‌ವೇರ್, ಬ್ಯಾಂಕಿಂಗ್ ಮುಂತಾದ ಸೇವಾ ವಲಯದ ತೃತೀಯಾ ವಲಯದಲ್ಲಿ ಶೇ. ೨೪.೫೯. ಕರ್ನಾಟಕದ ಒಟ್ಟು ಆದಾಯ ೧,೦೪,೮೧,೪೮೯ ಲಕ್ಷ ರೂಪಾಯಿ. ಬೆಂಗಳೂರಿನ ಒಟ್ಟು ಆದಾಯ ೨೧,೫೦,೮೦೧ ಲಕ್ಷ ರೂ.ಗಳಾಗಿದ್ದು, ನಿವ್ವಳ ಆದಾಯ ಕ್ರಮವಾಗಿ ೯೩,೬೧,೮೮೧ ಮತ್ತು ೧೮,೫೦,೧೦೨ ಲಕ್ಷ ರೂಗಳಾಗಿದೆ. (ಬೆಂಗಳೂರಿನ ಪಾಲು ಒಟ್ಟು ಆದಾಯದಲ್ಲಿ ಶೇ.೨೦.೫೧ ಮತ್ತು ನಿವ್ವಳ ಶೇ. ೧೯.೭೯). ರಾಜ್ಯದ ಮಾರಾಟ ತೆರಿಗೆಯಲ್ಲಿ ಬೆಂಗಳೂರಿನ ಪಾಲು ಶೇ. ೪೯ ಮತ್ತು ತಂತ್ರಾಂಶ ರಫ್ತು (೧೯೯೮-೯೯) ೯,೯೦೩ ಕೋಟಿಯಲ್ಲಿ ಬೆಂಗಳೂರಿನ ಪಾಲು ೮,೩೫೦ ಕೋಟಿಗಳಾಗಿತ್ತು. ಅದು ಇಂದು ೧೪,೦೦೦ ಕೋಟಿ ಎಂದು ಅಂದಾಜು ಮಾಡಲಾಗಿದ್ದು ನಗರದ್ದು ೧೦,೫೦೦ ಕೋಟಿ ಎಂದು ವರದಿಯಾಗಿದೆ.

ರಾಜ್ಯದಲ್ಲಿ ೨೦೦೨ರ ಮಾರ್ಚ್ ಅಂತ್ಯಕ್ಕೆ ೩,೬೬೮ ವಾಣಿಜ್ಯ ಬ್ಯಾಂಕುಗಳಿದ್ದು ಒಟ್ಟು ಠೇವಣಿ ೬೩,೬೪,೩೯೫ ಲಕ್ಷ ರೂಗಳಾಗಿದ್ದು, ಇದರಲ್ಲಿ ೩೮,೦೨,೮೯೧ ಲಕ್ಷವನ್ನು ಸಾಲ ನೀಡಲಾಗಿದೆ. ಬೆಂಗಳೂರಿನಲ್ಲಿ ೮೩೧ ಬ್ಯಾಂಕುಗಳಿದ್ದು ರಾಜ್ಯದ ಠೇವಣಿಯಲ್ಲಿ ಶೇ. ೫೨.೨೫ ಪಾಲು ನಗರದ್ದೇ; ಅಂದರೆ ೩೩,೨೫,೯೩೪ ಲಕ್ಷ ರೂಗಳು. ಇದಕ್ಕೆ ಪ್ರತಿಯಾಗಿ ೨೧,೩೧,೭೦೧ ಲಕ್ಷ ರೂಗಳನ್ನು ಸಾಲ ನೀಡಿದೆ. ರಾಜ್ಯದ ಠೇವಣಿ ಅನುಪಾತ ೫೯.೭೫ ಆದರೆ ನಗರದ್ದು ೬೪.೦೯ ಆಗಿದೆ. ರಾಷ್ಟ್ರೀಯ ಉಳಿತಾಯ ಯೋಜನೆಗೆ ರಾಜ್ಯದಲ್ಲಿ ಸಂಗ್ರಹಿಸಲ್ಪಟ್ಟ ಮೊತ್ತ ೧,೬೯,೨೬೬ ಲಕ್ಷ ರೂಗಳಾಗಿದ್ದು ಬೆಂಗಳೂರಿನಿಂದಲೇ ೭೦,೩೦೩ ಲಕ್ಷ ರೂಗಳು ಸಂಗ್ರಹವಾಗಿದೆ. ಇದು ರಾಜ್ಯದ ೪೧.೫೩ ಆಗಿದೆ. ಬೆಂಗಳೂರಿನಲ್ಲಿ ಸರಾಸರಿ ತಿಂಗಳಿಗೆ ೩೦೦ ಕೋಟಿ ಗೃಹ ಸಾಲ ವ್ಯವಹಾರ ನಡೆಯುತ್ತಿದೆ. ಇಲ್ಲಿ ಸರಾಸರಿ ಗೃಹ ಸಾಲ ೮ ಲಕ್ಷ ರೂಗಳಾಗಿದ್ದು ಇದು ಮುಂಬೈನ ೭.೫ ಲಕ್ಷಕ್ಕಿಂತ ಹೆಚ್ಚಿದೆ. ರಾಷ್ಟ್ರೀಯ ಸರಾಸರಿ ೪ ಲಕ್ಷದ ಎರಡರಷ್ಟಿದೆ. ೨೦೦೨-೦೩ರಲ್ಲಿ ನಗರದ ಗೃಹ ಸಾಲ ೧೪,೧೦೦ ಕೋಟಿ ಎಂದು ಅಂದಾಜು ಮಾಡಲಾಗಿದೆ. ಬೆಂಗಳೂರಿನ ಅನಧಿಕೃತ ಅರ್ಥ ಜಗತ್ತಿನ ಲೆಕ್ಕ ಯಾರಿಗೂ ಗೊತ್ತಿಲ್ಲ.

**ಮಾನವ ಅಭಿವೃದ್ಧಿ ಸೂಚ್ಯಾಂಕ : ಬೆಂಗಳೂರು**

ಮಾನವ ಅಭಿವೃದ್ಧಿ ಸೂಚ್ಯಾಂಕ ಅನ್ನುವುದು ಆರ್ಥಿಕತೆಯ ಜೊತೆಗೆ ನಾಗರಿಕ ಮೂಲಭೂತ ಸೌಲಭ್ಯ, ಮಾನವ ಕಲ್ಯಾಣಾಭಿವೃದ್ಧಿ ಕಾರ್ಯಗಳನ್ನೂ ಒಳಗೊಂಡಿದೆ. (ಆಯಸ್ಸು, ಆರೋಗ್ಯ, ಶಿಕ್ಷಣ, ಸಂಪರ್ಕ, ಲಿಂಗ ತಾರತಮ್ಯ, ಶೌಚ ನೀರು ಸರಬರಾಜು, ತಲಾ ಅಭಿವೃದ್ಧಿ ವೆಚ್ಚ).

ಮಾನವ ಅಭಿವೃದ್ಧಿ ಅನ್ನುವುದು ಬರೀ ಕಲ್ಪನೆಯಲ್ಲ. ಜನರ ಜೀವನಮಟ್ಟವನ್ನು ಬಿಂಬಿಸುವ ಮಾವನ ಅಗತ್ಯದ ಮೂಲಕ ಅಭಿವೃದ್ಧಿಯನ್ನು ಅಳೆಯುವ ಮಾಪನ. GDI (Gender Development Index) ವಿಶ್ವಸಂಸ್ಥೆಯ ವರದಿಯನ್ವಯ ಭಾರತವು ವಿಶ್ವದ ೯೯ನೆಯ ಸ್ಥಾನದಲ್ಲಿದ್ದರೆ, ಕರ್ನಾಟಕ ೯೩ನೇ ಸ್ಥಾನದಲ್ಲಿಯೂ, ಬೆಂಗಳೂರು ೭೩ನೆಯ ಸ್ಥಾನದಲ್ಲಿಯೂ ಇವೆ. ಕರ್ನಾಟಕ ರಾಷ್ಟ್ರದಲ್ಲಿ ೭ನೇ ಸ್ಥಾನದಲ್ಲಿದ್ದರೆ, ಬೆಂಗಳೂರು ರಾಜ್ಯದಲ್ಲಿ ೩ನೇ ಸ್ಥಾನದಲ್ಲಿದೆ. ಕೊಡಗು, ದಕ್ಷಿಣ ಕನ್ನಡ ಮೊದಲೆರಡು ಸ್ಥಾನದಲ್ಲಿವೆ. ಬೆಂಗಳೂರಿನ ಕ್ಷೇಮಾಭಿವೃದ್ಧಿ ಸೂಚ್ಯಾಂಕವು .೩೫೨ ಆಗಿದ್ದು ರಾಜ್ಯದ ೨ನೇ ಸ್ಥಾನದಲ್ಲಿದೆ. ರಾಜ್ಯದ ಅಭಿವೃದ್ಧಿ ಸೂಚ್ಯಾಂಕ .೧೯೬. ರಾಜಧಾನಿ-ರಾಜ್ಯಗಳ ವಿವಿಧ ಸೂಚ್ಯಾಂಕಗಳು ಕ್ರಮವಾಗಿ ಹೀಗಿವೆ. ಆರೋಗ್ಯ ಸೂಚಿ .೬೮೦ ಮತ್ತು .೬೧೮, ಶಿಕ್ಷಣ .೭೭೩-.೫೯೬, ಸಾಮಾಜಿಕ ಸೂಚ್ಯಾಂಕ .೫೬೫ ಮತ್ತು .೪೪೯ಗಳಾಗಿವೆ. ಒಟ್ಟಾರೆಯಾಗಿ

ಬೆಂಗಳೂರಿನ ಮಾನವ ಅಭಿವೃದ್ಧಿ ಸೂಚ್ಯಾಂಕವು ೦.೭೩ ಆಗಿದ್ದು ರಾಜ್ಯದ ೨ನೇ ಸ್ಥಾನದಲ್ಲಿದ್ದರೆ, ಕರ್ನಾಟಕವು ೦.೬೩ ಅಂಕಗಳೊಂದಿಗೆ ರಾಷ್ಟ್ರದ ೭ನೆಯ ಸ್ಥಾನದಲ್ಲಿದೆ. ಕೆಳಗಿನ ಕೋಷ್ಟಕವು ಮಾನವ ಅಭಿವೃದ್ಧಿ ಸೂಚ್ಯಾಂಕಕ್ಕೆ ಪರಿಗಣಿಸಿದ ಕ್ಷೇತ್ರಗಳ ವಿವರ ನೀಡುತ್ತದೆ. (೧೯೯೮ರ ಅಂಕಿ-ಸಂಖ್ಯೆಗಳು)

**ಬೆಂಗಳೂರು-ಕರ್ನಾಟಕ ಮಾನವಾಭಿವೃದ್ಧಿ**
**ಕೆಲವು ಮಹತ್ವದ ಅಂಕಿ-ಅಂಶಗಳು**

| ಕ್ರ. ಸಂ. | ವಿವರ | ಬೆಂಗಳೂರು | ಕರ್ನಾಟಕ |
|---|---|---|---|
| ೧ | ವಯಸ್ಕರ ಸಾಕ್ಷರತಾ ಮಟ್ಟದ ಅಂದಾಜು | ೮೩.೭೫ | ೬೩.೬೬ |
| ೨ | ವಯಸ್ಕರ ಸಾಕ್ಷರತಾ ಮಟ್ಟದ ಸೂಚ್ಯಾಂಕ | ೦.೮೪ | ೦.೬೪ |
| ೩ | ಸಂಯುಕ್ತ ಶಾಲಾ ಸೇರ್ಪಡೆ ಸೂಚ್ಯಾಂಕ | ೦.೮೬ | ೦.೭೮ |
| ೪ | ಶಿಕ್ಷಣ ಸೂಚ್ಯಾಂಕ | ೦.೮೫ | ೦.೬೮ |
| ೫ | ಜನನ ಕಾಲದಲ್ಲಿ ಆಯು ನಿರೀಕ್ಷೆ ಅಂದಾಜು | ೬೯ | ೬೬.೦೫ |
| ೬ | ಜನನ ಕಾಲದಲ್ಲಿ ಆಯು ನಿರೀಕ್ಷೆ ಸೂಚ್ಯಾಂಕ | ೦.೭೩ | ೦.೬೮ |
| ೭ | ತಲಾವಾರು ಆದಾಯ (ರೂಪಾಯಿ) | ೨೫,೭೪೦ | ೧೩,೬೨೧ |
| ೮ | ನೈಜ ಒಟ್ಟು ಆಂತರಿಕ ಉತ್ಪನ್ನ ತಲಾವಾರು (ರೂ.) | ೪,೨೦೦ | ೨,೨೨೨ |
| ೯ | ಆದಾಯ ಸೂಚ್ಯಾಂಕ | .೦೬೨ | .೫೨ |
| ೧೦ | ಬಡತನ ಪ್ರಮಾಣ | ೩೧.೪೨ | ೩೩.೧೬ |
| ೧೧ | ಅಭಿವೃದ್ಧಿ ಸೂಚ್ಯಾಂಕ (೧೯೯೮-೯೯) | ೨೦೯ | ೧೦೦ |
| ೧೨ | ಸ್ತ್ರೀ ಪುರುಷ ಸರಾಸರಿ (೨೦೦೧) | ೯೧೬ | ೯೬೪ |
| ೧೩ | ಆರೋಗ್ಯ ಮೂಲ ಸೌಕರ್ಯ (ಲಕ್ಷ ಜನರು) ಹಾಸಿಗೆ | ೬೯ | ೭೫ |
| ೧೪ | ಅಸುರಕ್ಷಿತ ಹೆರಿಗೆ (ಶೇಕಡ) | ೯.೪ | ೩೫.೪ |
| ೧೫ | ರಸ್ತೆ ೧೦೦ ಚ.ಕಿ.ಮೀ.ಗೆ | ೯೪.೪೪ | ೭೦ |
| ೧೬ | ವಾಹನ ಲಕ್ಷ ಜನಸಂಖ್ಯೆಗೆ (೨೦೦೧) | ೧೭,೫೪೨ | ೬,೭೪೨ |
| ೧೭ | ಸಮಗ್ರ ಅಭಿವೃದ್ಧಿ ಸೂಚಿ | ೧.೫೧ | ೧ |
| ೧೮ | ಸುರಕ್ಷಿತ ನೀರಿನ ಲಭ್ಯತೆ (ಶೇಕಡ) | ೩೨.೪೪ | ೪೨.೫೩ |
| ೧೯ | ೬-೧೪ ವರ್ಷದೊಳಗಿನ, ಶಾಲೆಗೆ ಹೋಗದ ಮಕ್ಕಳು | ೨.೭೨% | ೧೦.೩% |

★ ಕೃಪೆ : ಡಿ. ಎಂ. ನಂಜುಂಡಪ್ಪ ಸಮಿತಿ ವರದಿ.

## ವಿಶ್ವದಲ್ಲೇ ಅತೀ ಹೆಚ್ಚು ಇಂಜಿನಿಯರಿಂಗ್ ಕಾಲೇಜು

ಮಾನವ ಅಭಿವೃದ್ಧಿಗೆ ಶಿಕ್ಷಣವೇ ಅಡಿಪಾಯ ಅನ್ನುವ ಮಾತಿದೆ. ೧೮೪೦ರಲ್ಲಿ ಲಂಡನ್ ಮಿಷನ್ ಬೆಂಗಳೂರಿನಲ್ಲಿ ಬಾಲಕಿಯರ ಪ್ರೌಢಶಾಲೆ ಆರಂಭಿಸಿತು. ೧೮೭೫ರಲ್ಲಿ ಸೆಂಟ್ರಲ್ ಕಾಲೇಜು, ೧೮೮೦ರಲ್ಲಿ ಸೈಂಟ್ ಜೋಸೆಫ್ ಕಾಲೇಜುಗಳು ಪ್ರಾರಂಭವಾದವು. ಈ ಎರಡು ಕಾಲೇಜು ಪ್ರಾರಂಭವಾಗುವುದಕ್ಕೆ ಮುನ್ನ ಕರ್ನಾಟಕದಲ್ಲಿದ್ದ ಏಕೈಕ ಕಾಲೇಜೆಂದರೆ ಮೈಸೂರಿನ ಮಹಾರಾಜ ಕಾಲೇಜು. ಅದು ಪ್ರಾರಂಭವಾದದ್ದು ೧೮೬೪ರಲ್ಲಿ. ಎಸ್. ಜೆ. ಪಾಲಿಟೆಕ್ನಿಕ್ ದೇಶದ ಮೊದಲ ತಾಂತ್ರಿಕ ವೃತ್ತಿಪರ ಶಿಕ್ಷಣ ಸಂಸ್ಥೆ. ಇದು ಬೆಂಗಳೂರು ಶಿಕ್ಷಣದಲ್ಲಿ ಮೊದಲಿನಿಂದಲೂ ಮುಂಚೂಣಿಯಲ್ಲಿತ್ತು ಎಂಬುದಕ್ಕೆ ಉದಾಹರಣೆ ಮಾತ್ರ. ಬೆಂಗಳೂರನ್ನು ತಾಂತ್ರಿಕ ಶಿಕ್ಷಣದ ಕಾಶಿ ಎಂದು ಕರೆಯುತ್ತಾರೆ. ಪ್ರಪಂಚದಲ್ಲಿಯೇ ಅತೀ ಹೆಚ್ಚು ಇಂಜಿನಿಯರಿಂಗ್ ಕಾಲೇಜುಗಳಿರುವ ನಗರ ಇದು. ಕರ್ನಾಟಕದಲ್ಲಿ ೧೨೯ ಇಂಜಿನಿಯರಿಂಗ್ ಕಾಲೇಜುಗಳಿದ್ದು ಅದರಲ್ಲಿ ಬೆಂಗಳೂರಿನಲ್ಲಿ ೫೫ ಕಾಲೇಜುಗಳಿವೆ. ಇದು ಹೆಮ್ಮೆಪಡುವ ಸಂಗತಿಯಾದರೂ, ಇಲ್ಲಿನ ವಿದ್ಯಾರ್ಥಿಗಳಲ್ಲಿ ಅರ್ಧದಷ್ಟು ಹೊರ ರಾಜ್ಯದವರೇ ಇದ್ದಾರೆಂಬುದು, ೮ ಕಾಲೇಜುಗಳು ಹೊರರಾಜ್ಯದವರ ಮಾಲಿಕತ್ವದಲ್ಲಿದೆ ಎಂಬುದು, ಯಥೇಚ್ಛ ಡೊನೇಷನ್ ನೀಡಿ ಸೇರಿರುವ ಹೊರ ರಾಜ್ಯದ ಶ್ರೀಮಂತ ವಿದ್ಯಾರ್ಥಿಗಳು ಸೃಷ್ಟಿಸಿರುವ ಅನಾಹುತಗಳನ್ನು ನೆನೆದಾಗ ಗಾಬರಿ ಹುಟ್ಟುತ್ತದೆ. ರಾಜ್ಯದಲ್ಲಿ ೨೪ ಅಲೋಪತಿ (ವೈದ್ಯಕೀಯ) ಕಾಲೇಜುಗಳಿದ್ದು ಬೆಂಗಳೂರಿನಲ್ಲಿ ೯ ಕಾಲೇಜುಗಳಿವೆ. ಭಾರತೀಯ ವೈದ್ಯಪದ್ಧತಿಯ ೫೯ ಕಾಲೇಜುಗಳಿದ್ದು ನಗರದಲ್ಲಿ ೭ ಕಾಲೇಜುಗಳಿವೆ. ರಾಜ್ಯದ ಶೇ. ೪೦ರಷ್ಟು ದಂತ ವೈದ್ಯ ಕಾಲೇಜುಗಳು ಅಂದರೆ ೧೪ ಬೆಂಗಳೂರಿನಲ್ಲಿವೆ (ರಾಜ್ಯದಲ್ಲಿ ೩೭). ಇದು ವಿಶ್ವದಲ್ಲೇ ಗರಿಷ್ಠ ಸಂಖ್ಯೆಯ ದಂತ ಕಾಲೇಜಿರುವ ಊರಾಗಿದೆ. ರಾಜ್ಯದಲ್ಲಿ ೧೬ ವಿಶ್ವವಿದ್ಯಾಲಯಗಳಿದ್ದು ಬೆಂಗಳೂರಿನಲ್ಲಿಯೆ ೭ ವಿಶ್ವವಿದ್ಯಾಲಯಗಳಿವೆ. ನಗರದಲ್ಲಿ ರಾಷ್ಟ್ರದಲ್ಲೆ ಗರಿಷ್ಠ ಸಂಖ್ಯೆಯ ಪಾಲಿಟೆಕ್ನಿಕ್‌ಗಳು ಇವೆ. ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದ ಎಲ್ಲ ಲಭ್ಯ ವಿವರ ಮುಂದಿನ ಪುಟದ ಕೋಷ್ಟಕ (ಶಿಕ್ಷಣ ಒಂದಿಷ್ಟು ವಿವರ) ದಲ್ಲಿದೆ.

## ಆರೋಗ್ಯ ಮೂಲಭೂತ ಸೌಕರ್ಯ

'ಆರೋಗ್ಯ' ಹಾಗೂ 'ಶಿಕ್ಷಣ' ಸ್ವಸ್ಥ ಸಮಾಜದ ನಿರ್ಮಾಣಕ್ಕೆ ಆಧಾರ ಸ್ತಂಭಗಳು ಎನ್ನುವ ಮಾತಿದೆ. ಒಂದು ಸಮಾಜದ ಆರ್ಥಿಕ ಪ್ರಗತಿಯು ಜನರ ಆರೋಗ್ಯ ಸ್ಥಿತಿಯನ್ನು ನಿರೂಪಿಸುವುದಿಲ್ಲ ಎಂಬುದಕ್ಕೆ ಬೆಂಗಳೂರು ಒಂದು ಸ್ಪಷ್ಟ ನಿದರ್ಶನ. ಮಾಹಿತಿ ತಂತ್ರಜ್ಞಾನದಂತೆ ಬೆಂಗಳೂರಿನ ಸುಸಜ್ಜಿತ ಉನ್ನತ ತಂತ್ರಜ್ಞಾನದ ಆಸ್ಪತ್ರೆಗಳೂ ವಿಶ್ವದ ಗಮನ ಸೆಳೆದಿವೆ. ಬಹುರಾಷ್ಟ್ರೀಯ ಆಸ್ಪತ್ರೆಗಳೂ ನಗರದಲ್ಲಿವೆ. ಬೆಂಗಳೂರಿನ ಹೃದಯ, ಮೂತ್ರಪಿಂಡ, ಅರ್ಬುದ, ನರವಿಜ್ಞಾನ, ಕಣ್ಣು ಆಸ್ಪತ್ರೆಗಳು ರಾಷ್ಟ್ರದಲ್ಲೇ ಅತ್ಯುತ್ತಮ ಎಂದು ಹೆಸರುವಾಸಿಯಾಗಿವೆ. ಆದರೆ ೧ ಲಕ್ಷ ಜನಸಂಖ್ಯೆಗೆ ೬೯ ಹಾಸಿಗೆಗಳಿದ್ದು ರಾಜ್ಯದ ೧೪ನೇ ಸ್ಥಾನದಲ್ಲಿದೆ. ರಾಜ್ಯದಲ್ಲಿ ೧ ಲಕ್ಷ ಜನರಿಗೆ ೭೫ ಹಾಸಿಗೆಗಳು ಲಭ್ಯವಿವೆ. ಪ್ರತಿ ಲಕ್ಷ ಸಂಖ್ಯೆಗೆ ರಾಜ್ಯದಲ್ಲಿ ೨೭ ವೈದ್ಯರಿದ್ದರೆ ಬೆಂಗಳೂರಿನಲ್ಲಿ ೨೮ ಆಗಿದೆ. ರಾಜ್ಯದಲ್ಲಿ ೧೭೭ ಸರ್ಕಾರಿ ಆಸ್ಪತ್ರೆಗಳಲ್ಲಿ ೨೩,೨೭೩ ಹಾಸಿಗೆಗಳಿವೆ. ಇದು ಬೆಂಗಳೂರಿನಲ್ಲಿ ೨೧ ಮತ್ತು ೪,೩೨೭, ಖಾಸಗಿ ಆಸ್ಪತ್ರೆಗಳಲ್ಲಿ ರಾಜ್ಯ-ರಾಜಧಾನಿಯದು ೪೯-೬೧ ಇದ್ದು, ರಾಜ್ಯದ ಖಾಸಗೀ ಆಸ್ಪತ್ರೆಯ ಶೇ. ೭೫ರಷ್ಟು ಹಾಸಿಗೆ ಬೆಂಗಳೂರಿನಲ್ಲಿಯೇ ಇವೆ.

**ಆರೋಗ್ಯ – ಕೆಲವು ಅಂಕಿ-ಸಂಖ್ಯೆಗಳು (೨೦೦೩ ಮಾರ್ಚ್-೩೧ರಲ್ಲಿ)**

| ಕ್ರ. ಸಂ. | ವಿವರ | ಬೆಂಗಳೂರು | ಕರ್ನಾಟಕ |
|---|---|---|---|
| ೧ | ಆಸ್ಪತ್ರೆ (ಸರ್ಕಾರ) | ೧೨ | ೧೭೭ |
| ೨ | ಆಸ್ಪತ್ರೆ (ಸರ್ಕಾರ) ಹಾಸಿಗೆ | ೪,೩೨೭ | ೨೬,೨೩೮ |
| ೩ | ಆಸ್ಪತ್ರೆ (ಖಾಸಗಿ) | ೪೧ | ೬ |
| ೪ | ಆಸ್ಪತ್ರೆ (ಖಾಸಗಿ) ಹಾಸಿಗೆ | ೩,೯೯೨ | ೫,೨೫೭ |
| ೫ | ಭಾರತೀಯ ವೈದ್ಯ ಪದ್ಧತಿ | ೭ | ೧೦೩ |
| ೬ | ಭಾರತೀಯ ವೈದ್ಯ ಪದ್ಧತಿ ಹಾಸಿಗೆ | ೩೯೬ | ೧,೫೩೫ |
| ೭ | ಪ್ರಾಥಮಿಕ ಆರೋಗ್ಯ ಕೇಂದ್ರ | ೩೧ | ೧,೬೯೪ |
| ೮ | ಪ್ರಾಥಮಿಕ ಆರೋಗ್ಯ ಕೇಂದ್ರ (ಹಾಸಿಗೆ) | ೫೧೬ | ೧೫,೭೭೫ |
| ೯ | ಪ್ರಾಥಮಿಕ ಆರೋಗ್ಯ ಘಟಕ | ೪೨ | ೫೮೨ |
| ೧೦ | ಡಿಸ್ಪೆನ್ಸರಿ | ೬೫ | ೨೦೮ |
| ೧೧ | ಭಾರತೀಯ ವೈದ್ಯ ಪದ್ಧತಿ ಡಿಸ್ಪೆನ್ಸರಿ | ೧೩ | ೬೩೯ |
| ೧೨ | ಕುಟುಂಬ ಕಲ್ಯಾಣ ಕೇಂದ್ರ | ೪೭ | ೪೫೯ |
| ೧೩ | ಕುಟುಂಬ ಕಲ್ಯಾಣ ಉಪಕೇಂದ್ರ | ೧೪೦ | ೮,೧೪೩ |
| ೧೪ | ಸಂತಾನ ಹರಣ ಶಸ್ತ್ರಚಿಕಿತ್ಸೆ | ೪೪,೮೫೪ | ೩,೯೮,೯೯೩ |
| ೧೫ | ಔಷಧಿ ಅಂಗಡಿ – ಚಿಲ್ಲರೆ | ೩,೧೪೦ | ೧೩,೧೬೦ |
| ೧೬ | ಔಷಧಿ ಅಂಗಡಿ – ಪರಿಮಿತಿಗೊಳಿಸಿದೆ | ೨೬೦ | ೫೯೬ |
| ೧೭ | ರಕ್ತನಿಧಿ | ೪೯ | ೧೨೪ |
| ೧೮ | ಪೋಲಿಯೊ ಮತ್ತು ಡಿ.ಪಿ.ಟಿ. ಲಸಿಕೆ | ೧,೧೪,೧೯೨ | ೧೦,೭೯,೨೨೬ |
| ೧೯ | ಬಿ.ಸಿ.ಜಿ. ಮತ್ತು ಡಿ.ಪಿ.ಟಿ. ಲಸಿಕೆ | ೧,೦೮,೯೧೫ | ೧೧,೧೫,೨೭೦ |
| ೨೦ | ದಡಾರ ಮತ್ತು ಡಿ.ಪಿ.ಟಿ. ಲಸಿಕೆ | ೧,೦೮,೨೦೫ | ೧೦,೩೦,೬೪೯ |
| ೨೧ | ಹೆರಿಗೆ ನುರಿತ ಸೇವೆ | ೯೦.೬% | ೫೯% |
| ೨೨ | ರೋಗ ನಿರೋಧಕ ಚುಚ್ಚುಮದ್ದು | ೭೭.೬% | ೫೩.೪% |

## ನೀರು : ತೀರದ ದಾಹ, ತಿಳಿಯದ ಮೌಲ್ಯ

ಮಂಡ್ಯ ಜಿಲ್ಲೆಯಲ್ಲಿ ನೀರಾವರಿ (ಕೃಷಿ) ಬಳಕೆಯಾಗುವ ನೀರಿಗಿಂತ ಹೆಚ್ಚು ಕಾವೇರಿ ನೀರು ಬೆಂಗಳೂರಿಗೆ ಸರಬರಾಜಾಗುತ್ತದೆ. ಪ್ರತಿದಿನ ೮೫೦ ದಶಲಕ್ಷ ಲೀಟರ್ ನೀರು, ಕಾವೇರಿ, ತಿಪ್ಪಗೊಂಡನಹಳ್ಳಿಯಿಂದ ತರಲಾಗುತ್ತಿದೆ. ನಗರದಲ್ಲಿ ಸುಮಾರು ೩.೫ ಲಕ್ಷ ಕೊಳವೆ ಬಾವಿಗಳಿದ್ದು ಒಂದು ದಿನಕ್ಕೆ ಸರಾಸರಿ ೧೦೦೦ ಲೀಟರ್‌ನಂತೆ ೩೫ ದಶಲಕ್ಷ ಲೀಟರ್ ನೀರು ಬಳಕೆಯಾಗುತ್ತಿದೆ. ಅಂತರ ಜಲಮಟ್ಟ ೩೨೦ ಅಡಿ ಕೆಳಗಿಳಿದಿದೆ. ಅಂತರ ಜಲ ಬಳಕೆ ಶೇ. ೬೮.೯೩ರಷ್ಟಿದ್ದು, ರಾಜ್ಯದ ಸರಾಸರಿ ಬಳಕೆ ಶೇ. ೩೬.೦೭ರ

## ಶಿಕ್ಷಣ ಒಂದಿಷ್ಟು ವಿವರ (೨೦೦೨ ಮಾರ್ಚ್ ೩೧ರಲ್ಲಿ)

| ಕ್ರ.ಸಂ. | ವಿವರ | ಬೆಂಗಳೂರು | | ಕರ್ನಾಟಕ | |
|---|---|---|---|---|---|
| | | ಸಂಖ್ಯೆ | ವಿದ್ಯಾರ್ಥಿಗಳು | ಸಂಖ್ಯೆ | ವಿದ್ಯಾರ್ಥಿಗಳು |
| ೧ | ಪ್ರಾಥಮಿಕ ಶಾಲೆಗಳು | ೨,೭೭೨ | ೮,೯೭,೩೧೪ | ೫೦,೩೩೨ | ೮೫,೮೧,೧೫೯ |
| ೨ | ಪ್ರೌಢ ಶಾಲೆಗಳು | ೧,೧೭೭ | ೨,೫೬,೩೭೫ | ೮,೮೦೩ | ೧೯,೫೪,೬೬೧ |
| ೩ | ಶಿಕ್ಷಕ-ವಿದ್ಯಾರ್ಥಿ ಅನುಪಾತ (೬೫ ವಿದ್ಯಾರ್ಥಿಗಳಿಗೆ ಒಬ್ಬರು ಶಿಕ್ಷಕರು) | | ೧ : ೬೫ | – | ೧ : ೩೪ |
| ೪ | ಪದವಿಪೂರ್ವ ಕಾಲೇಜು | ೨೬೮ | ೫೩,೩೪೭ | ೨,೧೪೦ | ೩,೨೧,೩೬೮ |
| ೫ | ಪಾಲಿಟೆಕ್ನಿಕ್ | ೫೬ | ೧೪,೪೯೬ | ೧೮೭ | ೫೨,೭೯೮ |
| ೬ | ಇಂಜಿನಿಯರಿಂಗ್ ಕಾಲೇಜ್ | ೫೫ | ೩೨,೦೪೨ | ೧೨೯ | ೮೫,೯೫೩ |
| ೭ | ವೈದ್ಯಕೀಯ ಕಾಲೇಜ್ | ೬ | ೬೮೦ | ೨೪ | ೩,೩೦೫ |
| ೮ | ಭಾರತೀಯ ವೈದ್ಯ ಪದ್ಧತಿ | ೭ | ೮೧೫ | ೫೯ | ೮,೯೩೦ |
| ೯ | ದಂತ ಶಿಕ್ಷಣ | ೧೪ | ೬೬೫ | ೩೭ | ೨,೧೪೮ |
| ೧೦ | ಪದವಿ ಕಾಲೇಜುಗಳು | ೨೦೦ | ೭೦,೩೪೧ | ೯೭೧ | ೩,೫೩,೦೨೧ |
| ೧೧ | ಕೈಗಾರಿಕಾ ತರಬೇತಿ ಶಾಲೆ | ೧೮೧ | ೨೮,೪೦೦ | ೪೫೬ | ೧,೦೯,೪೪೦ |
| ೧೨ | ವಿಶ್ವವಿದ್ಯಾಲಯಗಳು | ೭ | – | ೧೬ | – |
| ೧೩ | ಗ್ರಂಥಾಲಯ | ೨೩೩ | – | ೩,೨೮೬ | – |

ಬೆಂಗಳೂರು ಶಿಕ್ಷಣದಲ್ಲಿ ಮುಂದಿದೆ ಎನ್ನುವುದು ಒಪ್ಪಿತವಾದ ಸಂಗತಿಯಾದರೂ ಸರ್ಕಾರವು ನಡೆಸುವ ವಿದ್ಯಾಸಂಸ್ಥೆಗಳು ರಾಜ್ಯ ಸರಾಸರಿಗಿಂತ ಕಮ್ಮಿಯಿದೆ. ಬೆಂಗಳೂರಿನಲ್ಲಿ ಪ್ರತಿಲಕ್ಷ ಜನಕ್ಕೆ ೬೫ ಶಾಲೆಗಳಿದ್ದರೆ, ರಾಜ್ಯದಲ್ಲಿ ೯೪ ಶಾಲೆಗಳಿವೆ.

ಎರಡರಷ್ಟಿದೆ. ಕರ್ನಾಟಕದ ತಲಾವಾರು ನೀರಿನ ಬಳಕೆ ೬೭ ಲೀಟರ್‌ಗಳಿಗೆ ಪ್ರತಿಯಾಗಿ ಬೆಂಗಳೂರಿನಲ್ಲಿ ೪೯ ಲೀಟರ್ ಆಗಿದೆ. ಸುರಕ್ಷಿತ ನೀರಿನ ಲಭ್ಯತೆಗೆ ಕ್ರಮವಾಗಿ ಶೇ. ೫೭.೫೬ ಮತ್ತು ಶೇ. ೫೭.೪೩ ಆಗಿದೆ.

ಮಳೆಯ ನೀರಿನಲ್ಲಿ ಶೇ. ೧೦-೧೫ ಭೂಮಿಯ ಕೆಳಪದರ ಸೇರುತ್ತದೆ. ಬೆಂಗಳೂರಿನಲ್ಲಿ ಎಲ್ಲೆಡೆ ಕಾಂಕ್ರಿಟ್ ಹಾಕಿರುವುದರಿಂದ ಅದರ ಪ್ರಮಾಣ ಶೇ. ೫ರಷ್ಟು ಮಾತ್ರ ಎಂದು ತಜ್ಞರ ಅಭಿಪ್ರಾಯ.

ಬೆಂಗಳೂರಿನ ಅಂತರ ಜಲಮಟ್ಟ ಅಪಾಯಕಾರಿ ಗೆರೆ ದಾಟಿದೆ. ಇಡೀ ನಗರ ಜಿಲ್ಲೆಯನ್ನು ಕಪ್ಪುಪಟ್ಟಿಗೆ ಸೇರಿಸಿದ್ದಾರೆ. (ಕಪ್ಪು ಪಟ್ಟಿ ಎಂದರೆ ಅತೀ ಮಿತಿಮೀರಿ ಅಂತರ ಜಲ ಬಳಕೆ). ಕೊಳವೆಬಾವಿಗಳ ನಡುವೆ ಇಷ್ಟು ಅಂತರ ಇರಬೇಕು ಎಂಬ ಕಾನೂನನ್ನು ಪೂರ್ಣವಾಗಿ ನಿರ್ಲಕ್ಷಿಸಲಾಗಿದೆ. ನೀರಿನ ಮಾರಾಟ ನಿಷೇಧಿಸಿದ್ದರೂ ಅವ್ಯಾಹತವಾಗಿ ನಡೆದಿದೆ. ಬೆಂಗಳೂರಿನಲ್ಲಿ ಕುಡಿಯುವ ನೀರಿಗಿಂತ ಕೈಗಾರಿಕೆಗೆ ಹೆಚ್ಚು ನೀರು ಬಳಕೆಯಾಗುತ್ತದೆ. ನಗರದ ನೀರಿನ ಬಳಕೆಯಲ್ಲಿ ಕೈಗಾರಿಕೆಗೆ ಶೇ. ೫೫ರಷ್ಟು ಬಳಕೆಯಾಗುತ್ತದೆ. ಬೆಂಗಳೂರಿನ ಹವಾಮಾನದಲ್ಲಿ ತಾಪಮಾನ ಹೆಚ್ಚಲು ನಾಶ ಮಾಡಿದ ಕೆರೆಗಳು ಮತ್ತು ಮಿತಿಮೀರಿದ ಅಂತರ ಜಲ ಬಳಕೆಯೇ ಕಾರಣ. ೨೦ನೇ ಶತಮಾನ ಆರಂಭದಲ್ಲಿ ವಿಶ್ವದಲ್ಲಿಯೇ ಅತ್ಯಂತ ಹೆಚ್ಚಿನ ಬಿಡಿ ಜಲಾಶಯಗಳು (ಕೆರೆ) ಇರುವ ನಗರ ಬೆಂಗಳೂರು ಆಗಿತ್ತು. ಕಳೆದ ಶತಮಾನದಲ್ಲಿ ಅತಿ ಹೆಚ್ಚು ಕೆರೆಗಳನ್ನು ನಾಶ ಮಾಡಿದ ದಾಖಲೆಯೂ ನಗರಕ್ಕೇ ಸಲ್ಲುತ್ತದೆ. ೧೯೧೩ರಲ್ಲಿ ೧೪೧ ಕೆರೆಗಳಿದ್ದವು ಎಂದು 'ಮೈಸೂರು ಕನ್ನಡಿ' ಪುಸ್ತಕದಲ್ಲಿ ಹೇಳಲಾಗಿದೆ. ಬೆಂಗಳೂರು ನಗರ ಕಲಾ ಆಯೋಗವು ಪ್ರಕಟಿಸಿರುವ 'ನಿಮ್ಮ ಬೆಂಗಳೂರು ಕೆರೆಗಳು'ನಲ್ಲಿ ''ಬೆಂಗಳೂರು ನಗರ ಸಮುಚ್ಚಯ ಪ್ರದೇಶದಲ್ಲಿ ೪೬ ಉಪಯೋಗಿಸದೇ ಇರುವ ಕೆರೆಗಳು ಹಾಗೂ ೮೧ ಜೀವಂತ ಕೆರೆಗಳು ಇವೆ. ಉಪಯೋಗಿಸದೇ ಇರುವ ಕೆರೆಗಳಲ್ಲಿ ೧೦ನ್ನು ತೋಟಗಾರಿಕೆ ಇಲಾಖೆ, ಬೆಂಗಳೂರು ಮಹಾನಗರ ಪಾಲಿಕೆ, ಅಭಿವೃದ್ಧಿ ಪ್ರಾಧಿಕಾರಗಳು ಹಾಗೂ ಇತರ ಸಂಸ್ಥೆಗಳು ಬಳಸಿಕೊಳ್ಳುತ್ತಿವೆ'' ಎಂದು ಹೇಳಲಾಗಿದೆ.

೨೦೦೨-೦೩ರಲ್ಲಿ ಕುಡಿಯುವ ನೀರಿನ ವ್ಯವಸ್ಥೆಗೆ ಕರ್ನಾಟಕ ಸರ್ಕಾರ ೨೫೮ ಕೋಟಿಗಳನ್ನು ಖರ್ಚು ಮಾಡಿದ್ದು, ಅದರಲ್ಲಿ ಬೆಂಗಳೂರಿಗೆ ನೀರು ಸರಬರಾಜು ಮಾಡುವ ಕಾವೇರಿ ೪ನೇ ಹಂತಕ್ಕೆ ೧೬೦ ಕೋಟಿ ಖರ್ಚು ಮಾಡಿದೆ. ೨೦೦೨ರವರೆಗೆ ಕಾವೇರಿ ನೀರು ಸರಬರಾಜು ವ್ಯವಸ್ಥೆಗೆ ೭೫೪.೭೩ ಕೋಟಿ ಖರ್ಚಾಗಿದೆ. (ಇಂದಿನ ಮೌಲ್ಯದಲ್ಲಿ ಸುಮಾರು ೧,೮೦೦ ಕೋಟಿಗಳಾಗುತ್ತದೆ). 'ಬೆಂಗಳೂರಿಗೆ ಕುಡಿಯುವ ನೀರು ತರಲು ಖರ್ಚು ಮಾಡಿದ ಹಣದಲ್ಲಿ ರಾಜ್ಯದ ೨೭,೦೦೦ ಹಳ್ಳಿಗಳಿಗೆ ಕುಡಿಯುವ ನೀರು ಕೊಡಬಹುದಿತ್ತು' ಎನ್ನುವ ನಿಜಲಿಂಗಪ್ಪನವರ ಮಾತು ಉಲ್ಲೇಖನೀಯ.

**ಪ್ರಪಂಚದಲ್ಲಿ ಅತಿ ಹೆಚ್ಚು ಬಾರ್, ರಾಷ್ಟ್ರದಲ್ಲೇ ಅತಿ ಹೆಚ್ಚು ವಾಹನಗಳು**

ಪ್ರಪಂಚದಲ್ಲೇ ಅತಿ ಹೆಚ್ಚು ಸಂಖ್ಯೆಯ ಬಾರುಗಳು ಮತ್ತು ಪಬ್‌ಗಳಿರುವ ನಗರ ಬೆಂಗಳೂರು. ರಾಜ್ಯದಲ್ಲಿ ಬಳಕೆಯಾಗುವ ಮದ್ಯ ೨೬,೯೨೨ ಸಾವಿರ ಲೀಟರ್‌ಗಳಾಗಿದ್ದು ಬೆಂಗಳೂರಿನಲ್ಲಿ ೧೦,೬೨೫ ಸಾವಿರ ಲೀಟರ್; ಹಾಗೇ ಕ್ರಮವಾಗಿ ೪೭,೧೧೮ ಸಾವಿರ ಮತ್ತು ೧೮,೦೧೫ ಸಾವಿರ ಲೀಟರ್ ಬೀರ್ ಖರ್ಚಾಗುತ್ತಿದೆ. ರಾಜ್ಯದ ೨೦೦೪.೧೧ ಕೋಟಿ ಆದಾಯದಲ್ಲಿ ೫೭೪.೨೬ ಕೋಟಿ ಬೆಂಗಳೂರಿನ ಪಾಲು.

ಬೆಂಗಳೂರಿನಲ್ಲಿ ೧೬,೮೨,೪೬೪ ವಾಹನಗಳಿವೆ; ಅಂದರೆ ಪ್ರತಿ ನಾಲ್ಕು ಜನರಿಗೆ ಒಂದು ವಾಹನ ಮತ್ತು ಪ್ರತಿ ೧೦ ಜನರಿಗೆ ಒಂದು ದೂರವಾಣಿಯಿದೆ. ಬೆಂಗಳೂರಿನ ಚರಂಡಿಗಳ ಉದ್ದವೇ ೨೫,೦೦೦ ಕಿ.ಮೀ. ಬೆಂಗಳೂರಿನ ನಾಗರಿಕರಲ್ಲಿ ೧ ಲಕ್ಷದಷ್ಟು ಜನರಿಗೆ ಪಾದಚಾರಿ ರಸ್ತೆ, ಬಸ್ಸು, ರೈಲು ನಿಲ್ದಾಣಗಳೇ ಮನೆಯಾಗಿವೆ. ಬೆಂಗಳೂರಿನ ಕೊಳೆಗೇರಿಗಳ ಲೆಕ್ಕ ಇಟ್ಟವರು ಯಾರೂ ಇಲ್ಲ, ಏಕೆಂದರೆ ಬೆಂಗಳೂರು ನಗರ ಬೆಳೆಯುತ್ತಿರುವ ವೇಗಕ್ಕಿಂತ ಹೆಚ್ಚು ವೇಗದಲ್ಲಿ

| ಕ್ರ. ಸಂ. | ವಿವರ | ಬೆಂಗಳೂರು | ಕರ್ನಾಟಕ |
|---|---|---|---|
| ೧. | ಮೋಟಾರ್ ಸೈಕಲ್ | ೧೨,೩೨,೧೭೯ (೪೦.೩೮%) | ೩೦,೫೧,೪೬೦ |
| ೨. | ಕಾರ್ | ೨,೩೫,೯೯೮ (೫೮.೭೪%) | ೪,೦೧,೭೦೦ |
| ೩. | ಆಟೋರಿಕ್ಷಾ | ೬೯,೨೩೭ | ೧,೬೬,೩೪೦ |
| ೪. | ಒಟ್ಟು ವಾಹನ | ೧೬,೮೨,೪೬೪ | ೪೧,೪೪,೫೯೦ |
| ೫. | ರಾಜ್ಯ ಸರ್ಕಾರದ ಬಸ್ | ೨,೩೭೨ | ೧೨,೦೯೩ |
| ೬. | ರಸ್ತೆ | ೯,೩೯೭ | ೧,೪೭,೦೯೩ |
| ೭. | ಅಂಚೆ ಕಚೇರಿ | ೩೬೩ | ೯,೯೦೧ |
| ೮. | ದೂರವಾಣಿ ವಿನಿಮಯ ಕೇಂದ್ರ | ೧೧೦ | ೨,೬೩೦ |
| ೯. | ದೂರವಾಣಿ | ೮,೪೫,೮೭೨ (೩೨.೬%) | ೨೫,೯೧,೫೫೩ |
| ೧೦. | ನೆಟ್ಟ ಸಸಿ (ಲಕ್ಷಗಳಲ್ಲಿ) | ೭.೪೩ | ೩೫೮.೦೨ |
| ೧೧. | ಸಾರಾಯಿ ಅಂಗಡಿ | ೫೨೦ | ೧೨,೯೩೫ |
| ೧೨. | ವೈನ್ ಶಾಪ್ | ೮೫೬ | ೩೭೩೮ |
| ೧೩. | ಬಾರ್‌ಗಳು | ೧,೩೫೩ | ೩,೪೩೬ |
| ೧೪. | ಕ್ಲಬ್ | ೬೯ | ೧೩೧ |
| ೧೫. | ರಸ್ತೆ೧೦೦ ಚ.ಕಿ.ಮೀ.ಗೆ | ೧೧೦ | ೯೦ |
| ೧೬. | ಅಂಗಡಿ ಮುಂಗಟ್ಟು (ವ್ಯಾಪಾರ, ಹೋಟಲ್, ಸಾರಿಗೆ) | ೧,೧೫,೮೯೦ | ೭,೫೩,೨೭೪ |

ಬೆಳೆಯುತ್ತಿವೆ. ಅವು ಕಡಿಮೆಯೆಂದರೂ ೪೦೦ ಇವೆ ಎಂದು ಅಂದಾಜು. ರಾಜ್ಯ ರಸ್ತೆ ಸಾರಿಗೆಯು ೧೨,೦೯೩ ಬಸ್ಸುಗಳನ್ನು ಓಡಿಸುತ್ತಿದ್ದು ಬೆಂಗಳೂರು ಮಹಾನಗರ ಸಾರಿಗೆಯಲ್ಲೆ ೨,೩೭೨ ಬಸ್ ಸಂಚರಿಸುತ್ತಿವೆ. ಇಂತಹ ಹಲವು ಮಾಹಿತಿಗಳು ಕೆಳಗೆ ಕೋಷ್ಟಕದಲ್ಲಿವೆ. ಇಲ್ಲಿ ಖಾಸಗೀ ಸಂಸ್ಥೆಯ ಫೋನ್, ಆಸ್ಪತ್ರೆ ಮುಂತಾದ ವಿವರ ಕೊಡಲು ಸಾಧ್ಯವಿಲ್ಲ.

ಇಲ್ಲಿ ಎಲ್ಲ ಸಂಗತಿಗಳನ್ನು ಪ್ರಸ್ತಾಪಿಸಲಾಗಿಲ್ಲ. ಕೆಲವು ಸಂಗತಿಗಳನ್ನು ವಿವೇಚಿಸಿ ಉಳಿದಂತೆ ಕೇವಲ ಅಂಕಿ-ಅಂಶಗಳನ್ನು ಮಾತ್ರ ಕೊಟ್ಟಿದೆ. ಈ ಲೇಖನವು ಬೆಂಗಳೂರು-ಕರ್ನಾಟಕಗಳ ಸಾಮ್ಯತೆ, ಸ್ಥಾನಮಾನಗಳನ್ನು ಪರಿಚಯಿಸುವ ಕೆಲಸ ಮಾಡಿದೆ.

**ರಾ. ನಂ. ಚಂದ್ರಶೇಖರ ಮತ್ತು ರಾ. ಪ್ರಭುಶಂಕರ**
ಶ್ರೀ ಲಕ್ಷ್ಮೀ ಕೆಮಿಕಲ್ಸ್, ನಂ. ೬, ರಾಘವೇಂದ್ರ ಕಾಂಪ್ಲೆಕ್ಸ್,
೨ನೇ ಕ್ರಾಸ್ ರಸ್ತೆ, ಸಿ.ಕೆ.ಜಿ.ಗಾರ್ಡನ್, ಬೆಂಗಳೂರು - ೫೬೦ ೦೭೨

ರಾಮಣ್ಣ ಆರ್ಡ್ಡೆಜ್ಜೆ



'ಸ್ವಾತಂತ್ರ್ಯ ನನ್ನ ಜನ್ಮ ಸಿದ್ಧ ಹಕ್ಕು' ಎಂದು ಸಮಾಜ ಘೋಷಿಸುತ್ತಿದ್ದ ಕಾಲದಲ್ಲಿ 'ಸಮಾನತೆ ನಮ್ಮ ಜೀವನ ಧರ್ಮ' ಎಂದು ಧ್ವನಿ ಎತ್ತಿ ಹೇಳಿದ ದಾರ್ಶನಿಕ, ಮಾನವೀಯತೆ ಮೆರೆದ ಮಹನೀಯ 'ಗೋಪರಾಜು ರಾಮಚಂದ್ರರಾವ್' (ಗೋರಾ) ತಲತಲಾಂತರಕ್ಕೆ ಸ್ಫೂರ್ತಿಯಾಗಿ ನಿಲ್ಲುತ್ತಾರೆ. ಕೇವಲ ನಾಸ್ತಿಕನಾಗೇ ಆಗಿರದೆ ಪ್ರಜೆಗಳೇ ಪ್ರಭುಗಳು ಎಂದು ಮೊದಲ ಬಾರಿಗೆ ನಿನಾದಿಸಿ, ರಾಜ್ಯದಲ್ಲಿ ಆ ದಿಶೆಯಲ್ಲಿ ವಿಚಾರಗಳನ್ನು ಚಿಗುರಿಸಿದ ಸಮಾಜವಾದಿಯ ಶತ ಜಯಂತಿಯ ಸಂದರ್ಭದಲ್ಲಿ ಅವರನ್ನು ಸ್ಮರಿಸಿಕೊಳ್ಳುವುದು ಉಚಿತ. ಗುಂಟೂರು ಜಿಲ್ಲೆಯ ಕೊಲತಲೂರು ಗ್ರಾಮ. ಕುಲ್ಕರ್ಣಿಕೆಯನ್ನು ವಾರಸತ್ವವಾಗಿ ಸ್ವೀಕರಿಸಿದ ಗೋಪರಾಜು ವಂಶದಲ್ಲಿ ಜನಿಸಿದ ರಾಮಚಂದ್ರರಾವ್ ತಿಳುವಳಿಕೆ ಮೂಡುತ್ತಿದ್ದಂತೆ ಸಾಮಾಜಿಕ ವ್ಯವಸ್ಥೆಯ ಮೇಲೆ, ದುರಾಡಳಿತದ ಮೇಲೆ ತನ್ನ ಅವಿಶ್ವಾಸವನ್ನು ವ್ಯಕ್ತಪಡಿಸುತ್ತಿದ್ದರು. ಮಾನವೀಯ ಮೌಲ್ಯಗಳನ್ನು ಹೇಳುತ್ತಲೇ ನಾಸ್ತಿಕತೆಯ ಪ್ರಚಾರಕ್ಕೆ ಸಮರ ಸಾರಿದರು. ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ಅಜ್ಜ ಗೋಪರಾಜು ವೆಂಕಟ ನರಸಿಂಹರಾವ್ ವಿಶಾಖಪಟ್ಟಣದ ಬಳಿ ವಿಜಯನಗರದ ಅರಸರ ಆಸ್ಥಾನದಲ್ಲಿ ಹುದ್ದೆಗೆ ಸೇರಿಕೊಂಡರು. ಒರಿಸ್ಸಾ ರಾಜ್ಯದ ಗಂಜಾಂ ಜಿಲ್ಲೆಯ ಛತ್ರಪುರದಲ್ಲಿ ವಾಸಮಾಡತೊಡಗಿದರು. ಅವರ ಮಗ ವೆಂಕಟಸುಬ್ಬರಾವ್, ರಾಜ್ಯಲಕ್ಷ್ಮಿ ದಂಪತಿಗಳಿಗೆ ೧೯೦೨ ನವೆಂಬರ್ ೧೫ರಂದು ಕಾರ್ತಿಕ ಹುಣ್ಣಿಮೆಯಂದು ರಾಮಚಂದ್ರರಾವ್ ಜನಿಸಿದರು. ಅಪ್ಪಟ ಶ್ರೋತ್ರೀಯ ಕುಟುಂಬ ಅವರದು. ಮನೆ ತುಂಬ ಆಧ್ಯಾತ್ಮಿಕ ವಾತಾವರಣ. ದಿನನಿತ್ಯ ಭಜನೆ, ಪೂಜೆಗಳು ನಡೆಯುತ್ತಿದ್ದವು. ಈ ಹಿನ್ನೆಲೆಯಲ್ಲೇ 'ಗೋರಾ' ಅವರ ಬಾಲ್ಯ ಕಳೆಯಿತು. ಹನ್ನೊಂದು ಜನ ಒಡಹುಟ್ಟಿದವರಲ್ಲಿ ಮೂರು ಜನ ಹೆಣ್ಣುಮಕ್ಕಳು ಸತ್ತುಹೋದರು. ಉಳಿದ ಎಂಟು ಜನರಲ್ಲಿ ಅಕ್ಕ ಕೃಷ್ಣವೇಣಿ, ಅಣ್ಣ ವೆಂಕಟನರಸಿಂಹರಾವ್‌ರ ನಂತರದವರು ಗೋರಾ. ಅವರ ನಂತರ ಜನಿಸಿದವರೇ ಬಾಲತ್ರಿಪುರಸುಂದರಿ, ಅನುಸೂಯ, ಸೌಭಾಗ್ಯಂ, ಸಾಮ್ರಾಜ್ಯಂ, ಸಾಂಬಶಿವರಾವ್ ಅವರು. ತಂದೆ ಶೈವಭಕ್ತ. ಪುರಾಣ, ಇತಿಹಾಸ, ವೇದ, ಉಪನಿಷತ್ತುಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದ ಒಳ್ಳೆಯ ಪಂಡಿತ. ಇಪ್ಪತ್ತು ವರ್ಷಗಳು ತುಂಬುವವರೆಗೆ ತಂದೆಯವರ ಹಿಂದೆ ಗೆಜ್ಜೆ ಕಟ್ಟಿ ಭಜನೆಗಳಿಗೆ ಲಯಬದ್ಧವಾಗಿ ನರ್ತಿಸುತ್ತಿದ್ದ, ಹಣೆಗೆ ಮಂತ್ರಿಸಿದ ವಿಭೂತಿನಾಮ, ತಲೆಯ ಮೇಲೆ ಜುಟ್ಟು, ಪಂಚೆಯನ್ನುಟ್ಟು ಸಾಕ್ಷಾತ್ ಸನಾತನ ಪ್ರತಿನಿಧಿಯಂತೆ ಕಾಣಿಸುತ್ತಿದ್ದ ರಾಮಚಂದ್ರರಾವ್ ತನ್ನ ಸುತ್ತ ನಡೆಯುತ್ತಿದ್ದ ಅನ್ಯಾಯಗಳನ್ನು ನೋಡಿದ. ಸಮಾಜದ ಅಂಕುಡೊಂಕುಗಳನ್ನು ಗಮನಿಸಿದ. ಸಮಾಜದಲ್ಲಿ ಬೇರುಬಿಟ್ಟ ಮೂಢನಂಬಿಕೆಗಳನ್ನು ವೈಜ್ಞಾನಿಕ ರೀತಿಯಲ್ಲಿ ವಿಚಾರ ಮಾಡತೊಡಗಿದ. ಇಂಗ್ಲಿಷ್ ಶಿಕ್ಷಣದ ಬಗ್ಗೆ ಆಸಕ್ತಿ ತೋರಿಸಿದ್ದು ಅವರ ಬದುಕಿನಲ್ಲೊಂದು ತಿರುವು. ಮದ್ರಾಸಿನಲ್ಲಿ ಉನ್ನತ ಶಿಕ್ಷಣ. ಇಪ್ಪತ್ಮೂರನೇ ವಯಸ್ಸಿನಲ್ಲಿ ಮಧುರೈ ಕಾಲೇಜಿನಲ್ಲಿ ಬಾಟನಿ ಉಪನ್ಯಾಸಕರಾಗಿ ಉದ್ಯೋಗದ ಬದುಕು ಪ್ರಾರಂಭಗೊಂಡಿತು. ಬ್ರಹ್ಮಚಾರಿಯಾಗಿದ್ದುದರಿಂದ ಯಾರೂ ಮನೆ ಬಾಡಿಗೆಗೆ ಕೊಡಲಿಲ್ಲ. ಬಹಳ ದಿನಗಳಿಂದ ಖಾಲಿಯಿದ್ದ ೧೩ ಕೊಠಡಿಗಳಿರುವ ದೆವ್ವದ ಮನೆಯೊಂದು ಕಾಣಿಸಿತು. ಹಿಂದೆ ಮುಂದೆ ನೋಡದೆ ಆ ಮನೆಯನ್ನು ಬಾಡಿಗೆಗೆ ಹಿಡಿದ. ಮೊದಲು ಸಮಕಾಲೀನ ಸಮಾಜವನ್ನು ಅಧ್ಯಯನ ಮಾಡಿದ ಗೋರಾ ಆ ನಂತರ ಸಾಹಿತ್ಯವನ್ನು ಮಥಿಸಿದ. ಪ್ರಗತಿಯ ಪಥದಲ್ಲಿ ವ್ಯವಹರಿಸಲು ಕಲಿತುಕೊಂಡ. ಹಿರಿಯರ ಮೇಲಿನ ಗೌರವದಿಂದ ಅವರು ಗೊತ್ತುಪಡಿಸಿದ ಸಂಬಂಧದ ಕಡೆಗೇ ಆಸಕ್ತಿ ತೋರಿಸಿದ. ವಿಜಯನಗರ ಮಹಾರಾಣಿಯ ಸೂಚನೆಯ ಮೇರೆಗೆ ಕರಾವಳಿ ಪ್ರದೇಶದ ಸಂಪ್ರದಾಯಸ್ಥ ಕುಟುಂಬ ಕೂಚುಮಂಚಿಯವರ ಹೆಣ್ಣು ಮಗಳು ಸರಸ್ವತಿಯನ್ನು ಮದುವೆಯಾದ. ಅವಳು ಅವರ ಬಾಳಿನಲ್ಲಿ ಅರ್ಧಾಂಗಿಯಲ್ಲ, 'ಸಂಪೂರ್ಣಾಂಗಿ'. ಗೋರಾ ಮಾತಿನಲ್ಲಿ ಹೇಳುವುದಾದರೆ ಮುಕ್ಕಾಲು ಜೀವನ ಭಾಗಿ 'ಪೌನಾಂಗಿ'. ಅವರ ತೊಂಭತ್ನಾಲ್ಕು ವರ್ಷಗಳ ಇಳಿ ವಯಸ್ಸಿನಲ್ಲೂ ಕೂಡಾ ತುಂಬಾ ಲವಲವಿಕೆಯಿಂದ ಇದ್ದರು. ತನ್ನ ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳೊಂದಿಗೆ ಉಲ್ಲಾಸದಿಂದ ಸಮಯ ಕಳೆಯುತ್ತಿದ್ದಳು. ವಿಜಯವಾಡದಲ್ಲಿನ ನಾಸ್ತಿಕ ಕೇಂದ್ರದ ಉಸ್ತುವಾರಿ ಅವರದೇ. ಉದ್ಯೋಗದ ವರ್ಗಾವಣೆಯಿಂದ ಕೊಲಂಬೋಕ್ಕೆ ಹೊರಟ ಗೋರಾ ದಂಪತಿಗಳು ಅಲ್ಲಿ ಎಲ್ಲಾ ಧರ್ಮೀಯರೊಂದಿಗೆ ಪ್ರೀತಿಯಿಂದ ಬೆರೆಯುತ್ತಿದ್ದರು. ತಲತಲಾಂತರಗಳಿಂದ ಆಚರಣೆಯಲ್ಲಿದ್ದ ಮೂಢನಂಬಿಕೆಗಳು, ಅರ್ಥವಿಲ್ಲದ ಕುರುಡು ಭಾವನೆಗಳನ್ನು ಮನಸ್ಸಿನಿಂದ ತೆಗೆದುಹಾಕಿದರು. ಗ್ರಹಣ ಸಮಯದಲ್ಲಿ ಗರ್ಭಿಣಿ ಹೆಂಗಸು ಹೊರಗೆ ತಿರುಗಾಡಿದರೆ ಅಂಗವಿಕಲ ಮಗು ಜನಿಸುತ್ತದೆ ಎಂಬ ನಂಬಿಕೆಯನ್ನು ಹುಸಿಯೆಂದು ನಿರೂಪಿಸಿದರು. ರಾಹು ಕೇತುಗಳ ಗ್ರಹಣ, ದುರ್ಮುಹೂರ್ತ ಸಮಯದಲ್ಲಿ ಆ ದಂಪತಿಗಳು ಹೊರಬಂದು ಕೊಲೊಂಬೋ ಬೀದಿಗಳಲ್ಲಿ ಚೆಲ್ಲುಚೆಲ್ಲಾಗಿ ತಿರುಗಾಡಿದರು. ಮೂಢ

# ನಾಸ್ತಿಕವಾದಿ ಗೋರಾ

ಕೇವಲ ನಾಸ್ತಿಕನಾಗೇ ಆಗಿರದೆ ಪ್ರಜೆಗಳೇ ಪ್ರಭುಗಳು ಎಂದು ಮೊದಲ ಬಾರಿಗೆ ನಿನಾದಿಸಿ, ರಾಜ್ಯದಲ್ಲಿ ಆ ದಿಶೆಯಲ್ಲಿ ವಿಚಾರಗಳನ್ನು ಚಿಗುರಿಸಿದ ಸಮಾಜವಾದಿಯ ಶತ ಜಯಂತಿಯ ಸಂದರ್ಭದಲ್ಲಿ ಗೋಪರಾಜು ರಾಮಚಂದ್ರರಾವ್ ಅವರನ್ನು ಸ್ಮರಿಸಿಕೊಳ್ಳುವುದು ಉಚಿತ.

ವಿಶ್ವಾಸಗಳನ್ನು ತಿರಸ್ಕರಿಸಿದರು. ದಿನ ತುಂಬಿದ ಕೂಡಲೆ ಸರಸ್ವತಿಗೆ ಲಕ್ಷಣವಾದ ಹೆಣ್ಣು ಮಗು ಹುಟ್ಟಿತು. ಅವಳ ಹೆಸರು ಮನೋರಮ. ಮಕ್ಕಳ ಆರೈಕೆಯಲ್ಲಿ ಗೋರಾ ದಂಪತಿಗಳು ಆದರ್ಶವಾದರು. ಅವರು ತಮ್ಮ ಮಕ್ಕಳಿಗೆ ಇಟ್ಟ ಹೆಸರುಗಳಲ್ಲಿ ಕೂಡಾ ನಾವೀನ್ಯತೆಯಿತ್ತು. ೧೯೪೦ರಲ್ಲಿ ಕೆಲಸಕ್ಕೆ ರಾಜಿನಾಮೆ ಸಲ್ಲಿಸಿ ಸಮಾಜ ಸೇವೆಗೆ ಅವರು ಕಂಕಣಬದ್ಧರಾದರು. ಕೃಷ್ಣಾ ಜಿಲ್ಲೆ ಮುದನೂರು ಗ್ರಾಮದಲ್ಲಿ ದಾನಿಯೊಬ್ಬರು ಕೊಟ್ಟ ಸ್ಥಳದಲ್ಲಿ ದೇಶದಲ್ಲಿಯೇ ಮೊದಲ ಬಾರಿಗೆ ನಾಸ್ತಿಕ ಕೇಂದ್ರವನ್ನು ಸ್ಥಾಪಿಸಿದರು. ಸಾವಿರಾರು ಜನರನ್ನು ಪ್ರಭಾವಗೊಳಿಸಿದರು. ಹರಿಜನರು, ಬಡವರು, ಅಭಿಮಾನಿಗಳ ಬೆಂಬಲದಿಂದ ಸ್ವಂತ ಆಸ್ತಿ ಹೊಂದದೆ ಅವರ ಕುಟುಂಬ ವಿಸ್ತರಿಸಿತು. ಸಮಾಜವೇ ನಮ್ಮ ಕುಟುಂಬ ವೆನ್ನುವಂತೆ ಗೋರಾ ಹೇಳಿದ ಮಾತುಗಳನ್ನು, ನಂಬಿಕೆಗಳನ್ನು ಅವರ ಕುಟುಂಬ ದೊಳಗಿನ ಮೂರನೆ ತಲೆಮಾರಿನವರೂ ಸಹಿತ ಪಾಲಿಸುತ್ತಿದ್ದಾರೆ.



ಗೋರಾ ಕುಟುಂಬ

ಗೋರಾ ಅವರ ಮನೆಯಲ್ಲಿ ಹುಟ್ಟಿ ಬೆಳೆದವರ ಜೊತೆಗೆ ಅವರ ಸಹೋದರರು ಕೂಡಾ ಅವರ ಪ್ರಭಾವದಿಂದ ಅಂತರ್‌ಜಾತಿ ವಿವಾಹವಾದರು. ಅವರಲ್ಲಿ ಸೌಭಾಗ್ಯಳ ಸಂತಾನದಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಕಲಾವಿದರಾಗಿ, ಗುರುಗಳಾಗಿ ಖ್ಯಾತಿ ಪಡೆದ ಉಮಾ ರಾಮ್‌ರಾವ್, ಸುಮತಿ ಕೌಶಲ್‌ರಂಥವರಿದ್ದಾರೆ. ಸಿನಿಮಾ ನಟಿ ಭಾನುಪ್ರಿಯ ಮನೆಯ ಸೊಸೆಯಾದಳು. ಗೋರಾ ಅವರ ತಮ್ಮ ಸಾಂಬಶಿವರಾವ್ ಬಾಲ ವಿಧವೆ ಹೈಮವತಿಯನ್ನು ಮದುವೆಯಾದ. ಅವರಿಗೆ ನಾಲ್ಕು ಜನ ಗಂಡುಮಕ್ಕಳು, ಇಬ್ಬರು ಹೆಣ್ಣು ಮಕ್ಕಳಿದ್ದರೆ ಹದಿಮೂರು ಜನ ಮೊಮ್ಮಕ್ಕಳಿದ್ದಾರೆ. ಅವರೆಲ್ಲಾ ಗೋರಾರವರ ಮಾರ್ಗದರ್ಶನದಲ್ಲೇ ನಡೆಯುತ್ತಿದ್ದಾರೆ. ದೇವರನ್ನು ನಂಬದಿರುವುದು ನಾಸ್ತಿಕವಾದ. ಈ ವಾದದ ಜೊತೆಗೆ ಸಮಾಜವನ್ನು ಪ್ರೀತಿಸಬೇಕು. ಈ ಸಂದೇಶವನ್ನು ಕೊಡುತ್ತಿರುವ ಗೋರಾ ಅವರ ಕುಟುಂಬ ಇವೊತ್ತು ಅದೆಷ್ಟೋ ಜನಹಿತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ. ಘನತೆ ಗೌರವ, ಸುಖ ಸಂತೋಷಗಳನ್ನು ತ್ಯಾಗಮಾಡಿ ದಲಿತರ ಕೇರಿಗಳಲ್ಲಿ ತಿರುಗಿ ಅವರಿಗೆ ಶಿಕ್ಷಣ ನೀಡಿ ಜಾಗೃತಿಯನ್ನುಂಟುಮಾಡಿದ ಗೋರಾ ಅವರು ಜಾತಿ ವಿನಾಶಕ್ಕಾಗಿ ಕೃಷಿ ಮಾಡಿದರು. ಗಾಂಧಿ, ವಿನೋಬಾ ಭಾವೆಯವರೊಂದಿಗೆ ಸಮಾರಂಭಗಳಲ್ಲಿ ಭಾಗವಹಿಸಿ ವೇದಿಕೆಗಳ ಮೇಲೆ ಜಾತಿಯನ್ನು ಸೂಚಿಸುವ ಪ್ರಾರ್ಥನೆಗಳನ್ನು ವಿರೋಧಿಸಿದರು. ಕಾಲ್ನಡಿಗೆಯಿಂದ ಇಡೀ ದೇಶವನ್ನೇ ಸುತ್ತಿದರು. ಉನ್ನತ ಪದವಿಗಳಲ್ಲಿರುವವರು ಬಂಗಲೆಗಳನ್ನು ಬಿಟ್ಟು ಸಾಮಾನ್ಯ ಗೃಹಗಳಲ್ಲಿ ವಾಸಿಸಬೇಕೆಂದು, ದಲಿತರು, ಬಡವರ ಕೇರಿಗಳಲ್ಲಿ ತಿರುಗಾಡಬೇಕೆಂದು ಒಂದು ದೊಡ್ಡ ಚಳುವಳಿಯನ್ನೇ ಮಾಡಿದರು. 'ನೀವೆಲ್ಲಾ ನೌಕರರು, ಪ್ರಜೆಗಳೇ ನಿಮ್ಮ ಯಜಮಾನರು, ರಾಜಕೀಯ ಪಕ್ಷಗಳು ನಿಮ್ಮ ಯಜಮಾನರಲ್ಲ' ಎಂದು ಹೇಳುತ್ತಾ ಮಂತ್ರಿ, ಶಾಸಕರ ಕಣ್ಣು ತೆರೆಸಲು ಶತಪ್ರಯತ್ನ ಮಾಡಿದರು ಗೋರಾ. ಲೋಕನಾಯಕ ಜಯಪ್ರಕಾಶ್ ನಾರಾಯಣರವರು ಕೂಡಾ ಗೋರಾ ಅವರ ಚಳುವಳಿಗೆ ಸಹಕರಿಸಿದರು. ಫಲಪುಷ್ಪ ಬೆಳೆಯುವುದರ ಬದಲು ಕಾಯಿಪಲ್ಲೆ ಬೆಳೆಯುವುದರ ಕಡೆಗೆ ಪ್ರಾಮುಖ್ಯತೆಯನ್ನು ಕೊಡಬೇಕೆಂದರು. ಸಭೆ ಸಮಾರಂಭಗಳಲ್ಲಿ ಹೂವಿನ ಹಾರದ ಬದಲು ತರಕಾರಿ ಹಾರ ಹಾಕಿ ಹೊಸ ವಿಚಾರಗಳಿಗೆ ನಾಂದಿ ಹಾಡಿದರು. ನಾನಾ ಬಗೆಯ ಜಾತಿಮತ ಪಂಥಗಳ ಜನರು ಸೇವಿಸುವ ಆಹಾರ ಪದ್ಧತಿಗಳನ್ನು ಸಮನ್ವಯಗೊಳಿಸಿ ಸಹಪಂಕ್ತಿ ಭೋಜನಗಳನ್ನು ನಿರ್ವಹಿಸಿದರು. ಗ್ರಾಮೀಣ ಪ್ರದೇಶದಲ್ಲಿ ಅಧಿಕಾರ ವಿಕೇಂದ್ರೀಕರಣಕ್ಕಾಗಿ ಆ ದಿನಗಳಲ್ಲೇ ಕೃಷಿ ಮಾಡಿದರು. ಅವರಿಂದ ಶತ್ರುಗಳು ಕೂಡಾ ಸ್ಫೂರ್ತಿಯನ್ನು ಪಡೆಯುತ್ತಿದ್ದರು. ಅವರು ೧೯೭೫ರಲ್ಲಿ ಒಂದು ಸಮಾರಂಭದಲ್ಲಿ ಮಾತನಾಡುತ್ತಾ ವೇದಿಕೆಯ ಮೇಲೆಯೇ ಪ್ರಾಣಬಿಟ್ಟರು. ತಾವು ನಂಬಿದ ಸಿದ್ಧಾಂತಗಳಿಗೋಸ್ಕರ, ಸಮ ಸಮಾಜಕ್ಕಾಗಿ ಕೊನೆಯ ಉಸಿರಿರುವವರೆಗೂ ಕೃಷಿ ಮಾಡಿದ ಧನ್ಯಜೀವಿ ಗೋರಾ.

*(ಗೋರಾ ಅವರ ಜೀವನಚರಿತ್ರೆಯನ್ನು ನವಕರ್ನಾಟಕ ಪ್ರಕಾಶನ ಪ್ರಕಟಿಸಿದೆ)*

**ರಾಮಣ್ಣ ಆರೆಜ್ಜಿ**
೧-೪-೧೬೧, ಐ.ಬಿ.ಕಾಲೋನಿ, ರಾಯಚೂರು - ೫೮೪ ೧೦೧

---

*೫೩ನೇ ಪುಟದಿಂದ*

ಗುರುತಿಸಿಕೊಳ್ಳಬೇಕೇನೋ'' ಎಂದು ವಿಷಾದದಿಂದ ಹೇಳಿದಾಗ ಅವರ ಮುಖದಲ್ಲಿ ನೋವಿನ ಎಳೆ ಸ್ಪಷ್ಟವಾಗಿ ಮೂಡಿದ್ದು ಕಂಡು ಮನಸ್ಸಿಗೆ ನೋವಾಯಿತು. ಅನುಪಮಾರಂತಹ ಶ್ರೇಷ್ಠ ಕಾದಂಬರಿಕಾರ್ತಿಯ ವಿಚಾರದಲ್ಲೇ ಇಂತಹ ಅನಾದರವಾದರೆ ಬೇರೆ ಲೇಖಕಿಯರ ಪಾಡೇನು? ಆದರೆ ಮೌಲಿಕ ಸಾಹಿತ್ಯದ ಬಗ್ಗೆಯೂ ಅನುಪಮಾ ಅವರು ಅಷ್ಟೇ ಗಂಭೀರವಾಗಿ, ವೈಚಾರಿಕವಾಗಿ ಮಾತನಾಡಿದ್ದು ಗಮನಾರ್ಹ.

''ಸಾಹಿತ್ಯ ಕ್ಷೇತ್ರದಲ್ಲಿ ಮಹಿಳೆ ಮತ್ತು ಪುರುಷ ಎಂಬ ವ್ಯತ್ಯಾಸವನ್ನೇ ಮಾಡಬೇಕಿಲ್ಲ. ಉತ್ತಮವಾದ ಸಾಹಿತ್ಯ ಮಹಿಳೆ ಬರೆದರೇನು? ಪುರುಷ ಬರೆದರೇನು? 'ವುದರಿಂಗ್ ಹೈಟ್ಸ್' ಬರೆದ ಎಮಿಲಿ ಒಂದೇ ಕಾದಂಬರಿ ಬರೆದರೂ ಆಕೆ ಜಗತ್ತಿನಲ್ಲೇ ಶ್ರೇಷ್ಠ ಕಾದಂಬರಿ ಕಾರ್ತಿಯಾದಳು. ಆದ್ದರಿಂದ ಕನ್ನಡ ವಿಮರ್ಶಕರೂ ಈ ನಿಟ್ಟಿನಲ್ಲಿ ಮಹಿಳೆಯ ಕಾದಂಬರಿಗಳನ್ನು ಗುರುತಿಸಲಿ. ಆದರೆ ಪೂರ್ವಾಗ್ರಹ ಬೇಕಿಲ್ಲ'' ಎಂದು ಕಡ್ಡಿ ಮುರಿದಂತೆ ನುಡಿದರು.

ವೃತ್ತಿಯಲ್ಲಿ ವೈದ್ಯೆ; ಪ್ರವೃತ್ತಿಯಲ್ಲಿ ಬರಹಗಾರ್ತಿಯಾದ ಅನುಪಮಾ ಅವರು ಅನಾರೋಗ್ಯದ ನಡುವೆಯೂ ಛಲಗಾತಿಯಾಗಿ, ನೋವನ್ನು ನುಂಗಿಕೊಂಡು ಬರವಣಿಗೆಯೇ ಬದುಕಿನ ಸಂಜೀವಿನಿ ಎಂದು ಭಾವಿಸಿ ಜೀವನದಲ್ಲಿ ಚೈತನ್ಯ, ಲವಲವಿಕೆ ತುಂಬಿಕೊಂಡು ಹೊರಗೆ ನಗುನಗುತ್ತಾ ಇರುವುದು ಎಷ್ಟು ಜನಕ್ಕೆ ಸಾಧ್ಯ! ನಾನು ಮತ್ತೆ ಪ್ರಶ್ನಿಸಿದೆ: ''ನೀವು ಏಕೆ ವಿಮರ್ಶೆಯ ಬಗ್ಗೆ ನಿಮ್ಮ ಅಭಿಪ್ರಾಯಗಳನ್ನು ಪತ್ರಿಕೆಗಳಿಗೆ ತಿಳಿಸಲಿಲ್ಲ?''

ಅವರು ಹೇಳಿದರು– ''ನೋಡಿ ನನಗೆ ತೋಚಿದ್ದನ್ನು ಪ್ರಾಮಾಣಿಕವಾಗಿ ಬರೆಯುತ್ತೇನೆ. ಅವರ ವಿಮರ್ಶೆಯಿಂದ ನನ್ನ ಸಾಹಿತ್ಯಕ್ಕೆ ಒಂದು ನೆಲೆ ಸಿಗಬೇಕಿಲ್ಲ. ಓದುಗರಿಗೆ ಸುಲಭವಾಗಿ ಅರ್ಥವಾಗಬೇಕು; ನಾವು ಹೇಳುವುದು ಅವರ ಮನಸ್ಸನ್ನು ತಟ್ಟಬೇಕು; ಸಾಧ್ಯವಾದರೆ ತಿದ್ದಬೇಕು ಎಂದು ನಂಬಿರುವವಳು ನಾನು. ಆ ಮಟ್ಟಿನ ಪ್ರಯತ್ನವನ್ನು ನಾನು ಕಾದಂಬರಿಯಲ್ಲೂ, ಕಥೆಯಲ್ಲೂ ಮಾಡಿದ್ದೇನೆ. ಮಕ್ಕಳಿಗಾಗಿ ಬರೆದ ಕಥೆಗಳಲ್ಲಾಗಲೀ ವೈದ್ಯಕೀಯ ಲೇಖನಗಳಲ್ಲಾಗಲೀ ಎಲ್ಲದರಲ್ಲೂ ನನ್ನ ಗುರಿ ಒಂದೇ. ಸಾಹಿತ್ಯ ನಿಜಕ್ಕೂ ಕಳಪೆಯಾಗಿದ್ದರೆ ಅದನ್ನು ಟೀಕಿಸಲಿ. ಅಲ್ಲಿ ಪುರುಷ-ಸ್ತ್ರೀ ಎಂಬ ಭೇದ ಬೇಡ. ಆದರೆ ವಿಸ್ತೃತ ಪ್ರಪಂಚದ ಅರಿವಿಲ್ಲದೆ, ಆಕೆಗೆ ತಿಳಿದ ಪ್ರಪಂಚದ ಬಗ್ಗೆ ಪ್ರಾಮಾಣಿಕವಾಗಿ ಬರೆದರೆ – ಆ ಚೌಕಟ್ಟಿನಲ್ಲಿಯೇ ಆಕೆಯ ಸಾಹಿತ್ಯವನ್ನು ಗುರುತಿಸಲಿ. ಅಷ್ಟಾದರೂ ಆಕೆಯ ಬರವಣಿಗೆಗೆ ನ್ಯಾಯ ಸಿಗುತ್ತದೆ. ಆಕೆಯ ಸಾಹಿತ್ಯಕ್ಕೆ ನೆಲೆ ಸಿಗುತ್ತದೆ. ಆಕೆಗೂ ಗೌರವ ಸಿಗುತ್ತದೆ''. ಬಹುಶಃ ಎಲ್ಲ ಲೇಖಕಿಯರ ಬಗ್ಗೆ ಆಕೆ ಹೇಳಿದ ಮಾತು ಎಷ್ಟು ಅರ್ಥಪೂರ್ಣವಾದದ್ದು! ಎಂದು ಯೋಚಿಸುತ್ತಿದ್ದಂತೆ ಆಕೆಯ ಮಗಳು ಒಂದು ದೊಡ್ಡ ಗಾಜಿನ ಲೋಟದಲ್ಲಿ ತಣ್ಣನೆಯ ರುಚಿಯಾದ ಮಜ್ಜಿಗೆಯನ್ನು ತಂದುಕೊಟ್ಟಳು. ಬಿಸಿಲಲ್ಲಿ ಬಾಯಾರಿದ ನನಗೆ ಆ ಮಜ್ಜಿಗೆ ಅಮೃತ ಎನಿಸಿತು. ಅವರಿಗೆ ಹೆಚ್ಚಿಗೆ ತೊಂದರೆ ಕೊಡದೆ, ನಾನು ಕೇಳಬೇಕೆಂದಿದ್ದ ಪ್ರಶ್ನೆಗಳ ಪ್ರತಿಯನ್ನು ಅವರ ಕೈಯಲ್ಲಿರಿಸಿ ಅವರಿಗೆ ನಮಸ್ಕರಿಸಿ ಹೊರಬಿದ್ದೆ. ಆದರೆ ಅನಿವಾರ್ಯ ಕಾರಣಗಳಿಂದಾಗಿ, ದೂರದರ್ಶನದವರು ಅವರ ಮನೆಗೆ ಹೋಗಿ ಸಂದರ್ಶನ ನಡೆಸದೆ ಇದ್ದುದರಿಂದ ಅವರನ್ನು ಸಂದರ್ಶಿಸುವ ಕನಸು ಕನಸಾಗಿಯೇ ಉಳಿಯಿತು.

**ಡಾ|| ಸಿ. ವಿ. ವತ್ಸಲಾ**
೪೯೮, ೪ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು - ೪೦



# ಈ ನೆಲದ ಸಂಸ್ಕೃತಿ ಮತ್ತು ನಾವು

ಕನ್ನಡದ ಸಂಸ್ಕೃತಿ ಅದೊಂದು ಜನಮುಖಿ ಸಂಸ್ಕೃತಿ. ಈ ಸಂಸ್ಕೃತಿಯ ಬೇರುಗಳು ಜಾನಪದ ಬದುಕಿನಲ್ಲಿ ಹಾಸು ಹೊಕ್ಕಾಗಿವೆ. ಯಾವುದರ ನಿರ್ಬಂಧ ಇಲ್ಲದೆ ಸರಳ ಬದುಕಿನಲ್ಲಿಯೇ, ಜಾತಿ, ಮತ, ಪಂಥಗಳ ಎಲ್ಲೆಗಳನ್ನು ಮೀರಿ ಬದುಕಿದ ಜನಪದರು ನಮ್ಮ ಇವತ್ತಿನ ಸಂಘರ್ಷಕ್ಕೆ ನಿಜವಾದ ಮಾದರಿ. ಕನ್ನಡದ ನೆಲದಲ್ಲಿ ಹುಟ್ಟಿದ ಯಾವನಿಗಾದರೂ ಇದು ತಟ್ಟಬೇಕು. ಅಂಥವನು ಮಾತ್ರ ಅಖಂಡ ಕರ್ನಾಟಕದ ಅನುಭೂತಿಯನ್ನು ಗ್ರಹಿಸಬಲ್ಲ ಮತ್ತು ಅನುಭವಿಸಬಲ್ಲ.

ಕರ್ನಾಟಕದ ಪರಂಪರೆಯಲ್ಲಿ ಎರಡು ಪ್ರಮುಖ ದಾಖಲಾರ್ಹ ಸಂಗತಿಗಳೆಂದರೆ ಒಂದು ೧೨ನೇ ಶತಮಾನದ ಶರಣರ ಚಳುವಳಿ, ಎರಡನೆಯದು ೧೬ನೇ ಶತಮಾನದಲ್ಲಿ ಬಂದ ಹರಿದಾಸ ಪರಂಪರೆ.

ಇಲ್ಲಿ ಗಮನಿಸಬೇಕಾದದ್ದು, ಜನಿವಾರ ಹಾಕಿದರೂ ಬ್ರಾಹ್ಮಣ ಧರ್ಮದ ಸಂಸ್ಕಾರದಲ್ಲಿಯೇ ಬೆಳೆದ ದಾಸರು ನಮ್ಮ ಪರಂಪರೆಯಲ್ಲಿ ಬ್ರಾಹ್ಮಣರಾಗಿ ಕಾಣಿಸದೇ ಇರುವದು. ಹರಿಯನ್ನು ನಂಬಿದ ದಾಸರು ಆತ್ಮೋದ್ಧಾರದ ಹಾದಿಯಲ್ಲಿ ಸಾಗಿದರು. ಸಾಮಾಜಿಕ ವಿಡಂಬನೆ, ಡಾಂಭಿಕ ಭಕ್ತಿ, ಮಾನವ ಸಂಬಂಧಗಳ ಮೌಲ್ಯಗಳ ಬಗ್ಗೆ ಅವರು ಹೇಳುವ ವಿಚಾರಗಳು ತುಂಬ ಮಹತ್ವದ್ದೆನಿಸುತ್ತವೆ. ಅತಿ ಮುಖ್ಯವಾಗಿ ಅವರು ಭಕ್ತಿ ಪಾರಮ್ಯವನ್ನು ಮುಟ್ಟಿದವರು. ಆತ್ಮೋದ್ಧಾರದ ಪದ್ಯಗಳೇ ಅವರಲ್ಲಿ ಜಾಸ್ತಿ. ಅಂತಹ ಯಾವುದೇ ಪದ್ಯಗಳ ಆಳದಲ್ಲಿರುವದು ಮಾತ್ರ ಅಪಾರವಾದ ಮಾನವ ಪ್ರೀತಿ.

ಸಾಂಸ್ಕೃತಿಕ ಪರಂಪರೆಯಲ್ಲಿ ದಾಖಲಾಗುವ ಹಲವು ಪ್ರಮುಖ ಘಟನೆಗಳು, ಸಂದರ್ಭಗಳು, ಪ್ರದೇಶಗಳು ಎಂದರೆ ಅವು ನಮ್ಮೊಳಗಿನ ಸಾಂಸ್ಕೃತಿಕ ಅಂತಃಸತ್ವ. ಬೀದರಿನ ಮಣ್ಣು ಕಲ್ಯಾಣ ಕ್ರಾಂತಿಯ ಕತೆ ಹೇಳಿದರೆ, ಹೈದ್ರಾಬಾದ್ ಕರ್ನಾಟಕದ ರಾಯಚೂರಿನ ಹರಿದಾಸರು ಇಂಥ ಅಂತಃಸತ್ವದ ಪ್ರತಿಪಾದಕರಾಗಿ ಕಾಣುತ್ತಾರೆ.

ಆ ಪ್ರದೇಶದಲ್ಲಿ ವಾಸಿಸುವ, ಆ ಪ್ರದೇಶಕ್ಕೆ ಭೇಟಿ ನೀಡುವ ವ್ಯಕ್ತಿಗಳಿಗೆ ಇಂಥ ಸಂದರ್ಭಗಳು ಕಾಡಬೇಕು.

ಇತ್ತೀಚಿಗೆ ಬಿಜಾಪೂರ ಜಿಲ್ಲೆಯ ಬಸವನ ಬಾಗೇವಾಡಿ 'ತಾಲೂಕ ಸಾಹಿತ್ಯ ಸಮ್ಮೇಳನ' ನಡೆಯಿತು. ಬಸವನ ಬಾಗೇವಾಡಿ ತಾಲೂಕ ಕೇಂದ್ರದಲ್ಲಿ ಈ ಸಮ್ಮೇಳನವನ್ನು ಸಂಘಟಿಸಿದ್ದರು. ಕೊಪ್ಪಳದಿಂದ ಮಿತ್ರರ ಜೊತೆಗೂಡಿ ಹೋದೆ. ನಮ್ಮ ವಾಹನ ಬಸವನ ಬಾಗೇವಾಡಿ ತಾಲೂಕ ಪ್ರವೇಶ ಮಾಡಿದೊಡನೆ 'ಜಾಗತಿಕವಾಗಿ ಅಪರೂಪದ ಕ್ರಾಂತಿ ಮಾಡಿ ಹೋದ ಬಸವಣ್ಣನ ಹುಟ್ಟಿದ ನೆಲ ಇದು' ಎಂಬ ಮಾತು ಶುರುವಾಯಿತು. ಆ ಮಣ್ಣಿಗಿರುವ ಪಾವಿತ್ರ್ಯವನ್ನು ಒಂದರ್ಥದಲ್ಲಿ ಭಕ್ತಿಪೂರ್ವಕವಾಗಿ ಕೊಂಡಾಡಿದೆವು. ಸಮ್ಮೇಳನದ ಜಾಗಕ್ಕೆ ಹೋಗಿ ತಲುಪಿದಾಗ ಬೆಳಗ್ಗೆ ಹನ್ನೊಂದು ಗಂಟೆಯಾಗಿತ್ತು. ಬಾಗೇವಾಡಿಯ ಬಸವೇಶ್ವರ ದೇವಾಲಯದ ಪಕ್ಕಕ್ಕಿರುವ ಸಭಾಂಗಣದಲ್ಲಿ ಸಮ್ಮೇಳನ ನಡೆಯುತ್ತಿತ್ತು. ಗುಡಿಯ ಮುಖ್ಯದ್ವಾರದ ಒಳಗಡೆ ಹೋಗಿಯೇ ಸಮ್ಮೇಳನದ ಜಾಗಕ್ಕೆ ಹೋಗಬೇಕು. ಈ ನಂದೀಶ್ವರನಿಗೆ ಬಸವಣ್ಣ ಬಾಲ್ಯದಲ್ಲಿ ಪೂಜೆ ಸಲ್ಲಿಸುತ್ತಿದ್ದ ಸಂಗತಿಯನ್ನು ಜನ ಈಗಲೂ ಹೇಳುತ್ತಾರೆ.

ಗರ್ಭಗುಡಿಯ ಪಕ್ಕಕ್ಕೆ ಹೆಣ್ಣುಮಗಳೊಬ್ಬಳು ಪಾದರಕ್ಷೆ ಕಾಯುತ್ತಿದ್ದಳು. ಅವರಿಗೆ ೫೦ ವರ್ಷ ವಯಸ್ಸಾಗಿರಬಹುದು. ಇಲಕಲ್ ಸೀರೆ ಉಟ್ಟಿದ್ದಾರೆ. ಮುಖದಲ್ಲಿ ಚಿಮ್ಮುವ ಜೀವನೋತ್ಸಾಹ. ನನ್ನ ಜೊತೆಗಿರುವ ಮಿತ್ರರು ಅವರನ್ನು ನನಗೆ ಪರಿಚಯಿಸಿದರು. ''ಇವರ ಹೆಸರು ಚಂದ್ರಮ್ಮಾ, ದೆಹಲಿ ಆಕಾಶವಾಣಿಯಲ್ಲಿ ವಾರ್ತೆ ಓದುವ ಶ್ರೀ ಬಸಪ್ಪ ಮಾದರ ಅವರ ತಾಯಿ ಇವರು'' ಎಂದರು. ಪಾದರಕ್ಷೆ ಕಾಯಲು ಅವರು ಹಣ ಕೇಳುವದಿಲ್ಲ, ಕೊಟ್ಟರೆ ಸೌಜನ್ಯದಿಂದ ಪಡೆಯುತ್ತಾರೆ ಎಂದು ತಿಳಿಯಿತು. ಅವ್ವನ ಜೊತೆಗೆ ಮಾತನಾಡಿದಂತೆ ಅವರ ಜೊತೆಗೆ ಮಾತು ಶುರುಮಾಡಿದೆ. ಸ್ವಲ್ಪ ಬಿಸಿಲಲ್ಲಿ ನಿಂತಿದ್ದೆ. 'ಯಪ್ಪಾ ಈ ಕಡೆ ಬಾರ ಮಗನ ಬಿಸಿಲ ಚುರುಗುಟ್ಟೈತಿ' ಅಂದರು ಚಂದ್ರಮ್ಮ.

''ಅಲ್ಲಬೇ ಅನುಕೂಲಸ್ಥರಾಗಿರಿ ಈ ಕೆಲಸ ಬಿಡಬೇಕು'' ಅಂದೆ. ತಕ್ಷಣ ಅವರು ಉತ್ತರಿಸಿದರು ''ಯಪ್ಪಾ ಇದು ಸೇವಾ'' ಎಂದು. ನಾನು ಆಧುನಿಕ ಮನಸ್ಥಿತಿಯವನು. ಅನುಕೂಲಸ್ಥರಾದರೆ ಅಂಥ ಕೆಲಸ ಬಿಡಬೇಕು ಎಂಬ ತಿಳುವಳಿಕೆಯುಳ್ಳವನು. ಆ ಕೆಲಸ ಸಣ್ಣದು, ಕೆಳಮಟ್ಟದ್ದು ಎನ್ನುವ ಭಾವನೆ ನನಗಿದೆ. ಆದರೆ ಅವರ ತಿಳುವಳಿಕೆ ಸದ್ಯದ ನನ್ನ ಆಲೋಚನೆಯನ್ನು ಮೀರಿದೆ. ಅದಕ್ಕೊಂದು ಔನ್ನತ್ಯ ಪ್ರಾಪ್ತವಾಗಿದೆ. ಅವರ 'ಸೇವೆ' ಎನ್ನುವ ಪದ ನನ್ನ ಮುಖಕ್ಕೆ ಹೊಡೆದಂತೆ ಹೇಳಿದ ಹಾಗೆ ಭಾಸವಾಯಿತು. ನನ್ನಲ್ಲೆ ದೋಷವಿದೆ. ಅವರು ತಿಳಿದುಕೊಂಡ ಭಾವನೆಯಲ್ಲಿ ತಪ್ಪಿಲ್ಲ ಅಂದುಕೊಂಡೆ.

ನುಲಿಯ ಚಂದಯ್ಯ ಹಗ್ಗ ಹೊಸೆಯುತ್ತಲೇ, ಪಡಿಹಾರವತ್ತಣ ಬಾಗಿಲು ಕಾಯುತ್ತಲೇ, ಮಾದಾರ ಧೂಳಯ್ಯ ಕೆರ ಹೊಲಿಯುತ್ತಲೇ ಆಂತರಿಕ ವಿಕಾಸದ ತುತ್ತ ತುದಿ ಏರಿದ ಸಂದರ್ಭ ಜ್ಞಾಪಕಕ್ಕೆ ಬಂತು. ಬಸವಣ್ಣನ ನೆಲದಲ್ಲಿ ಆ ಹೆಣ್ಣು ಮಗಳು ಹೇಳಿದ ಮಾತು ನಿಜವಾಗಿಯೂ ಈ ನೆಲದ ಸಂಸ್ಕಾರ. ಇನ್ನೂ ಸಾಹಿತ್ಯ ಸಮ್ಮೇಳನದ ಸಭಾಂಗಣಕ್ಕೆ ಹೋಗಿಲ್ಲ, ಸಾಹಿತ್ಯ ಸಮ್ಮೇಳನದ ಅರ್ಥ ಸಾರ್ಥಕತೆ ಇಲ್ಲಿಯೇ ಬಂತು ಅಂದುಕೊಂಡು ಕೈ ಮುಗಿದು (ದೇವರಿಗಲ್ಲ) ಸಮ್ಮೇಳನದ ಸಭಾಂಗಣಕ್ಕೆ ಬಂದೆವು.

ಸಮ್ಮೇಳನ ಆಗಲೇ ಪ್ರಾರಂಭವಾಗಿತ್ತು. ಸಮ್ಮೇಳನದ ಅಧ್ಯಕ್ಷರಾದವರು ಅದೇ ತಾಲೂಕಿನ ಕಾಕಾಸಾಹೇಬ ಬಿಜಾಪೂರ. ಕಾ. ಹು. ಬಿಜಾಪೂರ ಎಂದೆ ಆ ಭಾಗದಲ್ಲಿ ಅವರು ಪ್ರಸಿದ್ಧರು. ಅವರೊಬ್ಬ ಸಂತರು. ವೃತ್ತಿಯಿಂದ ರೈತರು, ಪ್ರವೃತ್ತಿಯಿಂದ ಸಾಹಿತಿಗಳು. ಚೀನಾ-ಭಾರತ ಯುದ್ಧ ಕಾಲದಲ್ಲಿ ಅವರು ಯುದ್ಧ ವಿರೋಧಿ ಕವಿತೆಗಳನ್ನು ಬರೆದಿದ್ದಾರೆ. ಹಲವಾರು ನಾಟಕಗಳನ್ನೂ ಬರೆದಿದ್ದಾರೆ.

ಇಡೀ ಸಮ್ಮೇಳನ ಗಮನಿಸಿದೆ. ಒಂದು ಅಂಶ ಬೆಳಕಿಗೆ ಬಂತು. ಹಲವಾರು ಸಮಾರಂಭಗಳನ್ನು ನೋಡುತ್ತೇವೆ. ಸಂಗೀತ ಸಾಹಿತ್ಯದಂತಹ ಕಾರ್ಯಕ್ರಮಗಳಲ್ಲಿ ಗಮನವಿಟ್ಟು ಕೇಳಿದರೆ ಇದು ಎಲ್ಲರ ಗಮನಕ್ಕೂ ಬರುತ್ತದೆ. ಹಲವಾರು ಸಾಂಸ್ಕೃತಿಕ ಸಮಾರಂಭಗಳಲ್ಲಿ ಭಾಷಣಕಾರರು ಬಿಸ್ಮಿಲ್ಲಾಖಾನ್, ಅಲ್ಲಾರಖಾ, ಇಂಥವರ ಬಗ್ಗೆ ಹೇಳುತ್ತಾರೆ. ಅವರು ಮುಸ್ಲಿಂರಾದರೂ ಹಿಂದೂಸ್ತಾನಿ ಸಂಗೀತದಲ್ಲಿ ಎಂಥ ಸಾಧನೆ ಮಾಡಿದ್ದಾರೆ ಎನ್ನುತ್ತಾರೆ. ಇಲ್ಲಿ ''........ರೂ'' ಎನ್ನುವ ದೀರ್ಘ ಅಕ್ಷರವನ್ನು ಗೊತ್ತಿದ್ದೂ, ಗೊತ್ತಿಲ್ಲದೆಯೂ ಬಳಸುವದು ರೂಢಿಯಾಗಿದೆ. ಸೂಕ್ಷ್ಮವಾಗಿ ನೋಡಿದರೆ 'ರೂ' ಅಕ್ಷರದಲ್ಲಿ ಒಂದು ರೀತಿಯ ದಾಕ್ಷಿಣ್ಯವಿದೆ. ಅವರು ಪ್ರಸಿದ್ಧ ಕಲಾವಿದರು ಅಷ್ಟೆ. 'ಆದರೂ' ಎನ್ನುವ ಪದದಲ್ಲಿ ಅಂತರ ಕಾಣುತ್ತದೆ. ಅವರನ್ನು ಕಲಾವಿದರಾಗಿ ನೋಡುವದರಿಂದ ಇಲ್ಲಿ ಜಾತಿ, ಮತ, ಪಂಥ ಅಡ್ಡ ಬರುವುದಿಲ್ಲ ಎಂಬುದನ್ನು ಗಮನಿಸಬೇಕು. ಇಡೀ ಸಮಾರಂಭವನ್ನು ಗಮನಿಸಿದೆ. ಸಮ್ಮೇಳನದುದ್ದಕ್ಕೂ ಕಾ.ಹು.ಬಿಜಾಪೂರ ಅವರ ಬಗ್ಗೆ ಅಪ್ಪಿತಪ್ಪಿಯೂ ಅಲ್ಲಿ ''ಆದರೂ'' ಎನ್ನುವ ಪದ ಬಳಕೆಯಾಗಲಿಲ್ಲ.

ಇಂಥದ್ದೊಂದು ಬೆಲೆಯುಳ್ಳ ಸಂಸ್ಕೃತಿಯನ್ನು ನಮ್ಮ ಜನಪದರು ಎಷ್ಟೊಂದು ಶ್ರದ್ಧೆಯಿಂದ ಕಟ್ಟಿದ್ದಾರೆ! ಒಂದು ನೆಲ ಒಂದು ಮಣ್ಣು ನಮ್ಮನ್ನು ಕಾಡಬೇಕು ಎಂದು ಹೇಳುವುದು ಈ ಕಾರಣಕ್ಕಾಗಿ. ಬರೀ ನಮ್ಮ ಅಕಾಡೆಮಿಕ್ ಸಾಂಸ್ಕೃತಿಕ ಪಠ್ಯಗಳು ನಮ್ಮ ಸಾಂಸ್ಕೃತಿಕ ಬದುಕನ್ನು ರೂಪಿಸಲಾರವು. ಇಂಥದ್ದನ್ನು ಪರಿಭಾವಿಸಿಕೊಳ್ಳುವದು ತುಂಬ ಮುಖ್ಯ ಎಂಬುದು ನನ್ನ ಭಾವನೆ.

ಬಸವರಾಜ ಹೂಗಾರ
ಸಹಾಯಕ ನಿರ್ದೇಶಕ
ಕನ್ನಡ ಸಂಸ್ಕೃತಿ ಇಲಾಖೆ, ಬಿ. ಟಿ. ಪಾಟೀಲ ನಗರ
ಕೊಪ್ಪಳ - ೫೮೩೨೩೧

**HOSATHU** Kannada Monthly / May 2004 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14




Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

© All rights reserved. Reproduction in whole or in part without permission is prohibited.